# ಯೋಽಂತಃ ಪ್ರವಿಶ್ಯ...

ಶ್ರೀವಿಶ್ವೇಶತೀರ್ಥರ ಉಪನ್ಯಾಸಗಳಲ್ಲಿ, ಬರವಣಿಗೆಗಳಲ್ಲಿ ಮೂಡಿಬಂದ ಚಿಂತನೆಗಳು



...ನಮೋ ಭಗವತೇ ಪುರುಷಾಯ ತುಭ್ಯಮ್



ತತ್ತ್ವಸಂಶೋಧನ ಸಂಸತ್ (ರಿ
ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆ
ಶ್ರೀಪಲಿಮಾರು ಮಠ - ಉಡು



ಸುಪರ್ಣಾ ಋಷಯೋ ವ್ಯಾಸಂ ನಾಥಮಾನಾ ಯಯುಃ ಸದಾ ।
ಭ್ರಾಂತಿಂ ನಿವಾರಯಾಸ್ಮಾಕಂ ಮುಮುಗ್ಧೀತಿ ಚ ವಾದಿನಃ ॥

|| ಶ್ರೀರಾಮಶ್ರೀ ||

# 'ಯೋಽಂತಃ ಪ್ರವಿಶ್ಯ'

(ಶ್ರೀ ವಿಶ್ವೇಶತೀರ್ಥರ ಉಪನ್ಯಾಸಗಳಲ್ಲಿ, ಬರವಣಿಗೆಗಳಲ್ಲಿ ಮೂಡಿಬಂದ ನೂರಾರು ಅಪೂರ್ವ ಚಿಂತನೆಗಳು)


ಅನುಗ್ರಹ :

**ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**

ಶ್ರೀಹೃಷೀಕೇಶತೀರ್ಥಪೀಠಮ್, ಶ್ರೀ ಪಲಿಮಾರು ಮಠ, ಉಡುಪಿ

ಸಂಪಾದನ - ಸಂಕಲನ :

ಸಗ್ರಿ ರಾಘವೇಂದ್ರ ಉಪಾಧ್ಯಾಯ

ವಿಶ್ವೇಶಪ್ರಿಯ ದಾಸ ಓಂಪ್ರಕಾಶ ಭಟ್ಟ





ಪ್ರಕಾಶಕರು :

**ತತ್ವಸಂಶೋಧನಸಂಸತ್ (ರಿ.)**

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ

ಶ್ರೀಪಲಿಮಾರು ಮಠ, ಉಡುಪಿ.

'ಯೋಽಂತಃ ಪ್ರವಿಶ್ಯ' - (ಶ್ರೀ ವಿಶ್ವೇಶತೀರ್ಥರ ಉಪನ್ಯಾಸಗಳಲ್ಲಿ, ಬರವಣಿಗೆಗಳಲ್ಲಿ ಮೂಡಿ ಬಂದ ನೂರಾರು ಅಪೂರ್ವ ಚಿಂತನೆಗಳು).

**ಸಂಪಾದಕರು** - ಸಗ್ರಿ ರಾಘವೇಂದ್ರ ಉಪಾಧ್ಯಾಯ
ವಿಶ್ವೇಶಪ್ರಿಯ ದಾಸ ಓಂಪ್ರಕಾಶ ಭಟ್ಟ
ಮೊ: 99640 25922

**ಪ್ರಕಾಶಕರು** - ತತ್ವಸಂಶೋಧನ ಸಂಸತ್, ಶ್ರೀ ಪಲಿಮಾರು ಮಠ, ಉಡುಪಿ.

(ಬೆಂಗಳೂರು ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಧನುರ್ಮಾಸ ಶುಕ್ಲತೃತೀಯ (17.12.2020) ದಂದು ನಡೆದ ಶ್ರೀ ವಿಶ್ವೇಶತೀರ್ಥರ ಪ್ರಥಮಾರಾಧನೆಯ ಪ್ರಸಂಗದಲ್ಲಿ ನೂತನವಾಗಿ ನಿರ್ಮಿತವಾದ ವೃಂದಾವನದಲ್ಲಿ ಸನ್ನಿಹಿತರಾದ ಶ್ರೀಪಾದರ ಅಂತರ್ಯಾಮಿ ಶ್ರೀವೇದವ್ಯಾಸರಿಗೆ ಜ್ಞಾನಪುಷ್ಪವಾಗಿ ಸಮರ್ಪಿತ).



**ಪುಟಗಳು** - XX + 206 = 226

**ಮುದ್ರಿತ ಪ್ರತಿಗಳು** - 1000

**ಬೆಲೆ** - **ರೂ. 175/-**

**ಅಕ್ಷರ ಜೋಡಣೆ** - ವಿದ್ಯಾಶ್ರೀ ವಿ. ಕಟ್ಟಿ, ಕಲ್ಬುರ್ಗಿ

**ಪುಟ ಸಂಯೋಜನೆ** - ಎಂ. ಶರತ್ ಚಂದ್ರ, ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್
ಮೈಸೂರು. ಮೊ : 7899779255

**ಮುಖಪುಟ ವಿನ್ಯಾಸ** - ರಘುನಂದನ ಶರ್ಮ, ಉಡುಪಿ.
ಮೊ : 7892431365

**ಮುದ್ರಕರು** - ಪವನ್ ಪ್ರಿಂಟರ್ಸ್, ಚಾಮರಾಜಪೇಟೆ, ಬೆಂಗಳೂರು
ಮೊ : 9686489131

## ಮುಖಪುಟ ಸಂದೇಶ

# ವಾಸುದೇವನ ಸಂಸ್ಮರಣೆ

ಶ್ರೀವಿಶ್ವೇಶತೀರ್ಥರು ತಮ್ಮ ಪ್ರವಚನಗಳಲ್ಲಿ, ಉಪನ್ಯಾಸಗಳಲ್ಲಿ ಮೊದಲ ಮಂಗಲಾಚರಣೆಯಾಗಿ ತಪ್ಪದೆ ಪಠಿಸುತ್ತಿದ್ದ ಶ್ಲೋಕ– **'ಯೋಽಂತಃ ಪ್ರವಿಶ್ಯ ...'**

ಶ್ರೀಪಾದರ ಪ್ರವಚನಗಳಲ್ಲಿ, ಉಪನ್ಯಾಸಗಳಲ್ಲಿ ಪ್ರಸ್ತುತಗಳಾದ ಚಿಂತನೆಗಳನ್ನು ಅಧ್ಯಯನ ಮಾಡುವ ಮುನ್ನ ಅವರ ಆ ಮಂಗಲಾಚರಣೆಯ ಪದ್ಯವನ್ನು ಸ್ಮರಿಸಿಕೊಳ್ಳುವಂತಾಗಬೇಕೆಂದು ಈ ಕೃತಿಗೆ **'ಯೋಽಂತಃ ಪ್ರವಿಶ್ಯ...'** ಎಂದೇ ಹೆಸರಿಡಲಾಗಿದೆ.

ಭಕ್ತ ಧ್ರುವನ ತಪಸ್ಸಿಗೆ ಒಲಿದು ಬಂದ ವಾಸುದೇವನನ್ನು ಸ್ತುತಿಸಲು ವಿನಿಯೋಗಿಸಲ್ಪಟ್ಟ ಮೊದಲ ಪದ್ಯವೇ ಇದು. ಎದುರು ಕಾಣಿಸಿಕೊಂಡ ವಾಸುದೇವನನ್ನು ಸ್ತುತಿಸಬೇಕೆಂದು ಹೊರಟ ಧ್ರುವನ ಹೊರಹೊಮ್ಮದೆ ಸುಪ್ತವಾಗಿದ್ದ ವಾಗಿಂದ್ರಿಯಕ್ಕೆ ತನ್ನ ಪಾಂಚಜನ್ಯಶಂಖದ ಸ್ಪರ್ಶದಿಂದ ಉದ್ಬೋಧ ನೀಡಿದ್ದ ಅವನ ವಾಗಿಂದ್ರಿಯವೇ ಮುಂತಾದ ಪ್ರತಿಯೊಂದು ಇಂದ್ರಿಯಕ್ಕೂ ಚಾಲನೆ ನೀಡುವ, ತಾನು ಆಗತಾನೇ ಅನುಭವಿಸಿದ ಹೃಷೀಕೇಶ ಎನಿಸುವ ವಾಸುದೇವನ ಆ ಮಹಿಮೆಯನ್ನೇ ಸ್ಪಷ್ಟಪಡಿಸಿ ನಡೆಸಲಾದ ಈ ಸ್ತುತಿ ಮುಖ್ಯವಾಗಿ ಧ್ರುವವರದ ವಾಸುದೇವನ ಕುರಿತಾಗಿ ಸಲ್ಲಿಸಲ್ಪಟ್ಟದ್ದು. ವಾಸುದೇವ ಹೃಷೀಕೇಶಾಭಿನ್ನನಾಗಿ ಈ ಸ್ತುತಿಗೆ ಪಾತ್ರನಾಗಿರುವನು. ಶ್ರೀಪಾದರು ತಾವು ಮುಂದೆ ನಡೆಸುವ ಪ್ರವಚನದಲ್ಲಿ ವಾಗಾಗಿ ಇಂದ್ರಿಯ ಪ್ರೇರಕನ ಅನುಗ್ರಹ ಸಿದ್ಧಿಸುವಂತೆ ಈ ನಿಟ್ಟಿನಲ್ಲಿ ಧ್ರುವನಿಗೆ ಅನುಗ್ರಹಿಸಿದ್ದ ವಾಸುದೇವನ ಅನುಸಂಧಾನದೊಂದಿಗೆ ಈ ಪದ್ಯವನ್ನು ನಿಯತವಾಗಿ ಪಠಿಸುತ್ತಿದ್ದರು.

ಧ್ರುವನಿಗೆ ಅನುಗ್ರಹಿಸಿದ್ದ ವಾಸುದೇವ ಹೇಗಿದ್ದಿರಬಹುದು! ಎಂಬ ನಮ್ಮ ಕುತೂಹಲವನ್ನು ಸ್ವಲ್ಪ ಮಟ್ಟಿಗೆ ತಣಿಸಲು ಶ್ರೀಪಾದರ ಪಂಚಮ ಪರ್ಯಾಯಾವಧಿ ಯಲ್ಲಿ ಪೊಡವಿಗೊಡೆಯನಿಗೆ ವಾಸುದೇವಾದಿ ಚತುರ್ಮೂರ್ತಿಗಳ ಅಲಂಕಾರವನ್ನು ಕ್ರಮೇಣ ತೊಡಿಸುತ್ತಿದ್ದ ಶ್ರೀವಿಶ್ವಪ್ರಸನ್ನತೀರ್ಥರು ಪೊಡವಿಗೊಡೆಯನನ್ನು ಮೋಕ್ಷಪ್ರದ ವಾಸುದೇವರೂಪಿಯನ್ನಾಗಿ ಅಲಂಕರಿಸಿರುವ ಪರಿ ಇದಾಗಿದೆ.

**'ವಾಸುದೇವಾದಿಕಾಃ ಶುಕ್ಲ-ರಕ್ತ-ಪೀತಾಸಿತೋಜ್ಜ್ವಲಾಃ । ಚಕ್ರ-ಶಂಖ-ಗದಾಬ್ಜೇತಃ ಪ್ರಥಮೋ ..............'** ಎಂದು ಶ್ರೀಮದಾಚಾರ್ಯರು ತಮ್ಮ

ತಂತ್ರಸಾರಸಂಗ್ರಹದಲ್ಲಿ (1-22, 23) ತಿಳಿಸಿರುವಂತೆ ವಾಸುದೇವ ಬಿಳಿ ಬಣ್ಣದವನು. ಮೇಲಿನ ಕೈಗಳಲ್ಲಿ ಚಕ್ರಶಂಖಗಳನ್ನೂ ಕೆಳಗಿನ ಕೈಗಳಲ್ಲಿ ಗದಾ-ಪದ್ಮಗಳನ್ನೂ ಧರಿಸಿರುವನು. ವಾಸುದೇವನ ಬಿಳಿ ಬಣ್ಣದ ಅನುಸಂಧಾನಕ್ಕಾಗಿಯೇ ಶುಕ್ಲಾಂಬರವನ್ನೇ ತೊಡಿಸಲಾಗಿದೆ.

ಶ್ರೀಪಾದರಿಂದ ತಮ್ಮ 89 ವರ್ಷಗಳ ಜೀವಿತಾವಧಿಯಲ್ಲಿ ನೂರಾರು ಬಾರಿ **'ಯೋಽಂತಃ ಪ್ರವಿಶ್ಯ....'** ಎಂಬ ಪದ್ಯದ ಮೂಲಕ ಸ್ಮರಿಸಿಕೊಳ್ಳಲ್ಪಟ್ಟು ಅವರಿಗೆ ವಾಗಿಂದ್ರಿಯದ ಸಂಜೀವನದಲ್ಲೂ, ಹಸ್ತಾದಿ ಇತರ ಇಂದ್ರಿಯಗಳ ತೊಡಗಿಸುವಿಕೆಯಲ್ಲೂ ಅನುಗ್ರಹಿಸಿದ್ದ ವಾಸುದೇವಾಭಿನ್ನನಾಗಿ ಮೆರೆಯುತ್ತಿರುವ ಪೊಡವಿಗೊಡೆಯ ಶ್ರೀಪಾದರ ಮೇಲೆ ಹರಿಸಿದ ಅನುಗ್ರಹದ ಹೂರಣವನ್ನು ಅನುಸಂಧಾನಕ್ಕೆ ತಂದುಕೊಂಡು ಅವರ ವಾಙ್ಮಯದ ಆಸ್ವಾದದಲ್ಲಿ ತೊಡಗೋಣ.

### ಎರಡನೆಯ ಕವಚ ಪುಟ ಸಂದೇಶ

## ವೇದವ್ಯಾಸರಲ್ಲಿ ಋಷಿಗಳ ಪ್ರಾರ್ಥನೆ

**'ವಯಃ ಸುಪರ್ಣಾ ಉಪಸೇದುರಿಂದ್ರಂ......'** ಎಂಬ ಋಗ್ವೇದದ ಮಂತ್ರದಲ್ಲಿ (10-73-1) ಅಜ್ಞಾನರೂಪದ ಕತ್ತಲನ್ನು ದೂರ ಮಾಡಿ ವಿಜ್ಞಾನ ದೃಷ್ಟಿಯನ್ನು ತುಂಬಿಸಲು ಋಷಿಗಳು ಶ್ರೀವೇದವ್ಯಾಸರಲ್ಲಿ ಪ್ರಾರ್ಥಿಸಿರುವುದನ್ನು ಪ್ರಸ್ತಾಪಿಸಿದ್ದು ಅದನ್ನು ವ್ಯಾಸತಂತ್ರ (ಭಾ.ತಾ.ನಿ.11.4.19) ಹೀಗೆ ಸ್ಪಷ್ಟಪಡಿಸಿದೆ-

**ಸುಪರ್ಣಾ ಋಷಯೋ ವ್ಯಾಸಂ ನಾಥಮಾನಾ ಯಯುಃ ಸದಾ ।**
**ಭ್ರಾಂತಿಂ ನಿವಾರಯಾಽಸ್ಮಾಕಂ ಮುಮುಗ್ಧೀತಿ ಚ ವಾದಿನಃ ॥**

ಸುಖರೂಪಿಯಾದ ಶ್ರೇಷ್ಠ ಪರಮಾತ್ಮನನ್ನು ಮಾನಸಿಕವಾಗಿ ಹೊಂದಿರುವುದರಿಂದ, ಸುಖರೂಪಿಯಾದ ಶ್ರೇಷ್ಠ ಪರಮಾತ್ಮನನ್ನು ಶಿಷ್ಯರ ಬಳಿಗೆ ತಪ್ಪಿಸುವುದರಿಂದ, ಹಾಗೂ ತಾವು ಚೆನ್ನಾಗಿ ಜಿಜ್ಞಾದಿಗಳಿಂದ ಪೂರ್ಣರಾಗಿರುವುದರಿಂದ, ಅನ್ವರ್ಥಕವಾಗಿ 'ಸುಪರ್ಣ' ಎನಿಸಿರುವ, ಋಷಿಗಳು ನಮ್ಮ ಭ್ರಾಂತಿಯನ್ನು ಪರಿಹರಿಸು; ವಿಜ್ಞಾನ ದೃಷ್ಟಿಯನ್ನು ತುಂಬಿಸು ಎಂದು ಹೇಳುತ್ತಾ ಯಾವಾಗಲೂ ಪ್ರಾರ್ಥಿಸುವವರಾಗಿ ವ್ಯಾಸರೂಪಿ ಪರಮಾತ್ಮನನ್ನು ಸಮೀಪಿಸಿದರು.

ಹೀಗೆ ಋಷಿಗಳಿಂದ ಪ್ರಾರ್ಥಿತರಾದ ಶ್ರೀವೇದವ್ಯಾಸರ ಪರಮಾನುಗ್ರಹದ ಬಲದಿಂದಾಗಿ ಶ್ರೀವಿಶ್ವೇಶತೀರ್ಥರಿಂದ ಇಂತಹ ಅಮೂಲ್ಯ ಚಿಂತನ ಕುಸುಮಗಳು ಅರಳಿವೆ ಎಂಬ ಅನುಸಂಧಾನದೊಂದಿಗೆ ಅವುಗಳನ್ನು ಆಘ್ರಾಣಿಸೋಣ.

## ಮೂರನೆಯ ಕವಚ ಪುಟ ಸಂದೇಶ

### ತಸ್ಮಿನ್ನಪೋ ಮಾತರಿಶ್ವಾ ದಧಾತಿ

ಯಾಜ್ಞೀಯೋಪನಿಷತ್ತಿನಲ್ಲಿ **'ಅನೇಜದೇಕಂ..............'** ಇತ್ಯಾದಿಯಾಗಿ ನಿರ್ಭಯತ್ವ, ಪ್ರಾಧಾನ್ಯಾದಿ ಗುಣ ಸಂಪನ್ನನಾಗಿ ಪ್ರಸ್ತುತನಾದ ಭಗವಂತನಲ್ಲಿ ವಾಯುದೇವ ಎಲ್ಲರ ಕರ್ಮಗಳನ್ನು ಸಮರ್ಪಿಸುವನೆಂದು ಹೀಗೆ ಸಾರಲಾಗಿದೆ–

**'ತಸ್ಮಿನ್ನಪೋ ಮಾತರಿಶ್ವಾ ದಧಾತಿ'** ಈ ಮಾತಿನಲ್ಲಿಯ **'ಅಪಃ'** ಶಬ್ದದಿಂದ ಏನನ್ನು ಹೇಳಲಾಗಿದೆ? ಯಾರೋ ಮಾಡಿದ ಕರ್ಮಗಳನ್ನು ವಾಯುದೇವ ಅರ್ಪಿಸುವುದರಲ್ಲಿ ಏನು ಔಚಿತ್ಯ ? – ಎಂಬ ಅಂಶಗಳ ಮೇಲೆ ಬೆಳಕು ಚೆಲ್ಲುವಂತೆ 'ಬ್ರಹ್ಮಾಂಡ' ಉಪನಿಷತ್ತಿನ ಈ ಸಂದೇಶವನ್ನು ಹೀಗೆ ಸ್ಪಷ್ಟಪಡಿಸಿದೆ.

**'........ ತಸ್ಮಿನ್ ಕರ್ಮಾಣ್ಯಧಾನ್ಮರುತೌ । ಮಾರುತ್ಯೇವ ಯತಶ್ಚೇಷ್ಟಾ ಸರ್ವಾ ತಾಂ ಹರಯೇಽರ್ಪಯೇತ್'** ಅಪಃ ಎಂದರೆ ಕರ್ಮಗಳನ್ನು ವಾಯುದೇವ ಭಗವಂತನಲ್ಲಿ ಸಮರ್ಪಿಸುವನು; ಎಲ್ಲ ಜೀವರ ಪ್ರತಿಯೊಂದು ಚಟುವಟಿಕೆಯೂ ಮಧ್ಯಮಪ್ರಾಣ ಎನಿಸುವ ವಾಯುದೇವನ ಪ್ರೇರಣೆಯಿಂದಲೇ ನಡೆಯುವುದರಿಂದ ವಾಯುದೇವ ತನ್ನ ಪ್ರೇರಣಾನುಸಾರವಾಗಿ ನಡೆಯುವ ಎಲ್ಲ ಕರ್ಮಗಳನ್ನೂ ಶ್ರೀಹರಿಗೆ ಸಮರ್ಪಿಸುವನು.

ಶ್ರೀವಿಶ್ವೇಶತೀರ್ಥರ 89 ವರ್ಷಗಳ ಜೀವಿತಾವಧಿಯ ಸಕಲ ಚಟುವಟಿಕೆಗಳೂ ಪ್ರಾಣದೇವನ ಮೂಲಕ ಕರ್ಮಾಧ್ಯಕ್ಷ ಶ್ರೀಹರಿಗೆ ಸಮರ್ಪಿತವಾಗಿವೆ ಎಂಬ ಅನುಸಂಧಾನದೊಂದಿಗೆ ಅಂತಹ ಚಟುವಟಿಕೆಗಳ ಮಧ್ಯದಲ್ಲಿ ಮಿಂಚಿದ ಅವರ ಚಿಂತನೆಗಳನ್ನು ಆಸ್ವಾದಿಸೋಣ.

## ನಾಲ್ಕನೆಯ ಕವಚ ಪುಟದ ಸಂದೇಶ

### ''ಕ್ರತೋ ಸ್ಮರ ಕೃತಂ ಸ್ಮರ''

ಈಶಾವಾಸ್ಯೋಪನಿಷತ್ತಿನಲ್ಲಿ ಪ್ರಸ್ತಾಪಿಸಲ್ಪಟ್ಟಂತೆ ಸ್ವಾಯಂಭುವಮನು ಯಜ್ಞ- ನಾಮಕ ಭಗವಂತನ ಜ್ಞಾನಸ್ವರೂಪಿಯಾದವನೆಂಬ ಅಭಿಪ್ರಾಯದಲ್ಲಿ **'ಕ್ರತೋ'** ಎಂದು ಸಂಬೋಧಿಸಿ, ತನ್ನ ಸಾಧನೆಗಳ ಬಗ್ಗೆ ಅನುಗ್ರಹೋನ್ಮುಖನಾಗು ಎಂಬ ಅಭಿಪ್ರಾಯದಲ್ಲಿ **'ಕೃತಂ ಸ್ಮರ'** ಎಂದು ಹೇಗೆ ನಿವೇದಿಸಿಕೊಂಡಿರುವನೋ ಹಾಗೆ ಶ್ರೀ ವಿಶ್ವೇಶತೀರ್ಥರ ತಮ್ಮ 89 ವರ್ಷಗಳ ಜೀವಿತದಲ್ಲಿ ನಡೆಸಲಾದ ಸಾಧನೆಗಳ ಬಗ್ಗೆ ಅನುಗ್ರಹೋನ್ಮುಖನಾಗಲು **'ಸಿದ್ಧಿ ವಿಘ್ನಮುಖದೋಷಭೇಷಜ'** ನೆಂದು ಪ್ರಸಿದ್ಧನಾದ ಪೊಡವಿಗೊಡೆಯನಲ್ಲಿ ಆರತಿ ಬೆಳಗುವುದರ ಮೂಲಕ ಬಿನ್ನವಿಸಿಕೊಂಡಿರುವರು.

★ ★ ★ ★

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

## ಪರಮಪೂಜ್ಯ ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದರು

ಶ್ರೀ ಹೃಷೀಕೇಶತೀರ್ಥ ಪೀಠಮ್, ಶ್ರೀಪಲಿಮಾರು ಮಠ, ಉಡುಪಿ.

---

# ಅನುಗ್ರಹ ಸಂದೇಶ

ಮೇರುವಿಗೆ ಸಮಾನವಾದ ಪರ್ವತ ಮತ್ತೊಂದಿದೆ. ನಮ್ಮ ಗುರುಗಳಾದ ಶ್ರೀ ವಿದ್ಯಾಮಾನ್ಯತೀರ್ಥಶ್ರೀಪಾದರ ಅತ್ಯಂತ ಅಚ್ಚುಮೆಚ್ಚಿನ ಪ್ರಥಮ ಸಂನ್ಯಾಸಿ ಶಿಷ್ಯರಾದ ಶ್ರೀ ವಿಶ್ವೇಶತೀರ್ಥ ಶ್ರೀಪಾದರು. ಅವರ ಗುರುಗಳ ಆಸೆಯಂತೆ ಜೀವನ ನಡೆಸಿ, ಭಗವಂತನಿಗೆ ಜ್ಞಾನಸೇವೆಯ ಮೂಲಕವೇ ತಮ್ಮ 89 ವರ್ಷದ ಜೀವನವನ್ನು ಸಮರ್ಪಿಸಿದ ಮಹಾಯೋಗಿಗಳು. ಜೀವನದುದ್ದಕ್ಕೂ ಜನಸೇವೆಯೇ ಜನಾರ್ದನ ಸೇವೆ ಎಂದು ಮನೆ-ಮನೆಗಳಲ್ಲಿ, ಊರೂರುಗಳಲ್ಲಿ, ಇಡೀ ದೇಶದಲ್ಲಿ ಹಬ್ಬಿಸಿದ ಮಹಾಸಂತರು. ಭಗವಂತನ ತತ್ತ್ವವನ್ನು ತಮ್ಮದೇ ಆದ ಭಾಷೆಗಳಲ್ಲಿ ಜನಮಾನಸವನ್ನು ಮುಟ್ಟುವ ರೀತಿಯಲ್ಲಿ ಲೌಕಿಕ ದೃಷ್ಟಾಂತಗಳನ್ನು ಕೊಟ್ಟು ತಿಳಿಸುವ ಪರಿ ಅದ್ಭುತ. ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರಿಂದ ಬಳುವಳಿಯಾಗಿ ಬಂದಿರುವಂತಹ ಆ ಪ್ರವಚನ ಕಲೆ, ಪಾಠದ ಕಲೆ ಅದು ಮತ್ತೊಬ್ಬರಿಗೆ ಅಸಾಧ್ಯ. ಸಾಮಾಜಿಕವಾಗಿ ಅವರು ಮಾಡಿರುವಂತಹ ಸೇವೆ ಗುರುತಿಸುವುದು ಅದ್ಭುತ. ಹಿಂದೂ ಜಾಗೃತಿಯನ್ನು ಮೂಡಿಸುತ್ತಾ, ಎಲ್ಲಿ ಸಮಸ್ಯೆಗಳು ಬರುತ್ತದೆಯೋ ಅಲ್ಲಿ ಶ್ರೀರಾಮನಂತೆ ಬಂದು ಹನುಮಂತನನ್ನು ಆವಾಹಿಸಿಕೊಂಡು ಆ ಸಮಸ್ಯೆಯನ್ನು ತಿಳಿಯಾಗಿ ಮಾಡುವಂತಹ ಅದ್ಭುತ ಸಾಮರ್ಥ್ಯವುಳ್ಳವರು ಶ್ರೀಗಳು. ಇಡೀ ದೇಶದ ಜನತೆಯನ್ನು ಒಟ್ಟು ಮಾಡಿದ ದಕ್ಷಿಣ ಭಾರತದ ಏಕೈಕ ಸಂತ. ವಿಶ್ವದಲ್ಲಿ ರಾಮನ ವ್ಯಕ್ತಿತ್ವದ ಚಿಂತನೆಯನ್ನು ಮೂಡಿಸಿರುವ ಸಂತರು ಶ್ರೀಪಾದರು. ಶ್ರೀರಾಮನ ಜನ್ಮಭೂಮಿ ಅಯೋಧ್ಯೆಯ ಮಂದಿರದ ಚಿಂತನೆಯನ್ನು ದೇಶದಾದ್ಯಂತ ಜನಮಾನಸದಲ್ಲಿ ಮೂಡಿಸಿ, ಅದರ ನೇತೃತ್ವವನ್ನು ವಹಿಸಿ, ಅದಮಾರು ಮಠದ ಶ್ರೀ ವಿಬುಧೇಶತೀರ್ಥಶ್ರೀಪಾದರ ಜೊತೆಗೂಡಿ ರಾಮ ಮಂದಿರವನ್ನು ಕಟ್ಟುವ ಕನಸನ್ನು ಮೂಡಿಸಿದವರು ಶ್ರೀಪಾದರು. ರಾಮಮಂದಿರದ ಜಾಗವೆಲ್ಲಾ ರಾಮನಿಗೆ ಸಂಬಂಧಪಟ್ಟದ್ದು ಎಂದು ದೇಶದ ಸರ್ವೋಚ್ಚ ನ್ಯಾಯಾಲಯದಿಂದ ತೀರ್ಪು ಬಂದಾಗ ಶ್ರೀಪಾದರ ಆನಂದಕ್ಕೆ ಪಾರವೇ ಇರಲಿಲ್ಲ. ಆ ರೀತಿ ಇಡೀ ಜೀವನವನ್ನು ಶ್ರೀರಾಮನಿಗೋಸ್ಕರ, ಸಮಾಜಕ್ಕೋಸ್ಕರ, ದೇಶಕ್ಕೋಸ್ಕರ ಸಮರ್ಪಣೆ ಮಾಡಿರುವಂತಹ

ಅದ್ಭುತ ಗುರುಗಳು ನಮ್ಮ ಪರಿವ್ರಾಟ್ ಚಕ್ರವರ್ತಿಗಳು. ಯತಿಕುಲ ಚಕ್ರವರ್ತಿಗಳಾದ ಶ್ರೀವಿಶ್ವೇಶತೀರ್ಥಶ್ರೀಪಾದರು. ಇಡೀ ಮಾಧ್ವಸಮಾಜವನ್ನು ಒಗ್ಗೂಡಿಸಿ, ಮಾಧ್ವಸಮಾಜದ ಎಲ್ಲ ಪೀಠಾಧಿಪತಿಗಳೊಂದಿಗೆ ಒಳ್ಳೆಯ ಬಾಂಧವ್ಯವನ್ನು ಬೆಳೆಸಿ, ಅದೇ ರೀತಿಯಲ್ಲಿ ಎಲ್ಲರೊಂದಿಗೆ ಬೆರೆತು ಸ್ವಸ್ಥ ಸಮಾಜವನ್ನು ನಿರ್ಮಾಣ ಮಾಡಲು ಕಟಿಬದ್ಧರಾಗಿದ್ದವರು ಶ್ರೀಗಳವರು. ಅಂತಹ ಶ್ರೀಗಳವರ ಶಿಷ್ಯ ಸಂಪತ್ತು ಅಪಾರ. ವಿದ್ಯಾಪೀಠದಲ್ಲಿ ಅಧ್ಯಯನ ಮಾಡಿದ ಶಿಷ್ಯರು, ಅದರ ಜೊತೆಗೆ ಅವರನ್ನು ಭಗವಂತನ ವಿಶೇಷವಾದ ಸಾನಿಧ್ಯವುಳ್ಳವರು ಎಂದು ಆರಾಧನೆ ಮಾಡುವಂತಹ ಅಭಿಮಾನಿಗಳ ಸಂಘ ಅಗಣನೀಯ ಹಾಗೂ ಅನನ್ಯ. ಇಷ್ಟೊಂದು ಜನಾನುರಾಗವೆಂಬ ಸಂಪತ್ತನ್ನು ಸಂಪಾದಿಸಿದ್ದು ಶ್ರೀಗಳವರು ತಮ್ಮ ಪಾಠ-ಪ್ರವಚನಗಳ ಮೂಲಕ. ಒಂದು ರೀತಿಯಾಗಿ ರಾಜಗುರುಗಳೂ ಹೌದು. ರಾಜಗುರುಗಳು ಎಷ್ಟು ತಲೆಮಾರಿನ ಈಗಿನವರೆಗೆ ರಾಜರಿದ್ದಾರೆ ಎಲ್ಲರಿಂದಲೂ, ಎಲ್ಲಾ ರಾಜ್ಯದ ರಾಜರಿಂದಲೂ ಪೂಜಿತರಾದವರು ಶ್ರೀಪಾದರು. ಅದರ ಜೊತೆಗೆ ಈಗಿನ ರಾಜಕೀಯ ಪಕ್ಷಭೇದವಿಲ್ಲದೆ ಎಲ್ಲ ನಾಯಕರುಗಳಿಗೂ ಬೇಕಾದವರು ನಮ್ಮ ಗುರುಗಳು. ಹೀಗೆ ಅವರ ಸಾಧನೆ ಎಲ್ಲ ರೀತಿಯಲ್ಲಿಯೂ ಅದ್ಭುತವಾದದ್ದು ಹಾಗೂ ಅನನ್ಯವಾದುದು. ಹೇಗೆ ರಾಮಾಯಣದಲ್ಲಿ ಸಮುದ್ರೋಲ್ಲಂಘನೆ ಮಾಡಲು ಬೇರೆ ಯಾರಿಂದಲೂ ಅಶಕ್ಯವಾಗಿತ್ತೋ, ಹನುಮಂತನನ್ನು ಮಾತ್ರ ಸಮರ್ಥನೆಂದು ಜಾಂಬವಂತ ತಿಳಿಸಿದರೋ, ಅದಕ್ಕೆ ಅನುಗುಣವಾಗಿ ಹನುಮಂತ ಅನನ್ಯಸಾಧ್ಯವಾಗಿರುವಂತಹ ಆ ಸಮುದ್ರೋಲ್ಲಂಘನೆ ಮಾಡಿ ಶ್ರೀರಾಮನ ಪಾದಕ್ಕೆರಗೆದರೋ ಅದೇ ರೀತಿಯಲ್ಲಿ ಶ್ರೀವಿಶ್ವೇಶತೀರ್ಥಶ್ರೀಪಾದರೂ ಕೂಡಿ ಎಲ್ಲ ರೀತಿಯ ಆಧ್ಯಾತ್ಮ, ಲೌಕಿಕ, ಸಾಮಾಜಿಕ ಕ್ಷೇತ್ರಗಳಲ್ಲೂ ತಮ್ಮ ಸಾಮರ್ಥ್ಯದ ಛಾಪನ್ನು ಮೂಡಿಸಿ, ದೇಶದುದ್ದಗಲಕ್ಕೂ ಸಂಚರಿಸಿ, ಎಲ್ಲ ಸಜ್ಜನರ ತನು-ಮನಗಳನ್ನು ಸಂತೈಸಿ ಕೃಷ್ಣನ ಪಾದಕ್ಕೆರಗಿದವರು ಶ್ರೀಪಾದರು.

ಐದು ಪರ್ಯಾಯಗಳನ್ನು ಮಾಡಿರುವ ಶ್ರೀಗಳವರ ಸೇವೆ ಕೃಷ್ಣನಿಗೆ ತೃಪ್ತಿಯನ್ನು ಕೊಟ್ಟಿತ್ತು. **'ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ'** ಎಂದು ಆಚಾರ್ಯ ಮಧ್ವರು ಸಂನ್ಯಾಸಿಗಳಿಗೆ ಏನು ಆದೇಶವನ್ನು ನೀಡಿದ್ದರೋ ಆ ಆದೇಶವನ್ನು ಇಡೀ ಜೀವನದುದ್ದಕ್ಕೂ ಚಾಚೂತಪ್ಪದೇ ಮಾಡಿಕೊಂಡು ಬಂದದ್ದರಿಂದಲೇ ಕೃಷ್ಣನಿಗೆ ಪ್ರೀತಿಯಾಗಿದೆ ಎಂಬುದರ ಸಂಕೇತವಾಗಿ ಅವರ ಜೀವನದ ವೃಂದಾನವ ಪ್ರವೇಶಕ್ಕಿಂತ ಮೊದಲು ಅವರು ಮಾಡಿದ ದೊಡ್ಡ ಸೇವೆ ಶ್ರೀಕೃಷ್ಣನ ಸನ್ನಿಧಾನದಲ್ಲಿ-ಮಧ್ವ ವಾದಿರಾಜಾಂಗಣದಲ್ಲಿ

ನಡೆದಿರುವಂತಹ ನಮ್ಮ ಪರ್ಯಾಯದಲ್ಲಿ ನಡೆದಿರುವಂತಹ ಮಹಾಭಾರತದ ಪ್ರವಚನ ಮಾಲಿಕೆ. ಅದು ಶ್ರೀಗಳವರ ಕೊನೆಯ ಸಂದೇಶವಾಗಿ ಹೊರಹೊಮ್ಮಿತ್ತು. ಶ್ರೀಗಳವರ ನಾಲ್ಕನೆಯ ಪರ್ಯಾಯದಲ್ಲಿ ಶ್ರೀವಿದ್ಯಾಮಾನ್ಯತೀರ್ಥರು ಬೃಂದಾವನಸ್ಥರಾದರೆ, ಈಗಿನ ನಮ್ಮ ಎರಡನೆಯ ಪರ್ಯಾಯದಲ್ಲಿ ಪೇಜಾವರ ಶ್ರೀಗಳವರು ಬೃಂದಾವನಸ್ಥರಾಗಿದ್ದು ನಮ್ಮ ಭಾಗ್ಯ, ಅವರ ಮೂಲಕ ಕೊನೆಯ ಆರತಿಯನ್ನು ಮಾಡಿಸುವ ಯೋಗ ನಮಗೆ ಸಿಕ್ಕಿತು. ಆದರೆ ಅಂತಹ ಅದ್ಭುತ ಚೇತನವನ್ನು ಕಳಕೊಂಡ ನೋವೂ ಕೂಡ ಉಂಟು. ಅವರು ಎಲ್ಲಿಗೂ ಹೋಗಿಲ್ಲ, ಎಲ್ಲಿ ಪಾಠ-ಪ್ರವಚನಗಳು ನಡೆಯುತ್ತದೋ, ಎಲ್ಲಿ ಅವರ ಜ್ಞಾನಾಮೃತ ಹರಿಯುತ್ತದೋ ಅಲ್ಲೆಲ್ಲ ಗುರುಗಳು ನಮ್ಮೊಂದಿಗೆ ಇರುತ್ತಾರೆ ಎಂಬ ಭಾವನೆಯಿಂದ ಅವರ ಪ್ರಥಮ ಆರಾಧನೆಯ ಸಂದರ್ಭದಲ್ಲಿ ಈ ಜ್ಞಾನಪುಷ್ಪವನ್ನು ಗುರುಗಳ ಅಂತರ್ಯಾಮಿಯಾಗಿರುವ ಪ್ರಾಣಸ್ಥ ಶ್ರೀರಾಮಾಭಿನ್ನ ಶ್ರೀಕೃಷ್ಣನ ಪಾದಾರವಿಂದಗಳಿಗೆ ಸಮರ್ಪಣೆ ಮಾಡುತ್ತಿದ್ದೇವೆ.

ಈ ಜ್ಞಾನಪುಷ್ಪಕ್ಕೋಸ್ಕರ ಜ್ಞಾನಮಾಲಿಕೆಯನ್ನು ಪೋಣಿಸಲು ತಮ್ಮ ಸೇವೆಯನ್ನು ಸಲ್ಲಿಸಿರುವಂತಹ ನಾಡಿನ ಖ್ಯಾತ ವಿದ್ವಾಂಸರಾದ ಸಗ್ರಿ ರಾಘವೇಂದ್ರ ಉಪಾಧ್ಯಾಯರು, ಅವರಿಗೆ ಸಂಗ್ರಹದಲ್ಲಿ ಎಲ್ಲ ರೀತಿಯಲ್ಲಿ ಸಹಕಾರ ನೀಡಿರುವಂತಹ ಓಂಪ್ರಕಾಶ ಭಟ್ಟರು ಇವರಿಗೆ ಶ್ರೀಕೃಷ್ಣ ಐಶ್ವರ್ಯ, ಜ್ಞಾನಾದಿಗಳನ್ನು ಕೊಟ್ಟು ಸಲಹಲಿ ಎಂದು ಪ್ರಾರ್ಥನೆ ಮಾಡುತ್ತಾ, ನಮ್ಮ ತತ್ವಸಂಶೋಧನ ಸಂಸತ್‌ನಿಂದ ಪ್ರಕಟವಾಗುತ್ತಿರುವ ಈ ಕೃತಿಯನ್ನು ಸರ್ವಸಾಧಕರು, ಜಿಜ್ಞಾಸುಗಳು, ಶ್ರೀವಿಶ್ವೇಶತೀರ್ಥಶ್ರೀಪಾದರ ಅಸಂಖ್ಯ ಭಕ್ತರು ಸ್ವೀಕರಿಸಿ, ಆದರಿಸಿ ತಾವೂ ಕೃತಾರ್ಥರಾಗಲಿ ಎಂದು ಅಸ್ಮದುಪಾಸ್ಯ ಶ್ರೀರಾಮವಿಠ್ಠಲಾಭಿನ್ನ ಶ್ರೀಕೃಷ್ಣನಲ್ಲಿ ಪ್ರಾರ್ಥಿಸುತ್ತೇವೆ.

**ವಿಶ್ವವಂದಿತಪಾದಾಬ್ಜ ವಿಶ್ವಸಂಸ್ತುತಸದ್ಗುಣ ।**
**ನಮಸ್ತೇ ವಿಶ್ವವಿದ್ಯಾಯ ವಿಶ್ವದೀನಸುಬಂಧವೇ ॥**

ನಾರಾಯಣ ಸ್ಮರಣೆಗಳು
ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು
ಶ್ರೀ ಹೃಷೀಕೇಶತೀರ್ಥ ಪೀಠಮ್, ಶ್ರೀ ಪಲಿಮಾರು
ಉಡುಪಿ.

# ನಿರ್ದೇಶಕರ ನುಡಿ

ಶತಮಾನ ಕಂಡ ಮತ್ತೊಬ್ಬ ದೀರ್ಘ ಸಂನ್ಯಾಸಿಗಳು, ಯೋಗಿಗಳು, ಪರಿವ್ರಾಟ್ ಚಕ್ರವರ್ತಿಗಳಾಗಿರುವಂತಹ ಶ್ರೀ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ-ಶ್ರೀಪಾದರ ಚಿಂತನೆ ಎನ್ನುವುದು ಮಾಧ್ವರಾಗಿರುವ ಪ್ರತಿಯೊಬ್ಬರಿಗೂ ಅತ್ಯಗತ್ಯ. ಅವರ ಕಾಲದಲ್ಲಿ ಜೀವನ ಮಾಡಿರುವ ಮನುಷ್ಯರಿಗೂ ಕೂಡ ಅವರ ಸ್ಮರಣೆ ಮಾಡದೇ ಇರುವುದಕ್ಕೆ ಸಾಧ್ಯವೇ ಇಲ್ಲ. ಅವರು ಜಗತ್ತಿಗೆ, ವಿಶೇಷವಾಗಿ ನಮ್ಮ ಕರ್ನಾಟಕಕ್ಕೆ ಕೊಟ್ಟ ಕೊಡುಗೆ ಅನನ್ಯವಾದುದು. ಅದು ಎಲ್ಲ ರೀತಿಯಲ್ಲಿಯೂ ಹೌದು. ಸಾಮಾಜಿಕವಾಗಿ, ಲೌಕಿಕವಾಗಿ, ಅಧ್ಯಾತ್ಮದ ದೃಷ್ಟಿಯಿಂದಲೂ ತಮ್ಮ ಕಂಪನ್ನು ಪಸರಿಸಿದವರು ಶ್ರೀವಿಶ್ವೇಶತೀರ್ಥ ಶ್ರೀಪಾದರು. ಅವರಿಗೆ ಈ ರೀತಿಯ ಸಾಮರ್ಥ್ಯ ಎಲ್ಲಿಂದ ಬಂತು ಎಂದರೆ, **'ಶ್ರೀವಿಶ್ವಾಕ್ಷಕೃಪಾಪಾತ್ರಂ'** ಇಡೀ ಜಗತ್ತನ್ನೇ ಕಣ್ಣಾಗಿಸಿಕೊಂಡು ಜಗತ್ತಿನ ಸೃಷ್ಟಿ-ಸ್ಥಿತ್ಯಾದಿಗಳನ್ನು ಮಾಡುವಂತಹವನು ಭಗವಂತನಾದ ಶ್ರೀಕೃಷ್ಣ; ಆ ಕೃಷ್ಣನನ್ನು ಪೂಜೆ ಮಾಡುವಾಗ **'ಈ ಸರ್ವಜ್ಞ'** ಎನ್ನುವ ಚಿಂತನೆಯನ್ನು ಇಟ್ಟುಕೊಂಡೇ ಅವರು ಉಪಾಸನೆ ಮಾಡಿರುವ ಕಾರಣವೇ ಅದರ ಫಲವಾಗಿಯೇ ಅದೇ ರೀತಿಯ ಗುಣವನ್ನೇ ಆ ಭಗವಂತ ಅವರಿಗೂ ಅನುಗ್ರಹ ಮಾಡಿದ್ದಾನೆ. ಆದ್ದರಿಂದಲೇ ಅವರು ವಾಮನರೂಪಿಯಾಗಿದ್ದರೂ ಕೂಡ ಅವರ ವ್ಯಕ್ತಿತ್ವ ಬಹಳ ಎತ್ತರವಾದದ್ದು- ತ್ರಿವಿಕ್ರಮರೂಪದಂತೆ. ಆದ್ದರಿಂದ ಇವರಿಗೆ ಈ ಚಿಂತನೆ ಬರಲಿಕ್ಕೆ ಅವರ ಅವಿಚ್ಛಿನ್ನವಾದಂತಹ 81 ವರ್ಷದ ಸಂನ್ಯಾಸ ಜೀವನ, ಅದರೊಂದಿಗೆ ಸಮಾಜದ ಕಳಕಳಿ, **'ಸರ್ವೇ ಜನಾಃ ಸುಖಿನೋ ಭವಂತು'** ಎಂಬ ಮಹದಿಚ್ಛೆ, ಮುಗ್ಧ ಮನಸ್ಸು ಇವೆಲ್ಲವೂ ಬರಲು ಸಾಧ್ಯವಾದದ್ದು ಅವರ ಗುರುಗಳಾದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ-ಶ್ರೀಪಾದರಿಂದ. ಶ್ರೀ ವಿದ್ಯಾಮಾನ್ಯತೀರ್ಥರಲ್ಲಿ ಪುಟ್ಟ ಬಾಲಕನಾಗಿದ್ದಾಗಿನಿಂದ ಮಾಡಿದ ಸೇವೆಯ ಫಲ, ಅಧ್ಯಯನದ ಫಲ, ಅವರೊಟ್ಟಿಗೆ ಮಾಡಿದ ಜೀವನದ ಫಲವೇ ಅವರ ಉತ್ಕೃಷ್ಟ ಜೀವನವೆಂದು ಹೇಳಬಹುದು.

ಮೊದಲು ಶ್ರೀ ವಿದ್ಯಾಮಾನ್ಯತೀರ್ಥರ ಜೊತೆಗೆ ಇದ್ದ ಆ 12 ವರ್ಷದ ಫಲವಾಗಿ ಉಳಿದ 70-80 ವರ್ಷವನ್ನು ನಾವು ನೋಡಬಹುದು. ಪುಟ್ಟದಾಗಿ ಶ್ರೀವಿದ್ಯಾಮಾನ್ಯತೀರ್ಥರು ತನ್ನ ಮಗು ಎಂಬ ಚಿಂತನೆಯಿಂದ ಬೆಳೆಸಿ, ವಿದ್ಯಾದಾನ ಮಾಡಿ ನಂತರವೂ ಕೂಡ ಅವರ ವಿದ್ಯಾಪೀಠವನ್ನು ರಚನೆ ಮಾಡುವಂತಹ ಅಂತಃಶಕ್ತಿ ಎಲ್ಲವೂ ಕೂಡ ಶ್ರೀವಿದ್ಯಾಮಾನ್ಯರಿಂದ ಬಂದಿರುವಂತಹದ್ದೇ. ಆದ್ದರಿಂದ ಶ್ರೀ ವಿದ್ಯಾಮಾನ್ಯರ ಹಸುಗೂಸು ಶ್ರೀ ವಿಶ್ವೇಶತೀರ್ಥರು ಎಂದರೆ ತಪ್ಪಾಗಲಾರದು. ಆನಂತರ ಮುನಿಗಳೂ ಹೌದು. ಆಚೆ-ಈಚೆ ಅಡ್ಡಾಡುವಾಗಲೂ ಕೂಡ ಮೌನವಾಗಿರುತ್ತಾ, ಒಳಗಿಂದೊಳಗೆ

ಜಪ-ಅನುಷ್ಠಾನ-ಪಾರಾಯಣ ಮಾಡಿಕೊಂಡೇ ಬೆರೆಯುತ್ತಿದ್ದರು. ಇದೇ ಅವರ ತಾಕತ್ತು . ಮೌನವಾಗೇ ಎಲ್ಲ ಕೆಲಸವನ್ನೂ ಮಾಡುವ ಮುನಿಗಳೂ ಹೌದು. ಇದು ಹನುಮಂತನ ಗುಣ. ವಾಯುಸ್ತುತಿಯನ್ನು ನಿರಂತರ ಪಾರಾಯಣ ಮಾಡಿದ್ದರ ಫಲ ಇದು. ಇಷ್ಟಾದರೂ ಕೂಡ ಅವರಿಗೆ ಸಿಟ್ಟು ಬಂದದ್ದು ತುಂಬಾ ಕಡಿಮೆ, ಇಲ್ಲ ಎಂದೇ ಹೇಳಬಹುದು, ಶಾಂತಚಿತ್ತರು. ಇದು ಶ್ರೀ ವಿದ್ಯಾಮಾನ್ಯತೀರ್ಥರ ಮತ್ತೊಂದು ಗುಣ. ಇದೂ ಕೂಡ ಹನುಮಂತನ ಇನ್ನೊಂದು ಗುಣ. ಶ್ರೀಕೃಷ್ಣನಲ್ಲಿರುವ ಗುಣಗಳನ್ನು ಉಪಾಸನೆಯ ಮಾಡಿದ ಬಲದಿಂದಲೇ ರಾಜಕೀಯ, ಮಠ, ವಿದ್ಯಾಪೀಠ ಎಲ್ಲವನ್ನೂ ನಿಭಾಯಿಸುವ ಗುಣ ಇವರಿಗೆ ಬಂದದ್ದು. ಹಾಗೆಯೇ ರಾಮವಿಠ್ಠಲ ಸೇವಕರೂ ಹೌದು. ಎಂತಹದ್ದೇ ಸಮಸ್ಯೆಗಳು ಬಂದರೂ ಆರಾಮವಾಗಿ ಇರುತ್ತಿದ್ದರು, ಏಕೆಂದರೆ ಶ್ರೀರಾಮ ಆರಾಧಕರು. ಅದರ ಜೊತೆಗೆ ಅಷ್ಟೇ ಜ್ಞಾನಿಗಳೂ ಕೂಡ. ಎಲ್ಲಾದರೂ ವಾದಗಳು ನಡೆಯುತ್ತಿದ್ದರೆ ಶ್ರೀವಿಶ್ವೇಶತೀರ್ಥರನ್ನು ನೋಡಬೇಕು. ವಾದಿ-ಪ್ರತಿವಾದಿಗಳು ಚೆನ್ನಾಗಿ ವಾದ ಮಾಡುತ್ತಿದ್ದಾಗ, ಇವರು ಎಲ್ಲೋ ಇರುತ್ತಾರೆ. ಥಟ್ಟನೆ ಅವರಿದ್ದಲ್ಲಿಗೆ ಸರಿಯಾದ ಸಮಯಕ್ಕೆ ಬಂದು ಅವರು ಏನು ವಾದ ಮಾಡುತ್ತಿದ್ದಾರೆಂಬುದಕ್ಕೆ ಪಟ್ಟನೆ ಉತ್ತರವನ್ನು ಹೇಳಿ ಹೋಗುತ್ತಾರೆ. ಈ ಜ್ಞಾನ ಅವರು ವಿಠ್ಠಲ ಸೇವೆ ಮಾಡಿರುವುದರ ಫಲ. ಅದ್ಭುತ ಚಾಕಚಕ್ಯತೆ. ವಿದ್ಯೆ ಅವರು ಹೇಳಿದಂತೆ ಕುಣಿಯುತ್ತಿತ್ತು , ಆ ತಾಕತ್ತು ಅವರಿಗಿತ್ತು . ಯಾವುದೇ ಮತದ ವಾದಿಗಳಿದ್ದರೂ ಕೂಡ ಶ್ರೀವಿಶ್ವೇಶತೀರ್ಥರು ಬಂದರು ಎಂದರೆ ಆ ಚಂದವೇ ಬೇರೆಯಾಗುತ್ತಿತ್ತು , ಎಲ್ಲರೂ ಅವರ ಅನುಯಾಯಿಗಳಾಗಿಬಿಡುತ್ತಿದ್ದರು. ಆ ಸಾಮರ್ಥ್ಯ ಅವರಿಗಿದೆ.

ಒಂದು ಸಂದರ್ಭದಲ್ಲಿ ನಾನು ಕೇಳಿದ್ದುಂಟು, ನಮ್ಮ ದೇಶದ ಅಚ್ಚುಮೆಚ್ಚಿನ ಪ್ರಧಾನಿಯಾಗಿರುವ ಶ್ರೀ ನರೇಂದ್ರ ಮೋದಿಯವರ ಮಾತಿಗೆ ವಿರೋಧ ಮಾಡಿದ್ದೂ ಇದೇ ವಿಶ್ವೇಶತೀರ್ಥರೇ. ಹಾಗಿದ್ದಾಗಿಯೂ ತನ್ನನ್ನು ವಿರೋಧ ಮಾಡಿದ ವಿಶ್ವೇಶತೀರ್ಥರನ್ನು ಗುರುಪೂರ್ಣಿಮಾ ದಿನ ದೆಹಲಿಯಲ್ಲಿರುವ ತನ್ನ ಮನೆಗೆ ಕರೆಸಿಕೊಂಡು ಪಾದಪೂಜೆ ಮಾಡಿ, ಆರಾಧನೆ ಮಾಡಿದರು ಪ್ರಧಾನಮಂತ್ರಿಗಳು. ಇದೇ ಶ್ರೀವಿಶ್ವೇಶತೀರ್ಥರ ಅಂತಃಸತ್ತ್ವ. ಎರಡು ವಿರುದ್ಧ ಧರ್ಮಗಳು ಏಕತ್ರ ಕೂಡುವುದು ಎನ್ನಲು ಪ್ರತ್ಯಕ್ಷ ನಿದರ್ಶನ ಶ್ರೀ ವಿಶ್ವೇಶತೀರ್ಥರು.

ಇನ್ನು ಮುಂದೆ ಭಾರತ ವಿಶ್ವಗುರುವಾಗುವ ದಿನಗಳು ಹತ್ತಿರವಿದೆ. ಆ ವಿಶ್ವಕ್ಕೆ ಅನೇಕ ನಾಯಕರುಗಳಿಂದ ಯಾವುದೇ ಪಕ್ಷ, ಮತ, ಜಾತಿ, ಯಾವುದೂ ಭೇದವಿಲ್ಲದೆ, ಎಲ್ಲಾ ಪಂಗಡ, ನಾಯಕರು, ರಾಜರಿಂದ ಪೂಜಿತರಾದವರು, ಅವರಿಗೆ ಗುರುಸ್ಥಾನದಲ್ಲಿ ನಿಂತಿರುವಂತಹವರು ವಿಶ್ವರಾಜಗುರುಗಳಾದ ಶ್ರೀ ವಿಶ್ವೇಶತೀರ್ಥರು.

ಹಾಗೆಯೇ, 'ವಿದ್ಯಾರ್ಥಿ ದೀನವತ್ಸಲಂ' ಎಷ್ಟೇ ದೊಡ್ಡ ಮಟ್ಟಕ್ಕೆ, ಅಂತರಾಷ್ಟ್ರೀಯ ಮಟ್ಟಕ್ಕೆ ಬೆಳೆದರೂ ಕೂಡ ಒಂದು ಪುಟ್ಟ 5-6 ವರ್ಷದ ಬಾಲಕನೊಂದಿಗೆ ತಾವೂ ಬಾಲಕರಾಗಿರುತ್ತಿದ್ದರು. ಒಂದು ವರ್ಷದ ಮಗುವಿನೊಟ್ಟಿಗೆ ತಾವೂ ಮಗುವಾಗುತ್ತಿದ್ದರು. ಅಧ್ಯಯನ, ಅಧ್ಯಾಪನ ಮಾಡಿಸುವಾಗ ತಮ್ಮ ವಿದ್ಯಾರ್ಥಿಗಳೊಂದಿಗೆ ತಾವೂ ವಿದ್ಯಾರ್ಥಿಯಾಗಿ; ವಿದ್ವಾಂಸರೊಟ್ಟಿಗೆ ವಿದ್ವಾಂಸರಾಗುತ್ತಿದ್ದರು. ಈ ಹೊಂದಿಕೊಳ್ಳುವ ಗುಣ ಶ್ರೀವಿದ್ಯಾಮಾನ್ಯತೀರ್ಥರಲ್ಲಿ ಬಿಟ್ಟರೆ ಶ್ರೀ ವಿಶ್ವೇಶತೀರ್ಥರಲ್ಲಿ ಮಾತ್ರ ನೋಡಲು ಸಾಧ್ಯ. ಆದ್ದರಿಂದ ಯಾರು ದೀನರು, ಯಾರು ವಿದ್ಯಾರ್ಜನೆಗೋಸ್ಕರ ತಮ್ಮ ಬಳಿ ಬರುತ್ತಾರೋ, ಅವರ ಎಲ್ಲಾ ತಪ್ಪುಗಳನ್ನು ಮನ್ನಿಸಿ ಅವರಿಗೆ ವಿದ್ಯಾದಾನವೋ, ದ್ರವ್ಯದಾನವೋ, ಬೇಕಾದ್ದನ್ನು ದಾನ ಮಾಡುವಂತಹ ವಾತ್ಸಲ್ಯ ಹೃದಯ ಅವರಲ್ಲಿತ್ತು. ಇದು ಶ್ರೀವಿಶ್ವೇಶತೀರ್ಥಶ್ರೀಪಾದರ ಬಗ್ಗೆ ತುಂಬಾ ಚುಟುಕಾಗಿ ಸೂರ್ಯನೆದುರು ಮಿಂಚಿನ ಹುಳುವನ್ನು ತೋರಿಸುವ ಹಾಗೆ ಒಂದೆರಡು ಮಾತುಗಳಲ್ಲಿ ನಾವು ಹೇಳುವ ಪ್ರಯತ್ನ. ಇದು ಶ್ರೀವಿಶ್ವೇಶತೀರ್ಥರ ದೊಡ್ಡ ವ್ಯಕ್ತಿತ್ವದಲ್ಲಿ ನಾವು ಹೇಳಿರುವ ಪುಟ್ಟ ಚಿಂತನೆ. ಶ್ರೀವಿಶ್ವೇಶತೀರ್ಥರು 89 ವರ್ಷದ ಜೀವನದಲ್ಲಿ ಅವರು ನಡೆಸಿರುವಂತಹ ಜ್ಞಾನಸೇವೆ ಅಪಾರ. ಕಡೆ ದಿವಸದಲ್ಲೂ ಅವರು ಮಹಾಭಾರತ ಜ್ಞಾನಸೇವೆಯನ್ನು ನಡೆಸಿದ್ದು ಇದೇ ಉಡುಪಿಯ ಮಧ್ವ-ವಾದಿರಾಜಾಂಗಣದಲ್ಲಿ. ಜ್ಞಾನಸೇವೆಯನ್ನು ಮಾಡಿ ಶ್ರೀಕೃಷ್ಣನನ್ನು ತೃಪ್ತಿ ಪಡಿಸುವುದರಲ್ಲಿ ನಿಷ್ಣಾತರು. ಆದ್ದರಿಂದಲೇ ಶ್ರೀಕೃಷ್ಣ ಐದು ಪರ್ಯಾಯಗಳನ್ನು ಇವರಿಂದ ಮಾಡಿಸಿಕೊಂಡ ಎಂದರೆ ಅತಿಶಯೋಕ್ತಿಯಲ್ಲ. ಜೀವನದುದ್ದಕ್ಕೂ ನಡೆಸಿಕೊಂಡು ಬಂದಿರುವ ಅನೇಕ ಜ್ಞಾನಯಜ್ಞಗಳು, ಲೇಖನಗಳು, ಪ್ರವಚನಗಳ ಸಾಗರದಲ್ಲಿ ಕೆಲವು ಬಿಂದುಗಳನ್ನು ಮಾತ್ರ ಆರಿಸಿ ಈ ಕೃತಿಯಲ್ಲಿ ನಾವು ಸಂಗ್ರಹಿಸಿಕೊಡುತ್ತಿದ್ದೇವೆ. ಈ ರೀತಿಯಾದ ಕಾರ್ಯ ನಮ್ಮ ಗುರುಗಳಾದ ಶ್ರೀ ವಿದ್ಯಾಧೀಶ ತೀರ್ಥಶ್ರೀಪಾದರಿಗೆ ಅತ್ಯಂತ ಇಷ್ಟಕರವಾದಂತಹದ್ದು. ಆದ್ದರಿಂದಲೇ ನಮ್ಮ ತತ್ವಸಂಶೋಧನ ಸಂಸತ್‌ನಿಂದ ಶ್ರೀವಿಶ್ವೇಶತೀರ್ಥಶ್ರೀಪಾದರ ಪ್ರಥಮ ಆರಾಧನೆಯ ಸಂದರ್ಭದಲ್ಲಿ ಅವರು ನಡೆಸಿರುವ ಜ್ಞಾನಮಯ ಅಮೃತದ ಒಂದು ಬಿಂದುವನ್ನು ಸಮರ್ಪಣೆ ಮಾಡುವ ಉದ್ದೇಶದಿಂದ ಶ್ರೀವಿದ್ಯಾಧೀಶತೀರ್ಥ ಶ್ರೀಪಾದರು ಈ ಕೃತಿಯನ್ನು ಹೊರತರಲು ಇಚ್ಛೆಪಟ್ಟಿದ್ದಾರೆ. ಆದ್ದರಿಂದ ಈ ಕೃತಿಗೆ ಸ್ವಯಂ ತಾವೇ ನಿಂತು ಅನುಗ್ರಹ ಸಂದೇಶವನ್ನೂ ಗುರುಗಳ ಸಂಸ್ಮರಣೆಯ ಮೂಲಕ ಜನರಿಗೆ ನೀಡಿದ್ದಾರೆ. ಅವರಿಗೆ **'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ'** ಎಂದು ಅನಂತ ನಮನಗಳನ್ನು ಸಲ್ಲಿಸುತ್ತಾ ಇದ್ದೇನೆ.

ಅದರ ಜೊತೆಗೆ ಈ ಸಮಗ್ರ ಕೃತಿಯನ್ನು ಸಂಗ್ರಹಿಸಿಕೊಟ್ಟವರು ವಿದ್ವದಗ್ರಣಿಗಳಾದ ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರು.

ಶ್ರೀ ವಿಶ್ವೇಶತೀರ್ಥಶ್ರೀಪಾದರಲ್ಲೇ ಸಮಗ್ರ ಸುಧಾಂತ ಅಧ್ಯಯನ ಮಾಡಿ ತಮ್ಮ ಜೀವನವನ್ನು ಜ್ಞಾನಕ್ಕಾಗಿ ಮುಡಿಪಾಗಿಟ್ಟಿರುವಂತಹ, ಈ ಕೃತಿಯನ್ನು ಸಂಗ್ರಹ ಮಾಡಿಕೊಟ್ಟಿರುವಂತಹ ವಿದ್ವಾಂಸರಿಗೆ ನಮನಗಳನ್ನು ಸಲ್ಲಿಸುತ್ತೇನೆ.

ಅದರ ಜೊತೆಗೆ ಈ ಎಲ್ಲಾ ಕಾರ್ಯಗಳಲ್ಲಿ ತಾವು ನಿಂತು, ಕಾರ್ಯಗಳನ್ನು ನಡೆಸಿಕೊಡುವಲ್ಲಿ ಸಂಪೂರ್ಣ ಸಹಕಾರ, ಮನಃಪೂರ್ವಕವಾಗಿ ಸಂಗ್ರಹ ಮಾಡಿಕೊಟ್ಟಿರುವಂತಹ ಶ್ರೀ ಓಂಪ್ರಕಾಶ ಭಟ್ಟ. ಅವರಿಗೂ ಕೂಡ ಸಂಸತ್‌ನ ಪರವಾಗಿ ಧನ್ಯವಾದಗಳು.

ಈ ಕೃತಿಯು ಹೊರಬರುವಲ್ಲಿ ಆರ್ಥಿಕ ಅನುದಾನವನ್ನು ನೀಡಿರುವಂತಹ ಘನವೆತ್ತ ಕರ್ನಾಟಕ ಸರ್ಕಾರದ ಎಲ್ಲ ಪದಾಧಿಕಾರಿಗಳು ಹಾಗೂ ಸರ್ಕಾರಕ್ಕೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಮರ್ಪಣೆ ಮಾಡುತ್ತೇವೆ. ಅದೇ ರೀತಿ ಈ ಕೃತಿಯ ಅಕ್ಷರ ಜೋಡಣೆಯಲ್ಲಿ ಸಹಕರಿಸಿದ ಶ್ರೀಮತಿ ವಿದ್ಯಾಶ್ರೀ ಕಟ್ಟಿ, ಪುಟಸಂಯೋಜನೆಯಲ್ಲಿ ಸಹಕರಿಸಿದ ಶ್ರೀ ಶರತ್ ಚಂದ್ರ ರವರಿಗೆ, ಮುಖಪುಟ ವಿನ್ಯಾಸದಲ್ಲಿ ಸಹಕರಿಸಿದ ಶ್ರೀ ರಘುನಂದನ ಶರ್ಮರಿಗೆ, ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಪವನ್ ಪ್ರಿಂಟರ್ಸ್‌ನ ಮಾಲೀಕರಾದ ಮಂಜುನಾಥ್‌ರವರಿಗೂ ಹಾಗೂ ಪ್ರತ್ಯಕ್ಷ-ಪರೋಕ್ಷವಾಗಿ ಸಹಕಾರ ನೀಡಿರುವ ಸಮಸ್ತ ಆಸ್ತಿಕ ಬಾಂಧವರಿಗೆ, ತತ್ವಸಂಶೋಧನ ಸಂಸತ್‌ನ ಎಲ್ಲ ವಿದ್ವನ್ಮಂಡಳಿಗೆ ನಮನಗಳನ್ನು, ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಶ್ರೀವಿಶ್ವೇಶತೀರ್ಥರ ವ್ಯಕ್ತಿತ್ವದ ಒಂದು ಚುಟುಕನ್ನು ಇಲ್ಲಿ ಸಮರ್ಪಣೆ ಮಾಡುತ್ತಿದ್ದೇವೆ. ಎಲ್ಲ ಸಹೃದಯರು, ಜ್ಞಾನಪಿಪಾಸುಗಳು ಇದನ್ನು ಸ್ವೀಕಾರ ಮಾಡಿ ಗುರುಗಳ ಅಂತರ್ಯಾಮಿಯಾಗಿರುವ ಪ್ರಾಣಸ್ಥ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಹೇಳುತ್ತಾ, ಈ ಎಲ್ಲ ಕಾರ್ಯಗಳು ಒಳಗೆ ನಿಂತುಕೊಂಡು ನಮ್ಮಿಂದ ನುಡಿಸಿ, ಮಾಡಿಸಿರುವಂತಹ ಭಗವಂತನಿಗೆ **'ಯೋಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸೂಪ್ತಾಮ್'** ಎಂಬ ಚಿಂತನೆಯೊಂದಿಗೆ ಈ ಕೃತಿಯನ್ನು ಸಮರ್ಪಣೆ ಮಾಡುತ್ತಿದ್ದೇವೆ.

**ಶ್ರೀವಿಶ್ವಾಕ್ಷಕೃಪಾಪಾತ್ರಂ ವಿದ್ಯಾಮಾನ್ಯಸುವತ್ಸಲಮ್ ।**
**ಶ್ರೀವಿಶ್ವೇಶಮುನಿಂ ಶಾಂತಂ ರಾಮವಿಠ್ಠಲಸೇವಕಮ್ ।**
**ವಿಶ್ವರಾಜಗುರುಂ ನೌಮಿ ದೀನವಿದ್ಯಾರ್ಥಿವತ್ಸಲಮ್ ॥**

**ಡಾ. ವಂಶೀಕೃಷ್ಣಾಚಾರ್ಯ ಪುರೋಹಿತ್**
ನಿರ್ದೇಶಕರು, ತತ್ವಸಂಶೋಧನಸಂಸತ್,
ಶ್ರೀ ಪಲಿಮಾರು ಮಠ, ಉಡುಪಿ.

# ಸಂಪಾದಕೀಯ...

## ಚಿಂತನೆಗಳ ಚಿಂತನಮನನಗಳ ಮೂಲಕ ಸಂಸ್ಮರಣೆ

ಗುರುಗಳನ್ನು ಸ್ಮರಿಸಬೇಕು.

ಇದಕ್ಕೆ ಇರುವ ಉಪಾಯಗಳು ಮೂರು.

★ ಅವರ ಭಾವಚಿತ್ರ, ವೃಂದಾವನ - ಇವುಗಳ ದರ್ಶನದ ಮೂಲಕ

★ ಅವರ ಸಂಪರ್ಕದಲ್ಲಿದ್ದ ವ್ಯಕ್ತಿಗಳ ಜೊತೆಗೆ ಮಾತುಕತೆ ನಡೆಸುವ ಮೂಲಕ

★ ಅವರ ಉಪನ್ಯಾಸ, ಬರವಣಿಗೆ - ಇವುಗಳಲ್ಲಿ ಪ್ರಸ್ತುತಗಳಾದ ಅವರ ಚಿಂತನೆಗಳನ್ನು ಮೆಲುಕು ಹಾಕುವ ಮೂಲಕ.

ಈ ಮೂರರಲ್ಲಿ ಭಾವಚಿತ್ರಾದಿಗಳ ದರ್ಶನದ ಮೂಲಕವಾಗಲೀ, ಅವರ ಜೊತೆಗಿದ್ದ ವ್ಯಕ್ತಿಗಳ ಜೊತೆ ಮಾತನಾಡುವುದರಿಂದಾಗಲೀ ಉಂಟಾಗಬಲ್ಲ ಗುರುಗಳ ಸ್ಮರಣೆ ತಾತ್ಕಾಲಿಕ. ಭಾವಚಿತ್ರಾದಿಗಳನ್ನು ನಿರಂತರವಾಗಿ ನೋಡುತ್ತಲೇ ಇರಲು ಸಾಧ್ಯವಿಲ್ಲ ತಾನೇ! ಗುರುಗಳ ಸಂಪರ್ಕಕ್ಕೊಳಗಾಗಿದ್ದ ವ್ಯಕ್ತಿಗಳು ಯಾವಾಗಲೋ ಒಮ್ಮೆ ದೊರಕಿಯಾರೇ ಹೊರತು ನಾವು ಬೇಕೆಂದಾಗೆಲ್ಲ ದೊರಕಲಾರರು ತಾನೇ? ಅಲ್ಲದೆ, ಅವರು ಗುರುಗಳ ಸಂಪರ್ಕಕ್ಕೊಳಗಾಗಿದ್ದರೂ ಗುರುಗಳ ಹಿರಿಮೆಯನ್ನು ಗುರುತಿಸುವ ಸಹೃದಯತೆ ಅವರಲ್ಲಿ ಇರಬೇಕೆಂಬ ನಿಯಮ ಇಲ್ಲ ತಾನೇ? ಅಂತಹ ಸಹೃದಯತೆ ಇದ್ದರೂ ತಾವು ಗುರುತಿಸಿಕೊಂಡ ಗುರುಗಳ ಹಿರಿಮೆಯನ್ನು ಪ್ರಭಾವಕಾರಿಯಾಗಿ ತಿಳಿಸುವ ಸಾಮರ್ಥ್ಯ ಅವರಲ್ಲಿ ಇದ್ದೇ ಇರುವುದೆಂದೇನೂ ಹೇಳಲಾಗದು.

ಆದ್ದರಿಂದ ಗುರುಗಳ ಪ್ರವಚನಾದಿಗಳಲ್ಲಿ ಮೂಡಿಬಂದ ಅವರ ಚಿಂತನೆಗಳನ್ನು ಮೆಲುಕು ಹಾಕುವ ಮೂಲಕ ಗುರುಗಳ ಸ್ಮರಣೆಯನ್ನಷ್ಟೇ ಅಲ್ಲದೆ, ಸಂಸ್ಮರಣೆಯನ್ನೂ ಪಡೆದುಕೊಳ್ಳಬಹುದು. ಉದಾಹರಣೆಗೆ– ನಾನಾ ಜನರ ಶುಶ್ರೂಷೆಯನ್ನು ಕರ ಕೊಡಬೇಕಾದಷ್ಟೇ ಕಡ್ಡಾಯವಾಗಿ ನಡೆಸಬೇಕೆಂಬ ಶ್ರೀ ವಿಶ್ವೇಶತೀರ್ಥರ ಚಿಂತನೆ; ನಾವೂ ನಾನಾ ಜನರ ಶುಶ್ರೂಷೆ ನಡೆಸಬೇಕೆಂಬ ವಿಚಾರದ ಜೊತೆಗೆ ಅವರು ತಮ್ಮ ಬದುಕಿನಲ್ಲಿ ಆ ಆದರ್ಶದ ಪಾಲನೆಗೆ ಕೊಟ್ಟ ಪ್ರಾಶಸ್ತ್ಯವನ್ನೆಲ್ಲ ಕಣ್ಣೆದುರು ತಂದುಕೊಳ್ಳಬಹುದು.

ಹೀಗೆ ಗುರುಗಳ ಚಿಂತನೆಗಳನ್ನು ಮನನ ಮಾಡುವ ಮೂಲಕ ಚೆನ್ನಾಗಿ ಸಂಸ್ಮರಣೆ ನಡೆಸಬಹುದೆಂಬುದಕ್ಕಾಗಿಯೇ 'ಯೋಽಂತಃ ಪ್ರವಿಶ್ಯ...' ಕೃತಿ ಹೊರಟಿದೆ.

ತಮ್ಮ ಪ್ರವಚನಗಳ ಮಂಗಲಾಚರಣೆಯಾಗಿ ಗುರುಗಳು ನಿಯತವಾಗಿ ಪಠಿಸುತ್ತಿದ್ದುದರ ಸವಿನೆನಪಿನೊಂದಿಗೆ ಈ ಪದ್ಯದಿಂದ ಪ್ರತಿಪಾದ್ಯನಾದ ವಾಸುದೇವ; ಧ್ರುವನಿಗೆ ಹೇಗೋ ಹಾಗೆ ಗುರುಗಳಿಗೂ ಒಳ್ಳೊಳ್ಳೆ ವಿಚಾರಗಳು ಹೃದಯದಲ್ಲಿ ಯಶಸ್ಸಿಗೆ ಕಾರಣನಾದ ಅವನ ಅನುಗ್ರಹವನ್ನೂ ಗುರುತಿಸಿಕೊಳ್ಳುವಂತಾಗಬೇಕೆಂದು ಈ ಕೃತಿಯನ್ನು 'ಯೋಽಂತಃ ಪ್ರವಿಶ್ಯ...' ಎಂದೆ ಹೆಸರಿಸಲಾಗಿದೆ.

ಕೇಶವಾದಿ ದ್ವಾದಶ ಭಗವದ್ರೂಪಗಳ ಚಿಂತನೆಗಳಿಗೆ ಪೂರಕವಾಗುವಂತೆ ಶ್ರೀವಿಶ್ವಪ್ರಸನ್ನತೀರ್ಥರು ತಮ್ಮ ಗುರುಗಳ ಪಂಚಮ ಪರ್ಯಾಯದಲ್ಲಿ ಕೃಷ್ಣನಿಗೆ ಕೇಶವಾದಿ ದ್ವಾದಶ ಭಗವದ್ರೂಪಗಳ ಅಲಂಕಾರವನ್ನು ಮಾಡಿದ್ದರು. ಈ ಅಲಂಕಾರಗಳ ಛಾಯಾಚಿತ್ರಗಳನ್ನು ಕೊಟ್ಟು ಅದನ್ನು ಕೃತಿಯ 12 ವಿಭಾಗಗಳಲ್ಲಿ ಅಲಂಕರಿಸಲು ಸಹಕರಿಸಿದ ಪರಶುರಾಮರಿಗೂ, ಪೇಜಾವರ ಮಠದ ಹಿರಿಯರಿಗೂ ಕೃತಜ್ಞತೆಗಳು ಹಾಗೂ ಶ್ರೀ ವಿಶ್ವೇಶತೀರ್ಥರ ಫೋಟೋಗಳನ್ನು ನೀಡಿದ ಹರಿಗುರುಭಕ್ತ ಕೆ.ಎಮ್. ಶೇಷಗಿರಿ ಇವರಿಗೆ ಅಭಿನಂದನೆಗಳು.

ಈ ಕೃತಿಯನ್ನು ಪಲಿಮಾರು ಮಠದ ಶ್ರೀ ವಿದ್ಯಾಧೀಶತೀರ್ಥರು ತಮ್ಮ **'ತತ್ವಸಂಶೋಧನ ಸಂಸತ್'** ಮೂಲಕವೇ ಪ್ರಕಟಿಸಲು ಅಪೇಕ್ಷೆಪಟ್ಟಿರುವರು. ಇದರಿಂದಾಗಿ ಶ್ರೀ ವಿಶ್ವೇಶತೀರ್ಥರಿಗೆ ವಾಙ್ಮಯಕಾಣಿಕೆಯನ್ನು ಸಮರ್ಪಿಸಿದಂತಾಗುವುದೆಂಬುದು ಶ್ರೀಪಾದರ ಹಾರ್ದ. ತಮ್ಮ ಅನುಗ್ರಹ ಸಂದೇಶದಿಂದಲೂ ಹರಸಿದ್ದಾರೆ. ಶ್ರೀಪಾದರಿಗೆ ಪ್ರಣಾಮಪೂರ್ವಕ ಕೃತಜ್ಞತೆ.

– ಸಗ್ರಿ ರಾಘವೇಂದ್ರ ಉಪಾಧ್ಯಾಯ

ವಿಜಯದಶಮಿ

ಶಾರ್ವರಿ||



# ಸಂಗ್ರಹದ ಔಚಿತ್ಯ ಮತ್ತು ಹಿನ್ನೆಲೆ

## ಮಾಧ್ವೀರ್ಗಾವೋ ಭವಂತು ನಃ

5 ಪರ್ಯಾಯಗಳನ್ನು ನಡೆಸಿ, ಸಾರ್ಥಕ ಮಾಧ್ವಯತಿಗಳಾಗಿ ಬಾಳಿ ಶ್ರೀ ವಿದ್ಯಾಧೀಶ ತೀರ್ಥರಿಂದ '**ಯತಿಕುಲ ಚಕ್ರವರ್ತಿ**' ಎಂಬ ಮಹಾ ಬಿರುದು ಗಳಿಸಿ, ಜೀವನದ ಕೊನೆಯ ದಿನಗಳವರೆಗೂ ಪಾಠ-ಪ್ರವಚನ-ಸಂಚಾರ ಗೈದು, ಹರಿಪಾದವನ್ನು ಸೇರಿದ ಶ್ರೀಪಾದರು ಪ್ರಾಣ-ನಾರಾಯಣರಿಗೆ ಆಪ್ತರಾಗಿ ಬಾಳಿದವರು. ಎಲ್ಲಾ ಕಡೆ ಪ್ರಾಣ-ನಾರಾಯಣರ ಸೇವೆ ಮಾಡಿದವರು. ಇವೆಲ್ಲದರ ಹಿಂದೆ ಇರುವ ಶ್ರೀಪಾದರ ನಿಷ್ಠೆ ಊಹಾತೀತ. ಶ್ರೀಪಾದರ ಈ ತತ್ತ್ವನಿಷ್ಠೆ, ಧರ್ಮನಿಷ್ಠೆ, ಸಮಾಜನಿಷ್ಠೆ ಮತ್ತು ಆಚಾರನಿಷ್ಠೆಯ ಫಲವಾಗಿಯೇ ಇಂದು ವಿದ್ಯಾಪೀಠ ಮತ್ತು ಸಾವಿರಾರು ಪಂಡಿತರನ್ನು, ಪುರೋಹಿತರನ್ನು ಸಮಾಜ ಕಾಣುವಂತಾಯಿತು.

ಇಂತಹ ಮಹತ್ಸಾಧನೆ ಮಾಡಿದ ಶ್ರೀಪಾದರ ಕುರಿತು, ಅವರ ಲೇಖನ-ಪ್ರವಚನಗಳ ಸಂಗ್ರಹವಾಗಿ ಕೃತಿಗಳು ಕಾಲಕಾಲದಲ್ಲಿ ಬಂದಿವೆ, ಬರುತ್ತಲೂ ಇವೆ. ಈಗ ಪ್ರಸ್ತುತ ಕೃತಿ '**ಯೋಽಂತಃ ಪ್ರವಿಶ್ಯ**' ಅವೆಲ್ಲದರ ಅವಭೃತ ರೂಪದಲ್ಲಿರುವ ಕೃತಿ ಎನ್ನಬಹುದು.

ಕಾರಣ .....

ಇಲ್ಲಿ ಬಂದಿರುವ ಅವರ ಚಿಂತನೆಗಳು (ಲೇಖನ ಮತ್ತು ಪ್ರವಚನಗಳು) ಈ ಹಿಂದೆ ಯಾವ ಪುಸ್ತಕಗಳಲ್ಲೂ ಬಂದಿರದ ಚಿಂತನೆಗಳು. ಅಂದರೆ ಇವೆಲ್ಲವುಗಳನ್ನು ಹಳೆಯ '**ತತ್ತ್ವವಾದ**', '**ಆಚಾರ-ವಿಚಾರ**', '**ಸರ್ವಮೂಲ**' ಮಾಸ ಪತ್ರಿಕೆಗಳಿಂದ ಮತ್ತು ಹಲವಾರು ಸ್ಮರಣ ಸಂಚಿಕೆಗಳಿಂದ ಸಂಗ್ರಹಿಸಲಾಗಿದೆ.

ಶ್ರೀಪಾದರೇ ಪಾಠ ಮಾಡಿ ಬೆಳೆಸಿದ ವಿದ್ವಾಂಸರು ಶ್ರೀಪಾದರ ಪ್ರವಚನಗಳನ್ನು ಸಂಗ್ರಹಿಸಿ '**ತತ್ತ್ವವಾದ**' ಮುಂತಾದ ಪತ್ರಿಕೆಗಳಲ್ಲಿ ಪ್ರತೀ ತಿಂಗಳು ಪ್ರಕಟಿಸುತ್ತಿದ್ದರು, ಮುಖ್ಯವಾಗಿ ಸಗ್ರಿ ರಾಘವೇಂದ್ರ ಉಪಾಧ್ಯಾಯರು, ಎ. ಹರಿದಾಸಭಟ್ಟರು, ರಾಮ ವಿಟ್ಠಲಾಚಾರ್ಯರು, ಬೆಮ್ಮತ್ತಿ ವಿಜಯೀಂದ್ರಾಚಾರ್ಯರು, ಬನ್ನಂಜೆ ರಾಘವೇಂದ್ರ ತೀರ್ಥರು, ಗೋಪಾಡಿ ರಾಘವೇಂದ್ರ ಭಟ್ಟರು, ಬಿ.ಎನ್. ಶ್ರೀಶ ಮುಂತಾದವರೆಲ್ಲ ಮೊಬೈಲ್, ಲಾಪ್‌ಟಾಪ್,

ಕಂಪ್ಯೂಟರ್‌ಗಳಿಲ್ಲದ ಕಾಲ-ಸಮಯದಲ್ಲಿಯೂ ಸ್ವತಃ ಕೇಳಿ, ಧಾರಣೆ ಮಾಡಿ, ಮನನ ಮಾಡಿಕೊಂಡು, ಸಂಗ್ರಹಿಸಿ ಬರೆದು ಪ್ರಕಟಿಸುತ್ತಿದ್ದರು. ಇವರೆಲ್ಲರ ಪರಿಶ್ರಮದ ಫಲವಾಗಿಯೇ ಇಂದು ಹಲವಾರು ಕೃತಿಗಳು ಬಂದಿವೆ. ಪ್ರಸ್ತುತ ಕೃತಿಯೂ ಈ ಎಲ್ಲಾ ವಿದ್ವಾಂಸರ ಪರಿಶ್ರಮದ ಫಲವಾಗಿಯೇ ಪ್ರಕಾಶಗೊಳ್ಳುತ್ತಿದೆ.

ಸಮಗ್ರ ತತ್ತ್ವವಾದ ಮಾಸಪತ್ರಿಕೆಗಳು,

ಸಮಗ್ರ ಸರ್ವಮೂಲ ಮಾಸಪತ್ರಿಕೆಗಳು,

ಸಮಗ್ರ ಆಚಾರ-ವಿಚಾರ ಮಾಸಪತ್ರಿಕೆಗಳು

ಮತ್ತು ಇನ್ನಿತರ ಸ್ಮರಣ ಸಂಚಿಕೆಗಳಿಂದ ಶ್ರೀಪಾದರ ನೂರಾರು ಚಿಂತನೆಗಳನ್ನು (ಈವರೆಗೆ ಎಲ್ಲೂ ಬಂದಿರದ) ಸಂಗ್ರಹಿಸಿ 12 ಭಾಗಗಳಲ್ಲಿ ಕ್ರೋಢೀಕರಿಸಲಾಗಿದೆ.

**ಭಾಗ–1**: 'ದೇವರು' ವಿಭಾಗದಲ್ಲಿ ಭಗವಚ್ಚಿಂತನೆಗಳಿವೆ.

**ಭಾಗ–2** : 'ಕಠೋಪನಿಷತ್ ಸಾರ ಸಂಗ್ರಹ' ವಿಭಾಗದಲ್ಲಿ ಶ್ರೀರಾಮವಿಟ್ಠಲಾಚಾರ್ಯರು ಸಂಗ್ರಹಿಸಿದ ಹುಬ್ಬಳ್ಳಿಯಲ್ಲಿ ನೆರವೇರಿದ ಕಠೋಪನಿಷತ್ ಚಿಂತನೆಗಳು.

**ಭಾಗ–3** : ಹರಿವಂಶ, **ಭಾಗ–4** : ಭಾಗವತ, **ಭಾಗ–5** : ಮಹಾಭಾರತಗಳಿಗೆ ಸಂಬಂಧಪಟ್ಟಂತೆ ಶ್ರೀಪಾದರು ಅಲ್ಲಲ್ಲಿ ಉಪನ್ಯಾಸ ನೀಡುತ್ತಿದ್ದರು. ಅದನ್ನು ರಾಮ ವಿಟ್ಠಲಾಚಾರ್ಯರು ಸಂಗ್ರಹಿಸಿ 'ತತ್ತ್ವವಾದ'ದಲ್ಲಿ ಪ್ರಕಟಿಸುತ್ತಿದ್ದರು. ಅಂತಹ ಎಲ್ಲಾ ಚಿಂತನೆಗಳು ಈ ಭಾಗಗಳಲ್ಲಿವೆ.

ತತ್ತ್ವವಾದ, ಸರ್ವಮೂಲ ಮತ್ತು ಸಿದ್ಧಾಂತಕ್ಕೆ ಸಂಬಂಧಪಟ್ಟಂತೆ ಶ್ರೀಪಾದರ ಹೆಚ್ಚಿನ ಉಪನ್ಯಾಸಗಳನ್ನು ಸಗ್ರಿ ರಾಘವೇಂದ್ರ ಉಪಾಧ್ಯಾಯರು ಸಂಗ್ರಹಿಸುತ್ತಿದ್ದರು. ಅವೆಲ್ಲದರ ಸಂಗ್ರಹವನ್ನು **ಭಾಗ–6** ರಲ್ಲಿ 'ತತ್ತ್ವವಾದ ಮಾಧುರ್ಯ' ವಿಭಾಗದಲ್ಲಿ ಕಾಣಬಹುದು.

**ಭಾಗ–7** ರಲ್ಲಿ ದಾಸ ಸಾಹಿತ್ಯ ಮತ್ತು ವ್ಯಾಸ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಶ್ರೀಪಾದರ ಚಿಂತನೆ, ಉಪನ್ಯಾಸ ಹಾಗೂ ಲೇಖನಗಳ ಸಂಗ್ರಹವು ಇಲ್ಲಿದೆ. ಹಲವು ಉಪನ್ಯಾಸಗಳನ್ನು ಬೆಮ್ಮತ್ತಿ ವಿಜಯೀಂದ್ರಾಚಾರ್ಯರು ಸಂಗ್ರಹಿಸಿದ್ದಾರೆ.

**ಭಾಗ–8** ರಲ್ಲಿ ಸದಾಚಾರಕ್ಕೆ ಸಂಬಂಧಪಟ್ಟ ವಿಚಾರಗಳೂ,

**ಭಾಗ–9** ರಲ್ಲಿ ಶ್ರೀಪಾದರ ಸಾಮಾಜಿಕ ಸಂದೇಶಗಳು, ವಿಶ್ವಹಿಂದೂ ಪರಿಷತ್ತಿನ ಸಭೆಗಳಲ್ಲಿ ನಡೆಸುತ್ತಿದ್ದ ಅನುಗ್ರಹ ಭಾಷಣಗಳ ಸಂಗ್ರಹಗಳೂ ಇವೆ.

**ಭಾಗ–10** ರಲ್ಲಿ 'ಪರಮತ ವಿಮರ್ಶೆ' ಶೀರ್ಷಿಕೆಯಡಿ ಸುಧಾ ಪ್ರವಚನಗಳಲ್ಲಿ ಮತ್ತು ಅಲ್ಲಲ್ಲಿ ಕೆಲವು ವಿಶೇಷ ಸಂದರ್ಭಗಳಲ್ಲಿ ನಡೆಸಿಕೊಡುತ್ತಿದ್ದ ಪರಮತೀಯ ಚಿಂತನೆಗಳ ಸಂಗ್ರಹವನ್ನು ಎ. ಹರಿದಾಸಭಟ್ಟರು ಸಂಗ್ರಹಿಸಿ ತತ್ತ್ವವಾದದಲ್ಲಿ ಪ್ರಕಟಿಸುತ್ತಿದ್ದರು. ಅವೆಲ್ಲದರ ಸಂಗ್ರಹ ಇಲ್ಲಿದೆ.

**ಭಾಗ–11** ರಲ್ಲಿ ಪೇಜಾವರ ಶ್ರೀಪಾದರು ಇತರ ಶ್ರೀಪಾದರೊಂದಿಗೆ ಸೇರಿ ನಡೆಸಿ ಕೊಡುತ್ತಿದ್ದ ಸಂವಾದ ಕಾರ್ಯಕ್ರಮಗಳ ಸಂಗ್ರಹ, ವಿದ್ಯಾರ್ಥಿಗಳೊಂದಿಗಿನ ಸಂವಾದಗಳ ಸಂಗ್ರಹವಿದೆ.

ಕೊನೆಯದಾಗಿ....

**ಭಾಗ–12** ರಲ್ಲಿ ಶ್ರೀಪಾದರು ಹರಿಪದ ಸೇರುವ ಮುಂಚೆ ನಡೆಸಿಕೊಟ್ಟ ರಾಜಾಂಗಣದ ಅಂತಿಮ ಪ್ರವಚನಗಳು, ಹರಿಪಾದ ಸೇರಿದ ದಿನಗಳ ಸಮಗ್ರ ವಿವರಣೆ, ಚರಮ ಶ್ಲೋಕದ ಚಿಂತನೆಗಳು ಹಾಗೂ ಶ್ರೀಪಾದರ ಮಹಾಪ್ರಸ್ಥಾನ ವೈಭವದ ಸಂಗ್ರಹವಿದೆ.

ಹೀಗೆ 12 ಭಾಗಗಳಲ್ಲಿ ಶ್ರೀಪಾದರ ಚಿಂತನೆಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಪೂರಕವಾಗಿ ಅಲ್ಲಲ್ಲಿ ಶ್ರೀಪಾದರ ಸಂದೇಶಗಳನ್ನು ಸಗ್ರಿಯವರ 'ವಿಶ್ವಸಂದೇಶ' ಕೃತಿಯಿಂದ ಸಂಗ್ರಹಿಸಲಾಗಿದೆ.

ನಮ್ಮ ಹಿರಿಯರ, ಗುರುಗಳ ಚಿಂತನೆಗಳ ರಕ್ಷಣೆ, ಪ್ರಕಟಣೆ ಈಗ ಆಗಲೇ ಬೇಕಿರುವ ಕಾರ್ಯಗಳು. ಯಾಕೆಂದರೆ ಅವರ ವಿದ್ವತ್ತು, ಪರಿಶ್ರಮ, ತತ್ತ್ವನಿಷ್ಠೆ ಈಗಿನವರಲ್ಲಿ ಕಾಣುವಂತಿಲ್ಲ. ಈಗಿನವರಲ್ಲಿ ಹೊಸ ಹೊಸ ವಿಚಾರಗಳು ಕಾಣುವುದಿಲ್ಲ. ಕಾರಣ ಅಧ್ಯಯನವಿಲ್ಲ. ಆದರೆ ಹಿಂದಿನವರಲ್ಲಿ, ನಮ್ಮ ಗುರುಗಳಲ್ಲಿ ಇದಕ್ಕೆ ತದ್ವಿರುದ್ಧ. ಅವರು ಹೇಳಿದ್ದೆಲ್ಲಾ ಹೊಸ ಹೊಸ ವಿಚಾರಗಳೇ, ಸ್ಫುರಣೆಗಳೇ. ಇದನ್ನು ಸಗ್ರಿಯವರು ಸಂಪಾದಕೀಯದಲ್ಲಿಯೇ ಉಲ್ಲೇಖಿಸಿದ್ದಾರೆ. ಹಾಗಾಗಿ ಅಂತಹ ಹೊಸ ಹೊಸ ಚಿಂತನೆಗಳನ್ನು ಉಳಿಸಿ ಸಂಗ್ರಹಿಸಿ ಮುಂದಿನ ಜನಾಂಗಕ್ಕೆ ಕೊಡುವುದು ಅವಶ್ಯ ಕರ್ತವ್ಯ.

ಪ್ರಸ್ತುತ ಕೃತಿ ಈ ಕೆಲಸವನ್ನು ಮಾಡಿದೆ ಎಂದು ಹೆಮ್ಮೆಯಿಂದ ಹೇಳಬಹುದು.

ಕೃತಿ ಸಂಗ್ರಹಕ್ಕೆ ಮೂಲ ಸ್ಫೂರ್ತಿ, ಮೂಲ ಪ್ರೇರಣೆ, ಕಾರಣಕರ್ತರು ಸಗ್ರಿಯವರು. ಅವರು ಬರೆದ ಪುಸ್ತಕಗಳ ಪಟ್ಟಿಯೇ ಒಂದು ಪುಸ್ತಕ ಮಾಡುವಷ್ಟು ದೊಡ್ಡದಿದೆ. ಅಷ್ಟು ವ್ಯಾಸ-ಮಧ್ವರ ಸೇವೆ ಮಾಡಿರುವ ಮಹಾಸಾಧಕರು. ಅವರ ಮಾರ್ಗದರ್ಶನ, ನೇತೃತ್ವ ಹಾಗೂ ಸಂಪಾದಕತ್ವದಲ್ಲಿಯೇ ಶ್ರೀಪಾದರ ಪ್ರಥಮಾರಾಧನೆಯಂದು ಪುಸ್ತಕ ಬಿಡುಗಡೆಗೊಳ್ಳುತ್ತಿದೆ. ಕೃತಿಗೆ ಸಂಪಾದಕೀಯವನ್ನೂ, ಮುಖಪುಟವನ್ನೂ ರೂಪಿಸಿ ಮುಖಪುಟ ಸಂದೇಶವನ್ನೂ ಅನುಗ್ರಹಿಸಿ ಅತ್ಯುತ್ತಮವಾಗಿ ಮೂಡಿಬರಲು ಕಾರಣೀಭೂತರಾಗಿದ್ದಾರೆ. ಪುರುಸೊತ್ತಿಲ್ಲ ಎಂದು ಹೇಳುವ ಯುವಕರು ನಾಚುವಂತೆ ಬರವಣಿಗೆಯಲ್ಲಿ ತೊಡಗಿಸಿಕೊಂಡಿರುವ ಸಗ್ರಿಯವರಿಂದ ಇನ್ನೂ ಹೆಚ್ಚಿನ ಗ್ರಂಥಗಳು ಬರಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಸಮಾಜಕ್ಕಾಗಿ ಬಾಳಿದವರು ಶ್ರೀಪಾದರು. ಉತ್ತಮ ಸಮಾಜ ನಿರ್ಮಾಣವಾಗಬೇಕಾದರೆ ಶ್ರೀಪಾದರ ಚಿಂತನೆಗಳನ್ನು ಸ್ವೀಕರಿಸಿ ಅಳವಡಿಸಿಕೊಂಡು ಸಾತ್ವಿಕ ಜೀವನ ನಡೆಸಬೇಕು. ಅಂತಹ ಸಾತ್ವಿಕ ಜೀವನಕ್ಕೆ ಇಂತಹ ಕೃತಿಗಳು ಪ್ರೇರಣೆ ನೀಡಲಿ ಎಂದು ಹಾರೈಸುತ್ತಾ ಕೃತಿಯನ್ನು ಕೊಂಡು ಓದುವ ಎಲ್ಲಾ ಆಧ್ಯಾತ್ಮ ಜಿಜ್ಞಾಸುಗಳಿಗೂ, ಶ್ರೀಪಾದರ ಶಿಷ್ಯರಿಗೂ, ಅಭಿಮಾನಿಗಳಿಗೂ ಅಭಿನಂದನೆ ಮತ್ತು ಅಭಿವಂದನೆಗಳನ್ನು ಸಲ್ಲಿಸುತ್ತೇನೆ.

ಗುರುವಿನ ಗುಲಾಮನಾಗದ ತನಕ ದೊರೆಯದಣ್ಣ ಮುಕುತಿ....

**॥ ವಂದೇ ಗೋಮಾತರಂ ॥**

**॥ ವಂದೇ ಭಾರತ ಮಾತರಂ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

**॥ ಅಚ್ಯುತಾಯ ನಮಃ । ಅನಂತಾಯ ನಮಃ । ಗೋವಿಂದಾಯ ನಮಃ ॥**

**– ವಿಶ್ವೇಶಪ್ರಿಯ ದಾಸ ಓಂಪ್ರಕಾಶ ಭಟ್ಟ**

ಉಡುಪಿ.

ಮೊ : 99640 25922



# ವಿಷಯಾನುಕ್ರಮಣಿಕೆ

## 'ಯೋಽಂತಃ ಪ್ರವಿಶ್ಯ'



★ ★ ★ ★

# ಯೋಽಂತಃ ಪ್ರವಿಶ್ಯ

ಶ್ರೀವಿಶ್ವೇಶತೀರ್ಥರ ಉಪನ್ಯಾಸಗಳಲ್ಲಿ ಬರವಣಿಗೆಗಳಲ್ಲಿ
ಮೂಡಿ ಬಂದ ನೂರಾರು ಅಪೂರ್ವ ಚಿಂತನೆಗಳು



## ಆರಂಭದ ಮಂಗಳ ಶ್ಲೋಕಗಳು

ಪೇಜಾವರಮಠದ ಶ್ರೀವಿಶ್ವೇಶತೀರ್ಥ ಶ್ರೀಪಾದರು ಪ್ರಾಯಃ ತಮ್ಮ ಎಲ್ಲ ಪ್ರವಚನಗಳಲ್ಲಿ ಹೇಳುತ್ತಿದ್ದ ಆರಂಭದ ಮಂಗಳ ಶ್ಲೋಕಗಳು ಇವು:

**ಆಚಾರ್ಯಃ ಪವನೋಽಸ್ಮಾಕಂ ಆಚಾರ್ಯಾಣೀ ಚ ಭಾರತೀ ।**
**ದೇವೋ ನಾರಾಯಣಃ ಶ್ರೀಶಃ ದೇವೀ ಮಂಗಲದೇವತಾ ॥**

**ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ**
**ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।**
**ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್**
**ಪ್ರಾಣಾನ್ ನಮೋ ಭಗವತೇ ಪುರುಷಾಯ ತುಭ್ಯಮ್ ॥**

# ದೇವರು



ಶಂಖ–ಚಕ್ರ–ಗದಾ–ಪದ್ಮಧಾರಿಯಾದ 'ಶ್ರೀ'ಪತಿ **'ಕೇಶವ'**



**ಬಾಲಕೃಷ್ಣನನ್ನೇಕೆ ಪ್ರತಿಷ್ಠಾಪಿಸಿದರು?**

ಬಾಲಕರಲ್ಲಿ ನಿರ್ವ್ಯಾಜಪ್ರೇಮವನ್ನು ಹರಿಸುವುದು ಮಾನವರಲ್ಲಿ ರೂಢವಾಗಿರುವ ಪ್ರವೃತ್ತಿ. ಭಗವಂತನಲ್ಲಿ ಇಂತಹ ನಿರ್ವ್ಯಾಜ ಪ್ರೇಮವನ್ನು ಅಳವಡಿಸಿಕೊಳ್ಳಬೇಕೆಂದರೆ ಅವನ ಬಾಲರೂಪ ಕಣ್ಣ ಮುಂದೆ ಇದ್ದರೆ ಹೆಚ್ಚು ಅನುಕೂಲ. ಈ ದೃಷ್ಟಿಯಿಂದಲೇ ಶ್ರೀಮದಾಚಾರ್ಯರು ಉಡುಪಿಯಲ್ಲಿ ಬಾಲಕೃಷ್ಣನನ್ನೇ ಪ್ರತಿಷ್ಠಾಪಿಸಿರುವರು.

– ಶ್ರೀ ವಿಶ್ವೇಶತೀರ್ಥಶ್ರೀಪಾದರು

## 1. ನರಸಿಂಹನಲ್ಲಿ ವಿರುದ್ಧ ಧರ್ಮಗಳು

ಪರಮಾತ್ಮನನ್ನು ಅಣುವಿಗಿಂತಲೂ ಅಣು, ಬೃಹತ್ತಿಗಿಂತಲೂ ಬೃಹತ್ ಎಂದೇ ಉಪನಿಷತ್ತುಗಳು ಬಣ್ಣಿಸಿವೆ. ಆದರೆ, ಇಂತಹ ವಿರುದ್ಧಧರ್ಮಗಳು ಒಬ್ಬ ವ್ಯಕ್ತಿಯಲ್ಲಿ ಇರುವುದು ಹೇಗೆ? ಎನ್ನುವ ಜಿಜ್ಞಾಸೆ ನಮಗೆ ಬರುತ್ತದೆ. ಈ ಜಿಜ್ಞಾಸೆಗೆ ಉತ್ತರ ನರಸಿಂಹ ದೇವರು. ಅವರು ನರನೂ ಹೌದು, ಸಿಂಹವೂ ಹೌದು. ವಿರುದ್ಧವಾದ ಈ ಎರಡು ಧರ್ಮಗಳು ನರಸಿಂಹನಲ್ಲಿ ಪ್ರತ್ಯಕ್ಷವಾಗಿ ಕಾಣುತ್ತವೆ. ಇದರಂತೆ ಅಣುತ್ವ-ಮಹತ್ವಾದಿ ವಿರುದ್ಧ ಧರ್ಮಗಳೂ ದೇವರಲ್ಲಿ ಇರಬಹುದು. ಇದಕ್ಕೆ ನರಸಿಂಹನೇ ಸಾಕ್ಷಿ.

ನರಸಿಂಹ ಕಂಭದಿಂದ ಮೂಡಿ ಬಂದಿದ್ದಾನೆ. ಕೊಪ್ಪರ ಕ್ಷೇತ್ರದಲ್ಲಿ ಅವನು ಅಶ್ವತ್ಥ ಮರದಲ್ಲಿ ಸಾಲಿಗ್ರಾಮ ಶಿಲೆಯ ರೂಪದಿಂದ ಮೂಡಿದ್ದಾನೆ.

ನರಸಿಂಹ ಹಿರಣ್ಯಕಶಿಪುವಿಗೆ ಭಯಾನಕ. ಪ್ರಹ್ಲಾದನಿಗೆ ಸೌಮ್ಯ. ಯಾವ ಸಿಂಹವು ತನ್ನ ಹಲ್ಲಿನಿಂದ ಇತರ ಪ್ರಾಣಿಗಳನ್ನು ಹಿಂಸಿಸುವುದೋ, ಅದೇ ಸಿಂಹ ಆ ಹಲ್ಲುಗಳಿಂದ ತನ್ನ ಮರಿಗಳನ್ನು ಎತ್ತಿ ಕೊಳ್ಳುತ್ತದೆ. ಇದರಂತೆ ಭಗವಂತನೂ ಭಕ್ತರಿಗೆ ಅಭಯಂಕರ.

* * *

## 2. ಜಾತಿ ಭೇದ ಲೆಕ್ಕಿಸದ ಶ್ರೀರಾಮ

ರಾಮ ಬ್ರಾಹ್ಮಣರ ದೇವ, ಅವರು ಹೇಳುವಂತೆ ಕುಣಿಯುವವ, ಬ್ರಾಹ್ಮಣರ ಮಾತಿಗೆ ಕಿವಿಗೊಟ್ಟು, ಅವರ ದೂರಿನ ಮೇರೆಗೆ ಶಂಬೂಕನೆಂಬ ಶೂದ್ರತಪಸ್ವಿಯನ್ನು ಕೊಂದ. ಬ್ರಾಹ್ಮಣೇತರರಿಗೆ ಅನ್ಯಾಯವೆಸಗಿದ, ಈ ಆಕ್ಷೇಪವನ್ನು ಮುಂದೊಡ್ಡಿ ಕೆಲವರು ಹಿಂದೂ ಸಮಾಜವನ್ನು ಒಡೆಯಲು ಯತ್ನಿಸುತ್ತಾರೆ. ಆದರೆ ಶ್ರೀರಾಮ ಜಾತಿ ಭೇದವನ್ನು ಲೆಕ್ಕಿಸದೆ ಪಶುಪಕ್ಷಿಗಳನ್ನು ತನ್ನೊಂದಿಗೆ ಮೋಕ್ಷಕ್ಕೊಯ್ದವ. ಅತ್ಯಂತ ಹಿಂದುಳಿದ ಬೇಡರ ವರ್ಗದ ಮಹಿಳೆ ಶಬರಿ. ಅವಳನ್ನು ಉದ್ಧರಿಸಿದವ. ಇದನ್ನು ಯಾರೂ ಗಮನಿಸುವುದಿಲ್ಲ. ಶಂಬೂಕನನ್ನು ವಧಿಸಲು ಕಾರಣ ಅವನು ಶೂದ್ರನಾಗಿ ತಪಸ್ಸು ಮಾಡಿದನೆಂಬುದಲ್ಲ; ತಪಸ್ಸಿನ ಗುರಿ ದುರುದ್ದೇಶವಾಗಿರುವುದರಿಂದ. ಸೇವೆಯ ಮುಖವಾಡ ಧರಿಸಿ ಜನರ

ಶೋಷಣೆ ನಡೆಸುವ ಇಂದಿನ ಕೆಲವು ಸಮಾಜ ಸುಧಾರಕರಂತೆ ಶಂಬೂಕನು ತಪಸ್ಸಿನ ಮುಖವಾಡ ಧರಿಸಿ **'ಲೋಕಕ್ಷಯಕಾಮ್ಯಯಾ'** ಲೋಕದ ನಾಶವನ್ನು ಬಯಸಿ ಆ ಕಾರ್ಯದಲ್ಲಿ ತೊಡಗಿದ್ದ. ಅದಕ್ಕಾಗಿ ಅವನನ್ನು ಶ್ರೀರಾಮ ಸಂಹರಿಸಿದ. ಇದನ್ನು ಶ್ರೀಮದಾಚಾರ್ಯರು ಸ್ಪಷ್ಟಪಡಿಸಿದ್ದಾರೆ.

* * *

## 3. ಚಂದ್ರ-ರಾಮಚಂದ್ರ

ರಾಮಚಂದ್ರ ಚಿಕ್ಕ ಬಾಲಕನಾಗಿದ್ದಾಗ ಬೆಳಗುವ ಚಂದ್ರನನ್ನು ಬೇಡಿ ಹಟ ಮಾಡಿದನಂತೆ. ಏನು ಕೊಟ್ಟರೂ ಸಮಾಧಾನವಾಗದೆ ರೋದಿಸುವ ಬಾಲಕನನ್ನು ಕಂಡು ದಶರಥ ಕೌಸಲ್ಯ ವಶಿಷ್ಠ ಮುಂತಾದವರೆಲ್ಲರೂ ಚಿಂತಾಕ್ರಾಂತರಾದರು. ರಾಜಕುಮಾರನನ್ನು ಸಮಾಧಾನ ಪಡಿಸುವ ಬಗೆಯೆಂತು? ಎಲ್ಲರ ದುಗಡ. ಕೊನೆಗೆ ದಶರಥನ ಮಂತ್ರಿ ಸುಮಂತನಿಗೆ ಒಂದು ಯುಕ್ತಿ ಹೊಳೆಯಿತು. ಅವನು ಕೂಡಲೇ ಒಂದು ಕನ್ನಡಿಯನ್ನು ತಂದು ರಾಜಪುತ್ರನ ಮುಂದೆ ಹಿಡಿದ. ಅದರಲ್ಲಿ ಚಂದ್ರನ ಪ್ರತಿಬಿಂಬ ಮೂಡಿತು, ಕನ್ನಡಿಯಲ್ಲಿ ಪಡಿಮೂಡಿದ ಚಂದ್ರನನ್ನು ಕಂಡ ರಾಮನಿಗೆ ಪರಮಾನಂದವಾಯಿತು. ಅವನ ಕೈಯಲ್ಲಿ ಆ ಕನ್ನಡಿಯನ್ನು ಹಿಡಿದುಕೊಂಡು ಚಂದ್ರ ತನ್ನ ಕೈಗೆ ಬಂದ ಎಂದು ಕುಣಿದಾಡಿದ. ಇದನ್ನು ನಾವು ಕೇಳಿದ್ದೇವೆ. ಇದರಲ್ಲಿ ಸತ್ಯಾಂಶ ಎಷ್ಟೇ ಇರಲಿ ಬಿಡಲಿ ಆದರೆ ತಾತ್ವಿಕಾಂಶವನ್ನು ಮಾತ್ರ ಇಂದು ಮೊದಲು ಅರಿಯಬೇಕಾಗಿದೆ.

ಚಂದ್ರನಂತೆ ರಾಮಚಂದ್ರನೂ ಕೂಡಾ ಮುಗ್ಧ ಮಗುವಿನಂತಿದ್ದ. ನಮ್ಮ ಕೈಗೆ ದೊರಕಲಾರ. ದೇವರು ದೊರಕದೇ ಇದ್ದರೆ ಆತ್ಮನಿಗೆ ತೃಪ್ತಿ ಇಲ್ಲ, ಆನಂದವಿಲ್ಲ ಅದಕ್ಕಾಗಿ ಅಧ್ಯಾತ್ಮ ಸಾಮ್ರಾಜ್ಯದ ಮಂತ್ರಿಗಳಂತಿದ್ದ ಆಚಾರ್ಯರೇ ಮೊದಲಾದ ಜ್ಞಾನಿಗಳು ಹೇಳಿದ ಶಾಸ್ತ್ರೋಕ್ತ ಮಾರ್ಗದಿಂದ ನಡೆದರೆ ನಮ್ಮ ಹೃದಯ ಕನ್ನಡಿಯಲ್ಲಿಯೇ ನಮಗೆ ಪರಮಾತ್ಮನ ಪ್ರತಿಬಿಂಬವು ಗೋಚರವಾಗುವುದು. ಆದರೆ ಚಂದ್ರನ ಬಿಂಬವು ಸ್ವಚ್ಛ ಕನ್ನಡಿಯಲ್ಲಿ ಮಾತ್ರ ಬೀಳುವಂತೆ ನಿರ್ದುಷ್ಟವಾದ ಕಾಮ-ಕ್ರೋಧಾದಿ ಕೊಳೆಯಿಲ್ಲದ ಸ್ವಚ್ಛವಾದ ಮನೋ ಮುಕುರದಲ್ಲಿ ಮಾತ್ರ ಭಗವಂತನ ಪ್ರತಿಬಿಂಬ ಮೂಡಬಲ್ಲದು. ಆದುದರಿಂದ ನಾವು ಹೃದಯವನ್ನು

ಶುದ್ಧಗೊಳಿಸಬೇಕು. ಸ್ವಾರ್ಥ, ದುರಾಶೆ, ದುರಹಂಕಾರ, ಕೋಪಾಟೋಪ, ಕಾಮೋನ್ಮಾದ, ಮುಂತಾದ ಕಶ್ಮಲ ತುಂಬಿದ ಹೃದಯದಲ್ಲಿ ದೇವರಿಗೆ ಬರಲಿಕ್ಕೆ ಅವಕಾಶವೆಲ್ಲಿ?

ಭಗವಂತ ನಮ್ಮ ಮನಸ್ಸಿನಲ್ಲಿ ಮೂಡಬೇಕೆಂದಿದ್ದರೆ ಮೊದಲು ನಾವು ಹೃದಯವನ್ನು ಪರಿಶುದ್ಧಗೊಳಿಸಬೇಕು.

* * *

## 4. ಶ್ರೀಕೃಷ್ಣ ಕಲಿಸಿದ ಪಾಠ

ವಸುದೇವ ತನಗೆ ಶಿಶುವಾಗಿ ಅವತರಿಸಿದ ಶ್ರೀಕೃಷ್ಣನನ್ನು ನಂದಗೋಪನಲ್ಲಿ ಬಿಟ್ಟು 'ಮಾಯೆ' ಮಹಾಲಕ್ಷ್ಮೀಯನ್ನು ತನ್ನಲ್ಲಿಗೆ ಕರೆತಂದ. ನಾವೂ ಹೀಗಿಯೇ ಮಾಡುತ್ತಿದ್ದೇವೆ. ನಮ್ಮಲ್ಲಿರುವ ದೇವರನ್ನು ದೂರ ಕಳುಹಿಸಿ, ಮಾಯೆಯನ್ನು, ಪ್ರಕೃತಿಯನ್ನು ಸ್ವೀಕರಿಸುತ್ತೇವೆ. ಅರ್ಥಾತ್ ಪ್ರಕೃತಿಯ ಹೆಚ್ಚಿನ ಪ್ರಭಾವಕ್ಕೆ ಒಳಗಾಗುವಂತೆ ನಡೆದುಕೊಳ್ಳುತ್ತೇವೆ. ಆದರೂ ನಮಗೂ ವಸುದೇವನಿಗೂ ಸ್ವಲ್ಪ ವ್ಯತ್ಯಾಸವಿದೆ. ವಸುದೇವ ಶ್ರೀಕೃಷ್ಣನನ್ನು ಉಳಿಸುವುದಕ್ಕಾಗಿ ಕೃಷ್ಣನನ್ನು ದೂರವಿರಿಸಿ ಮಾಯೆಯನ್ನು ತಂದಿದ್ದರೆ, ನಾವು ದೇವರನ್ನು ಅಳಿಸುವುದಕ್ಕಾಗಿ, ಅರ್ಥಾತ್ ದೇವರಿಂದ ಪರಾಙ್ಮುಖರಾಗುವುದಕ್ಕಾಗಿ ಮಾಯೆಯನ್ನು ಸೇವಿಸುತ್ತಿದ್ದೇವೆ.

### ಪರಿಸರದಲ್ಲಿ ದೇವರು

ದೇವೇಂದ್ರನ ಉತ್ಸವದಲ್ಲಿ ತೊಡಗಿದ್ದ ಗೋಪಾಲಕರನ್ನು ತಡೆದ ಶ್ರೀಕೃಷ್ಣ ಜಡವಾದ ಗೋವರ್ಧನ ಪರ್ವತವನ್ನು ಪೂಜಿಸಲು ಹೇಳಿದ್ದಲ್ಲ, ಮತ್ತೆ ಆ ಪರ್ವತದಲ್ಲಿ, ಪರ್ವತದ ಕಾಡಲ್ಲಿ, ಮರಗಿಡಗಳಲ್ಲಿ ಇರುವ ಭಗವಂತನನ್ನು ಪೂಜಿಸಲು, ಅವನಿಗೆ ಉತ್ಸವವನ್ನು ಅರ್ಪಿಸಲು ಸಂದೇಶಿಸಿದ.

ಭಗವಂತ ಎಲ್ಲೋ ವೈಕುಂಠದ ಅರಮನೆಯ ಸುಪ್ಪತ್ತಿಗೆಯ ಮೇಲಷ್ಟೇ ಸುಖಾಸೀನನಾಗಿರುವನು ಎಂಬ ಭ್ರಮೆ ಸಲ್ಲದು. ಅವನು ದೂರದ ವೈಕುಂಠದಲ್ಲಿರುವಂತೆಯೇ ನಮ್ಮ ಸುತ್ತಮುತ್ತಲ ಪರಿಸರದ ಪದಾರ್ಥಗಳಲ್ಲೂ

ಅವನ ಇರವನ್ನು ಗುರುತಿಸಿಕೊಂಡು, ಅಲ್ಲಿಯೂ ಅವನಿಗೆ ಗೌರವ ಸಲ್ಲಿಸಬೇಕು–ಎಂಬುದು ಶ್ರೀಕೃಷ್ಣನ ಸೂಚ್ಯ ಸಂದೇಶ.

## ಪ್ರಕೃತಿಘಾತುಕರ ಗಮನಕ್ಕೆ

ನಂದಗೋಕುಲದಲ್ಲಿ ನಿವಾಸಿಗಳು ಹೆಚ್ಚಾಗುತ್ತಿದ್ದಂತೆ, ಅಲ್ಲಿಯ ಅರಣ್ಯ, ಪ್ರಕೃತಿಯೆಲ್ಲ ಕ್ಷಯಿಸುತ್ತ ಹೋಯಿತು. ಇದನ್ನು ಕಂಡ ಶ್ರೀಕೃಷ್ಣ ವೃಕ್ಷ, ಸಸ್ಯಾದಿಗಳೆಲ್ಲ ಮಾಯವಾಗುತ್ತಾ ಸುತ್ತ ಬರೇ ಆಕಾಶವೇ ತೋರುತ್ತಿರುವ ಇಲ್ಲಿ ವಾಸಿಸಬಾರದು, ಅರಣ್ಯದ ಅಭಿವೃದ್ಧಿಗೆ, ಪ್ರಕೃತಿಯ ಬೆಳವಣಿಗೆಗೆ ಅವಕಾಶ ನೀಡಬೇಕೆಂದು ತನ್ನ ರೋಮಗಳಿಂದ ತೋಳಗಳನ್ನು ಸೃಷ್ಟಿಸಿ, ಗೋಕುಲದ ಜನರೆಲ್ಲ ವೃಂದಾವನಕ್ಕೆ ತೆರಳುವಂತೆ ಮಾಡಿದ.

ಜನರ ಬದುಕಿಗೆ ಅರಣ್ಯದ ರಕ್ಷಣೆ ಅತ್ಯಾವಶ್ಯಕವಾದುದು– ಎಂಬುದನ್ನು ಶ್ರೀಕೃಷ್ಣ ಈ ತನ್ನ ನಡತೆಯ ಮೂಲಕ ಸಂದೇಶಿಸಿರುತ್ತಾನೆ. ತಮ್ಮ ತಾತ್ಕಾಲಿಕ ಸ್ವಾರ್ಥಕ್ಕಾಗಿ ಅರಣ್ಯಗಳನ್ನು, ಪ್ರಕೃತಿಯನ್ನು ಬಲಿತೆಗೆದುಕೊಳ್ಳುವ ಪ್ರಕೃತಿ–ಘಾತುಕರು ಶ್ರೀಕೃಷ್ಣನ ಈ ಸಂದೇಶವನ್ನು ಗಮನಿಸಬೇಕು.

## ಕಲ್ಪನೆಗೂ ಎಟುಕದ ಆದರ್ಶ

ಕಂಸನನ್ನು ಸಂಹರಿಸಿದ ಶ್ರೀಕೃಷ್ಣನ ಕಾಲಬುಡದಲ್ಲೇ ಇತ್ತು ರಾಜ್ಯ. ಶ್ರೀಕೃಷ್ಣ ಅದಕ್ಕೆ ರಾಜನಾಗಿ ಮೆರೆದಿದ್ದರೆ ಯಾರೂ ಬೇಡ ಅನ್ನುತ್ತಿರಲಿಲ್ಲ. ಆದರೆ ಶ್ರೀಕೃಷ್ಣ ಹಾಗೆ ಮಾಡಲಿಲ್ಲ. ಆ ರಾಜ್ಯ ನ್ಯಾಯವಾಗಿ ಯಾರಿಗೆ ಸೇರಬೇಕೋ, ಅಂತಹ ಉಗ್ರಸೇನನಿಗೇ ಅದನ್ನು ನೀಡಿದನು. ತಾನು ಕಂಸನನ್ನು ಕೊಲ್ಲುವ ಮುನ್ನ ಹೇಗೆ ಗೋಪಾಲಕನಾಗಿದ್ದನೋ, ಅಂತೆಯೇ ಕಂಸನನ್ನು ಕೊಂದ ಮೇಲೂ ಗೋಪಾಲಕನೇ. ತಾನೇನೂ ರಾಜ್ಯದ ಆಸೆಗಾಗಿ ಕಂಸನನ್ನು ಕೊಂದವನಲ್ಲ. ಆದ್ದರಿಂದ ತನಗೇನೂ ಆ ರಾಜ್ಯ ಬೇಕಾಗಿಲ್ಲ–ಶ್ರೀಕೃಷ್ಣನ ಈ ಆದರ್ಶ ಈಗಿನ ರಾಜಕಾರಣಿಗಳ ಕಲ್ಪನೆಗೂ ಎಟುಕದಂತಹುದು.

## ಬರೇ ಸನ್ಮಾನ ಸತ್ಕಾರಗಳಿಗೆ ಒಲಿಯುವವನಲ್ಲ

ಲೌಕಿಕ ಅಧಿಕಾರಿಗಳನ್ನಾಗಲೀ ರಾಜಕಾರಣಿಗಳನ್ನಾಗಲೀ ಸನ್ಮಾನ ಸತ್ಕಾರಾದಿಗಳನ್ನು ಸಲ್ಲಿಸುವುದರ ಮೂಲಕ, ಅವರನ್ನು ಒಲಿಸಿಕೊಂಡು

ಕಾನೂನು ಕಾಯಿದೆಗಳಿಂದ ತಪ್ಪಿಸಿಕೊಳ್ಳಬಹುದು. ಆದರೆ ಭಗವಂತನ ಬಗ್ಗೆ ಹೀಗೆ ನಡೆದುಕೊಂಡರಾಗುವುದಿಲ್ಲ. ಅವನು ಸಂದೇಶಿಸಿದ ಸಂವಿಧಾನವನ್ನು, ಆಚಾರಸಂಹಿತೆಯನ್ನು ಪಾಲಿಸದೆ ಮಿಕ್ಕ ಯಾವ ಪೂಜೆ ಪುರಸ್ಕಾರಗಳಿಂದಲೂ ಅವನನ್ನು ಒಲಿಸಲು ಸಾಧ್ಯವಿಲ್ಲ. ಅವನು ಶ್ರುತಿಸ್ಮೃತಿಗಳಲ್ಲಿ ಉಪದೇಶಿಸಿದ ನೀತಿನಿಯಮಗಳನ್ನು ಜೀವನದಲ್ಲಿ ಅಳವಡಿಸಿಕೊಂಡರಷ್ಟೇ ಅವನು ಪ್ರಸನ್ನನಾಗುವನು.

* * *

## 5. ಶ್ರೀಕೃಷ್ಣ ಪ್ರತಿಷ್ಠಾ ಸಂದೇಶ

ಶ್ರೀಕೃಷ್ಣ ಪ್ರತಿಷ್ಠೆಯ ಕುರಿತು ವಾದವಿವಾದ ಏನೇ ಇರಲಿ, ಶ್ರೀಕೃಷ್ಣ ಗೋಪಿ ಚಂದನದಲ್ಲಿ ಅಡಗಿದ್ದ. ನಾವಿಕರು ಗೋಪೀಚಂದನದ ಹತ್ತಿರವೇ ಇದ್ದರೂ ಅದರಲ್ಲಡಗಿದ್ದ ಕೃಷ್ಣನನ್ನು ಗುರುತಿಸಿರಲಿಲ್ಲ. ಅವರಿಗೆ ಅದು ಕೇವಲ ಗೋಪಿಯ ಗೆಡ್ಡೆಯಾಗಿತ್ತು. ಆಚಾರ್ಯರು ಅದರಲ್ಲಡಗಿದ್ದ ಶ್ರೀಕೃಷ್ಣನನ್ನು ಗುರುತಿಸಿದರು. ಅದರಂತೆ ನಮ್ಮ ಶರೀರವೆಂಬುದು ಗೋಪೀಚಂದನ, ಅದರಲ್ಲಿ ಶ್ರೀಕೃಷ್ಣ ಅಡಗಿದ್ದರೂ ನಮಗೆ ಅಜ್ಞಾತನಾಗಿದ್ದಾನೆ. ಹಿರಿಯರು ಚಿನ್ನವನ್ನು ಭೂಗತ ಮಾಡಿರುತ್ತಾರೆ. ಅದನ್ನರಿಯದ ಮನೆಯೊಡೆಯ ಕಡು ಬಡವನಾಗಿರುತ್ತಾನೆ. ಅದರಂತೆ ನಮ್ಮ ಶರೀರದಲ್ಲೇ ಅಡಗಿದ ಭಗವಂತನೆಂಬ ನಿಧಿಯನ್ನು ತಿಳಿಯದೆ ನಾವು ಬಡವರಾಗಿದ್ದೇವೆ ಎನ್ನುತ್ತದೆ ಛಾಂದೋಗ್ಯ ಉಪನಿಷತ್ತು. ಆಚಾರ್ಯರು ಗೋಪಿಯಲ್ಲಿ ಶ್ರೀಕೃಷ್ಣನನ್ನು ಕಂಡಂತೆ ಈ ಶರೀರದಲ್ಲಿ ನಾವೂ ಭಗವಂತನನ್ನು ಕಾಣಬೇಕು.

ಕೃಷ್ಣನನ್ನು ಹೊತ್ತ ನೌಕೆ ಬಿರುಗಾಳಿಗೆ ತುತ್ತಾಯಿತು. ಆಚಾರ್ಯರು ಕಾವಿಬಟ್ಟೆ ಬೀಸಿ ನೌಕೆಯನ್ನು ದಡ ಮುಟ್ಟಿಸಿದರು ಎನ್ನುತ್ತದೆ ಸಂಪ್ರದಾಯದ ಕಥೆ. ಇದರ ಅರ್ಥ–ನಮ್ಮ ಜೀವನವೆಂಬ ನೌಕೆ ಸಂಸಾರ ಸಾಗರದಲ್ಲಿ ಭೌತಿಕ ಪದಾರ್ಥಗಳ ಆಕರ್ಷಣೆಯೆಂಬ ಬಿರುಗಾಳಿಗೆ ಸಿಕ್ಕಿ ದಿಕ್ಕು ತಪ್ಪಿದೆ. ಮಧ್ವಸಿದ್ಧಾಂತ ಆ ನೌಕೆಯನ್ನು ಗುರಿಮುಟ್ಟಿಸಿ ನಮ್ಮ ಶರೀರದಲ್ಲಡಗಿದ ಶ್ರೀಕೃಷ್ಣನ ದರ್ಶನಮಾಡಿಸುತ್ತದೆ.

ನಮ್ಮ ಹೃದಯವೀಗ ಮಣ್ಣಿನ ಪೀಠವಾಗಿದೆ. ಅದು ರಜತಪೀಠವಾಗಬೇಕು, ತನ್ಮೂಲಕ ಸುಖ, ಸಂಪತ್ತುಗಳನ್ನು ಅನುಭವಿಸುವಂತಾಗಬೇಕು.

* * *

## 6. ಕೃಷ್ಣ ಪ್ರತಿಷ್ಠೆ ಹಿಂದೆ ಇರುವ ರಹಸ್ಯ ತತ್ವ

ಶ್ರೀಮದಾಚಾರ್ಯರು ಶ್ರೀಕೃಷ್ಣನನ್ನು ಕೇಂದ್ರವಾಗಿಟ್ಟುಕೊಂಡು ಭಕ್ತಿಯ ಸಂದೇಶವನ್ನು ನೀಡಿದ್ದಾರೆ. ಭಕ್ತಿ ಎಂದರೆ ಭಗವಂತನಲ್ಲಿ ಪ್ರೇಮ. ಭಗವಂತನ ಜ್ಞಾನ. ಜ್ಞಾನ–ಪ್ರೇಮಗಳ ಸಮನ್ವಯವೇ ಭಕ್ತಿ. ಜ್ಞಾನವಿಲ್ಲದ ಪ್ರೇಮ ಕುರುಡು ಪ್ರೇಮ.

ಪ್ರೇಮವಿಲ್ಲದ ಜ್ಞಾನ ಜಡಪಾಂಡಿತ್ಯ. ಜ್ಞಾನಪ್ರೇಮಗಳು ಎರಡು ಸೇರಿದಾಗ ಮಾತ್ರ ಭಕ್ತಿಯ ನಿಜವಾದ ಉದ್ಗಾರ. ಅಂತಹ ಭಕ್ತಿಯ ಸಂದೇಶವನ್ನು ನೀಡುವಾಗ ಕೇಂದ್ರಬಿಂದುವಾಗಿ ಉಡುಪಿಯಲ್ಲಿ ಕೃಷ್ಣನನ್ನು ಪ್ರತಿಷ್ಠೆ ಮಾಡಿದ್ದಾರೆ. ಕೃಷ್ಣ ಮಂಥಪಾಶಗಳನ್ನು ಧರಿಸಿ ಸಂಸಾರದ ಪಾಶದಿಂದ ನಮ್ಮನ್ನೆಲ್ಲ ಬಂಧಿಸಿದ್ದಾನೆಂದು ತೋರುತ್ತಿದ್ದಾನೆ. ಕೃಷ್ಣ ನಮ್ಮನ್ನು ಭವಪಾಶದಲ್ಲಿ ಬಂಧಿಸಿದರೆ ನಾವು ಕೃಷ್ಣನನ್ನು ಭಕ್ತಿಯ ಪಾಶದಿಂದ ಬಂಧಿಸಬೇಕು. ಆಗ ಮಥನದಿಂದ ಬೆಣ್ಣೆ ಬರುವಂತೆ ಮಂಥನದಿಂದ ಅಮೃತತ್ವದ ಬೆಣ್ಣೆಯನ್ನು ಕೃಷ್ಣನು ಅನುಗ್ರಹಿಸುತ್ತಾನೆ. ಅದಕ್ಕಾಗಿ ಶ್ರೀಕೃಷ್ಣನನ್ನು ಸುಲಭವಾಗಿ ಆರಾಧನೆ ಮಾಡಿ ಅಮೃತತ್ವವನ್ನು ಪಡೆಯಲು ಶ್ರೀಮದಾಚಾರ್ಯರು ಬಾಲಕೃಷ್ಣನನ್ನು ಇಲ್ಲಿ ಸ್ಥಾಪಿಸಿದ್ದಾರೆ.

ಹೀಗೆ ಒಂದು ಕಥೆ ಪ್ರಸಿದ್ಧವಾಗಿದೆ– ಬಿರುಗಾಳಿಯಿಂದ ಮುಳುಗುತ್ತಿದ್ದ ನೌಕೆಯನ್ನು ಆಚಾರ್ಯರು ತಮ್ಮ ಕಾಷಾಯವಸ್ತ್ರವನ್ನು ಬೀಸಿ ರಕ್ಷಣೆ ಮಾಡಿದರು. ಅದರಲ್ಲಿದ್ದ ಗೋಪಿಚಂದನವನ್ನು ಪಡೆದು ಅಲ್ಲಿದ್ದ ಶ್ರೀಕೃಷ್ಣನನ್ನು ತಂದು ಇಲ್ಲಿ ಪ್ರತಿಷ್ಠಾಪಿಸಿದರು, ಎಂದು. ನಾವು ಮಧ್ವರಲ್ಲಿ ಕೇಳುವುದೂ ಇದನ್ನೇ. ಸಂಸಾರಸಾಗರದಲ್ಲಿ ನಮ್ಮ ಬಾಳನೌಕೆಯೂ ಪಾಶ್ಚಾತ್ಯ ಸಂಸ್ಕೃತಿ ಮುಂತಾದ ನಾನಾ ಬಿರುಗಾಳಿಯಿಂದ ತತ್ತರಿಸುತ್ತಿದೆ. ಕಾಷಾಯವಸ್ತ್ರದಿಂದ ಹೇಗೋ ಹಾಗೆ ಭಕ್ತಿಯ ಸಂದೇಶದಿಂದ ಆಚಾರ್ಯರು ಬಾಳ ನೌಕೆಯು

ಮುಳುಗದಂತೆ ಅದನ್ನು ರಕ್ಷಣೆ ಮಾಡುವ ಕಾರ್ಯ ಮಾಡಿದ್ದಾರೆ. ನಿರ್ಮಲವಾದ ಹೃದಯವೆಂಬ ಗೋಪಿಚಂದನದಲ್ಲಿ ಕೃಷ್ಣನನ್ನು ನಮಗೆ ತೋರಿಸಬೇಕು ಎಂದು ನಾವು ಆಚಾರ್ಯರಲ್ಲಿ ಪ್ರಾರ್ಥಿಸಬೇಕು. ಇಂದಿನ ಅನೀತಿ ಭ್ರಷ್ಟಾಚಾರಗಳಿಂದ ತುಂಬಿದ, ಅಸ್ತವ್ಯಸ್ತವಾದ ಈ ಜಗತ್ತನ್ನು ಉಳಿಸಬೇಕಾದರೆ ಆಚಾರ್ಯರ ಭಕ್ತಿಸಿದ್ಧಾಂತವೊಂದೇ ಮಾರ್ಗ ಎಂದು ಸ್ಪಷ್ಟವಾಗಿ ಸಾರಬಹುದು. ಅಂತಹ ಸ್ಫೂರ್ತಿಯನ್ನು ಶ್ರೀಕೃಷ್ಣನು ಕೊಡಲೆಂದು ಪ್ರಾರ್ಥಿಸುತ್ತಿದ್ದೇವೆ.

* * *

## 7. ಆಕಾರ, ಹೆಸರು ಬೇರೆ ಆಗಿದ್ದರೂ ಚಿನ್ನ ಒಂದೇ

ಭಗವಂತನಲ್ಲಿಯೂ ಅವನ ವಿವಿಧ ರೂಪಗಳಲ್ಲಿ ಅನೇಕತ್ವವಿದೆ. ಆದರೆ ಭೇದವಿಲ್ಲ. ಭಗವಂತನು ತಾನು ಒಬ್ಬನೇ ಆಗಿದ್ದರೂ ತನ್ನ ವಿಶಿಷ್ಟ ಶಕ್ತಿಯಿಂದ ಅನೇಕ ರೂಪವನ್ನು ಪಡೆಯಬಲ್ಲನು. ಬೇರೆ ಬೇರೆ ನಾಮಗಳೂ ಇರಬಹುದು. ಬೇರೆ ಬೇರೆ ಕ್ರಿಯೆಗಳೂ ಆ ರೂಪಗಳಿಂದ ನಡೆಯಬಹುದು. ಆದರೂ ಆ ಎಲ್ಲಾ ಅವತಾರಗಳೂ ಒಂದೇ. ಹೀಗೆ ಒಬ್ಬನಲ್ಲಿಯೇ ಏಕತ್ವವೂ ಅನೇಕತ್ವವೂ ಇರಲು ಸಾಧ್ಯವಿದೆ. ಇದನ್ನೇ ವಿಶೇಷ ಶಕ್ತಿಯೆಂದು ಕರೆಯಲಾಗುವುದು. ಆದರೆ ಯಾವ ಸಂದರ್ಭದಲ್ಲಿಯೂ ಭಗವಂತನ ರೂಪ ಮತ್ತು ಅವತಾರಗಳಲ್ಲಿ ಭೇದವಂತೂ ಖಂಡಿತವಾಗಿ ಇಲ್ಲ. ಚಿನ್ನವನ್ನು ಬೇರೆ ಬೇರೆ ಆಭರಣಗಳನ್ನಾಗಿ ರೂಪಿಸುವಾಗ ಅದರ ಆಕಾರ ಹೆಸರುಗಳು ಬೇರೆಯಾಗಿದ್ದರೂ ಅದೆಲ್ಲವೂ ಒಂದೇ ಚಿನ್ನವಾಗಿರುವಂತೆ ವಿವಿಧ ನಾಮ, ರೂಪ, ಅವತಾರಗಳಾಗಿದ್ದರೂ ಭಗವಂತನು ಒಬ್ಬನೇ ಆಗಿರುವನು.

* * *

## 8. ದೇವರು 'ಇಸ್ಪೀಟುರಾಜ' ಅಥವಾ 'ಅನುಕಂಪಾರ್ಹ' ಆಗಬಾರದು

ಅವನೊಬ್ಬ ರಾಜ. ರಾಜ ಧರಿಸಬೇಕಾದ ಕಿರೀಟ ತಲೆಯಲ್ಲಿದೆ. ಭರ್ಜರಿ ಮೀಸೆ ಇದೆ. ಕೈಯಲ್ಲಿ ಖಡ್ಗ ಇದೆ. ಹೌದು ಎಲ್ಲಾ ಇದೆ. ಆದರೆ ಅವನೇನೂ ನಿಜವಾದ ರಾಜ ಅಲ್ಲ. ಇಸ್ಪೀಟು ಎಲೆಯ ಮೇಲಷ್ಟೇ ವಿರಾಜಿಸುತ್ತಿರುವ ಬರೇ ಇಸ್ಪೀಟು ರಾಜ. ಹೆಸರಿಗಷ್ಟೇ ರಾಜ!

ಅದ್ವೈತಮತ ಪ್ರತಿಪಾದಿಸುವ ಬ್ರಹ್ಮನೂ ಹೀಗಿಯೇ. ಗುಣ, ಮಹಿಮೆ, ಲೀಲೆ ಇವುಗಳನ್ನೆಲ್ಲ ಹೊಂದಿರುವ ಬ್ರಹ್ಮ ಇದ್ದಾನೆ ಹೌದು. ಆದರೆ ಅವನು ಸಗುಣ ಬ್ರಹ್ಮನಷ್ಟೇ. ಬ್ರಹ್ಮಜ್ಞಾನ ಬರುವವರೆಗಷ್ಟೇ ರಾಜಿಸುತ್ತಿರುವವನು. ನಿಜವಾದ ಬ್ರಹ್ಮ ಹೆಸರಿಗಳ್ಟೇ ಬ್ರಹ್ಮ. ನಿರ್ಗುಣ, ನಿರಾಕಾರ, ನಿಷ್ಕ್ರಿಯ ಎನಿಸುವ ಅವನು ನಿಜವಾದ ಬ್ರಹ್ಮ ಆಗುವುದಾದರೂ ಹೇಗೆ?

ಬ್ರಹ್ಮನೇ ಜಗತ್ತಾಗಿ ಪರಿಣಾಮಗೊಳ್ಳುವನೆಂದು ಪ್ರತಿಪಾದಿಸುವ ಪರಿಣಾಮವಾದಿಗಳ ಬ್ರಹ್ಮನಂತೂ ನಮ್ಮಿಂದಲೂ 'ಅಯ್ಯೋ' ಎಂದು ಅನುಕಂಪಿಸಬೇಕಾದವನು. ಲೋಪದೋಷಗಳಿಂದ ದುಃಖ ದೌರ್ಬಲ್ಯಗಳಿಂದ ತುಂಬಿರುವ ಈ ಜಗತ್ತಾಗಿ ಪರಿಣಾಮಗೊಂಡು ತಾನೂ ಅಂತಹ ದೋಷಾದಿಗಳಿಗೆ ಪಾತ್ರನಾಗಬೇಕೆಂದರೆ ಅವನು ಒಂದೋ ಅವಿವೇಕಿ ಇಲ್ಲವೇ ಅದನ್ನು ಆಗದಂತೆ ಮಾಡಲು ಅಶಕ್ತನಾದವನು ಎನ್ನಬೇಕು. ಸರ್ವಜ್ಞ ಎಂದು ಒಪ್ಪಲಾಗುವ ಅವನು ಅವಿವೇಕಿ ಅಲ್ಲ. ಅಂದರೆ ತಾನು ಜಗತ್ತಾಗಿ ಪರಿಣಾಮಗೊಳ್ಳುವುದನ್ನು ತಡೆಗಟ್ಟಲು ಅಶಕ್ತನಾಗಿದ್ದು ನಮ್ಮೆಲ್ಲರ ಅನುಕಂಪಕ್ಕೆ ಪಾತ್ರನಾದವನೆಂದು ಹೇಳಬೇಕಾಗುವುದು ತಾನೇ? ದೇವರಿಗೆ ಹೀಗಾಗಬಾರದು. ಅದಕ್ಕಾಗಿಯೇ ಶ್ರೀಮದಾಚಾರ್ಯರು ಶಾಸ್ತ್ರದ ಆಧಾರದಲ್ಲಿ ಈ ಮತಗಳನ್ನೆಲ್ಲ ನಿರಾಕರಿಸಿ ದೇವರು ಸಕಲಗುಣ ಪರಿಪೂರ್ಣನಾದವನು. ಯಾವುದೇ ದೋಷ ಇಲ್ಲದವನು. ಸಕಲವೇದಗಳಿಂದಲೂ ಪ್ರತಿಪಾದ್ಯನಾದವನು ಎಂದು ಸಮರ್ಥಿಸಿರುವರು.

* * * *

# ಕಠೋಪನಿಷತ್ ಸಾರ ಸಂದೇಶ



ಪದ್ಮ-ಗದಾ-ಚಕ್ರ-ಶಂಖಧಾರಿಯಾದ 'ಲಕ್ಷ್ಮೀ'ಪತಿ **'ನಾರಾಯಣ'**



## ಶ್ರೀ ಮಧ್ವಭಾಷ್ಯದ ವೈಶಿಷ್ಟ್ಯ

ಬೇರೆ ಬೇರೆ ಭಾಷ್ಯಕಾರರು ಉಪನಿಷತ್ತುಗಳಿಗೆ ವ್ಯಾಖ್ಯಾನ ಮಾಡುವಾಗ ಅಲ್ಲಿರುವ ಪದಗಳಿಗೆ ಆಧಿದೈವಿಕ, ಆಧಿಭೌತಿಕ, ಆಧಿದೈಹಿಕ ವಸ್ತುಗಳನ್ನೇ ಅರ್ಥವಾಗಿ ತಿಳಿಸುತ್ತಿದ್ದರೆ ಶ್ರೀ ಮಧ್ವಾಚಾರ್ಯರು ಉಪನಿಷತ್ತಿನ ಹೆಚ್ಚಿನ ಪದಗಳು ಪರಮಾತ್ಮನ ಬೇರೆ ಬೇರೆ ಗುಣಗಳನ್ನು ವರ್ಣಿಸುತ್ತಿರುವಂತೆ ಅರ್ಥವಿವರಣೆ ನೀಡಿ ಆವಾವ ವಸ್ತುಗಳಲ್ಲಿರುವ ಪರಮಾತ್ಮನ ರೂಪವಿಶೇಷಗಳನ್ನು ಉಪನಿಷತ್ತು ತಿಳಿಸಿಕೊಡುತ್ತದೆಯೆಂದು ವ್ಯಾಖ್ಯಾನ ಮಾಡಿರುವುದು ಅವರ ವಿಶಿಷ್ಟತೆಯಾಗಿದೆ.

ವ್ಯರ್ಥವಾದ ಭೌತಿಕ ವಸ್ತುಗಳ ವಿವರಣೆಗಳನ್ನು ಬೇರೆ ವ್ಯಾಖ್ಯಾನಗಳಲ್ಲಿ ಕಾಣುವುದಾದರೆ ಶ್ರೀಮಧ್ವಾಚಾರ್ಯರು ಅಪೂರ್ವವಾದ ವೇದ ಮತ್ತು ಪುರಾಣಗಳ ಆಧಾರವಾಕ್ಯಗಳನ್ನು ಉಲ್ಲೇಖಿಸಿ ಉಪಾಸನೆ ಮತ್ತು ಅನುಸಂಧಾನಕ್ಕೆ ಅನುಕೂಲವಾಗುವಂತೆ ಪರಮಾತ್ಮನ ವಿಶಿಷ್ಟ ವ್ಯಕ್ತಿತ್ವವನ್ನು ನಿರೂಪಿಸುವ ಆಧ್ಯಾತ್ಮಿಕ ಸಂದೇಶವನ್ನು ಉಪನಿಷತ್ತಿನಿಂದ ನಾವು ಪಡೆಯುವಂತೆ ಮಾಡಿ ವೇದೋಪನಿಷತ್ತುಗಳ ಬಗ್ಗೆ ನಮ್ಮಲ್ಲಿ ಹೆಚ್ಚಿನ ಭಕ್ತಿ ಗೌರವವನ್ನು ಬೆಳೆಸಿದ್ದಾರೆ. ಇದೇ ಶ್ರೀಮದಾಚಾರ್ಯರ ಉಪನಿಷದ್ಭಾಷ್ಯಗಳ ವೈಶಿಷ್ಟ್ಯವಾಗಿದೆ.

– ಶ್ರೀ ವಿಶ್ವೇಶತೀರ್ಥಶ್ರೀಪಾದರು

## 1. ವೇದದ ಹಿರಿಮೆ

ವೇದ, ಉಪನಿಷತ್ತುಗಳು ಭಾರತೀಯ ಆಧ್ಯಾತ್ಮಿಕ ವಾಙ್ಮಯದಲ್ಲಿ ಅತ್ಯಂತ ಶ್ರೇಷ್ಠಸ್ಥಾನ ಪಡೆದ ಗ್ರಂಥಗಳು. ಧರ್ಮ–ಅಧರ್ಮ–ಪಾಪಪುಣ್ಯ ಮೊದಲಾದ ಅತೀಂದ್ರಿಯ ವಸ್ತುಗಳನ್ನು ತಿಳಿಯಬೇಕಾದರೆ ಇವುಗಳು ಅಗತ್ಯ. ಅದು ಅಪೌರುಷೇಯ. ಯಾವದೇ ಒಬ್ಬ ವ್ಯಕ್ತಿಯಿಂದ ರಚಿತವಾದ ಕೃತಿಗಳಲ್ಲಿ ಅವನ ಅಜ್ಞಾನ, ವಿಪರೀತ ಜ್ಞಾನಾದಿದೋಷಗಳು ಪ್ರತಿಫಲಿತ ಆಗುತ್ತವೆ. ಯಾವುದೇ ಪ್ರಸಿದ್ಧ ಪುರುಷನಾದರೂ ಮನುಷ್ಯ ಸಾಧಾರಣವಾದ ಅಜ್ಞಾನ ಪ್ರಮಾದಗಳು ಅವನಲ್ಲಿ ಇರಲು ಸಾಧ್ಯವಾದ ಕಾರಣ ಅದರಲ್ಲಿ ವಿಶ್ವಾಸ ಹುಟ್ಟಲು ಸಾಧ್ಯವಿಲ್ಲ. ಆದರೆ ಈ ವೇದ ಯಾರೂ ಮಾಡದ ಕಾರಣ ಇದು ನಿರ್ದೋಷ ಯಾರ ದೋಷದ ಪ್ರತಿಫಲನವೂ ಇಲ್ಲಿ ಆಗಲು ಸಾಧ್ಯವಿಲ್ಲ. ಇದು ಕೇವಲ **'ವೇದ'** ತಿಳಿದದ್ದು **'ಶ್ರುತಿ'** ಕೇಳಿದ್ದು ಹೊರತು ಕೃತಿ ಅಲ್ಲ. ಪ್ರಲಯ ಕಾಲದಲ್ಲೂ ಭಗವಂತನ ನಿತ್ಯ ಬುದ್ಧಿಯಲ್ಲಿರುವುದು. ಆದ್ದರಿಂದ ಇವುಗಳ ಸಹಕಾರದಿಂದ ಭಗವಂತನ ಜ್ಞಾನವನ್ನು ಪಡೆದರೆ ನಮಗೆ ಸದ್ಗತಿಯಾಗುವುದು. ಒಂದು ಗಟ್ಟಿಯಾದ ಮರದ ಕೊಂಬೆಯನ್ನು ಹಿಡಿದುಕೊಂಡರೆ ನಮಗೆ ಬೀಳುವ ಭಯವಿಲ್ಲ. ಆದರೆ ಬಳ್ಳಿಗಳನ್ನು ಹಿಡಿದುಕೊಂಡರೆ ಅದೂ ತುಂಡಾಗಿ, ಅದರೊಂದಿಗೆ ನಾವೂ ಬೀಳುತ್ತೇವೆ. ಅದರಂತೆ ಯಾವ ದೋಷವೂ ಇಲ್ಲದ ವೇದವನ್ನೇ ಆಶ್ರಯಿಸಬೇಕೇ ಹೊರತು ಬೇರೆ ಗ್ರಂಥಗಳನ್ನು ಆಶ್ರಯಿಸಿದರೆ ನಮಗೆ ಅಧೋಗತಿಯಾಗುವುದು.

* * *

## 2. ವೇದದಲ್ಲಿ ಉಪನಿಷತ್ತಿನ ಸ್ಥಾನಮಾನ

'ಉಪನಿಷತ್ತು'ಗಳು ವೇದದ ಶಿರಸ್ಸುಗಳು. ವೇದದ ಹೃದಯವನ್ನು ಅರಿಯಬೇಕಾದರೆ ಅದರ ಶಿರಸ್ಸಿನಂತಿರುವ ಉಪನಿಷತ್ತುಗಳನ್ನು ಅಭ್ಯಾಸ ಮಾಡಬೇಕು. ಒಬ್ಬ ಮನುಷ್ಯನ ಹೃದಯದ ಭಾವನೆಗಳು ಅವನ ಮುಖದಿಂದ ವ್ಯಕ್ತವಾಗುವಂತೆ ವೇದದ ಆಂತರ್ಯ ಉಪನಿಷತ್ತುಗಳ ಅಧ್ಯಯನದಿಂದ ತಿಳಿಯಲು ಸಾಧ್ಯವಾಗುವುದು. **'ಉಪನಿಷತ್'** ಎಂದರೆ **'ಉಪ'** ನಮ್ಮ ಹತ್ತಿರದಲ್ಲಿರುವ ಅಜ್ಞಾನ ಎಂಬ ಆವರಣವನ್ನು **'ನಿಷದ್'**

ನಾಶಪಡಿಸುವಂತಹುದು **(ಷದ್‌ಲೃ ವಿಶರಣಗತ್ಯವಸಾದನೇಷು)** ಅಥವಾ **'ಉಪ'** ದೇವರ ಹತ್ತಿರ ನಿಷತ್ ಕರೆದುಕೊಂಡು ಹೋಗುವುದು. ಗುರುಗಳ ಹತ್ತಿರ ಹೋಗಿ ಪಡೆಯುವಂತಹದು. 'ಉಪವಾಸ' ದೇವರ ಹತ್ತಿರ ವಾಸ. ಎಲ್ಲ ಭೋಗ ಪದಾರ್ಥಗಳನ್ನೂ ತೊರೆದು ಭಗವಂತನ ಧ್ಯಾನ-ಚಿಂತನ ಮಾಡುವುದು ಹೊರತು ನಾವು ಮಾಡುವಂತೆ ಭೋಗಪದಾರ್ಥಗಳನ್ನು ಬಿಟ್ಟು ಅದನ್ನು ಧ್ಯಾನಿಸುತ್ತಿರುವುದಲ್ಲ. 'ಉಪನಯನ,' ಭಗವಂತನ ಹತ್ತಿರಕ್ಕೆ ಒಯ್ಯುವುದು. ಅಥವಾ **'ಉಪ'** ಎತ್ತರಕ್ಕೆ ಒಯ್ಯುವುದು. ಹೀಗೆಯೇ **'ಉಪನಿಷತ್'** ಎಂದರೆ, ಎತ್ತರವಾದ ಭಗವಂತನ ಹತ್ತಿರಕ್ಕೆ ಒಯ್ಯುವಂಥದ್ದು ಎಂದರ್ಥ.

* * *

## 3. ಮಾತೃ ಸಮ್ಮಿತೆ

ಈ ಉಪನಿಷತ್‌ಗಳು ವೈದಿಕ ವಾಙ್ಮಯದ ಶ್ರೇಷ್ಠ ಸಾಹಿತ್ಯ, ಕಾವ್ಯಗಳು, ಕಾಂತಾಸಮ್ಮಿತೋಪದೇಶಗಳು. ಕಾಂತೆಯು ತನ್ನ ಪತಿಗೆ ಪ್ರೇಮದಿಂದ ಕೊಡುವ ಉಪದೇಶದಂತೆ ಕಾವ್ಯಗಳು ಅಧಿಕಾರ ವಾಣಿಯನ್ನು ಉಪಯೋಗಿಸದೇ ಕತೆಗಳನ್ನು ಹೇಳುವ ಮೂಲಕ ಮಾರ್ದವತೆಯಿಂದ ಉಪದೇಶ ಕೊಡುವಂತಹವುಗಳು. ವೇದಗಳು ಪ್ರಭುಸಮ್ಮಿತೆ **'ನ ಕಲಂಜಂ ಭಕ್ಷೀತ' 'ಅಹರಹಃ ಸಂಧ್ಯಾಮುಪಾಸೀತ'** ಇತ್ಯಾದಿ ರೀತಿಯಲ್ಲಿ ಇವುಗಳನ್ನು ಮಾಡಲೇಬೇಕು, ಇವುಗಳನ್ನು ಮಾಡಲೇಬಾರದು ಎಂದು ಅಧಿಕಾರವಾಣಿಯಿಂದ ಉಪದೇಶ ನೀಡುತ್ತವೆ. ಆದರೆ ಈ ಉಪನಿಷತ್ತುಗಳು ಮಾತೃಸಮ್ಮಿತೆ. ತಾಯಿ ಮಗುವಿಗೆ ಪ್ರೇಮದಿಂದಲೂ, ಅಧಿಕಾರದಿಂದಲೂ ಉಪದೇಶ ನೀಡುವಂತೆ ಪ್ರೇಮಾಧಿಕಾರದಿಂದ ಉಪನಿಷತ್ತುಗಳು ನಮಗೆ ಉಪದೇಶ ನೀಡುತ್ತವೆ.

* * *

## 4. ಹಂಸತೀರ್ಥವೆನಿಸುವ ಸಾಹಿತ್ಯ

ಸಾಹಿತ್ಯದ ಬಗ್ಗೆ ಭಾಗವತ ನೀಡುವ ನಿರೂಪಣೆ ಮಾರ್ಮಿಕವಾಗಿದೆ. ಸಾಹಿತ್ಯ **'ವಾಯಸತೀರ್ಥ'** ಆಗಬಾರದು- **'ಕಾಕತೀರ್ಥ'** ಆಗಬಾರದು.

**'ಹಂಸತೀರ್ಥ'** ಆಗಬೇಕು. ಹಂಸಗಳು ಕ್ರೀಡಿಸುವ ತೀರ್ಥ ಆಗಬೇಕು. ಯಾವುದು ಭಗವಂತನಿಂದ ನಮ್ಮನ್ನು ವಿಮುಖಗೊಳಿಸುವುದೋ, ಯಾವುದು ಕೇವಲ ಹೃದಯವನ್ನು ಕೆರಳಿಸುವ ವಿಷಯಗಳನ್ನೊಳ-ಗೊಂಡಿರುತ್ತದೋ ಅದು ನಿಜವಾದ ಸಾಹಿತ್ಯವಲ್ಲ. ಅದು ಕಾಗೆಗಳು ನೆಲೆಸುವ ಕೊಳಚೆ ನೀರು-ವಾಯಸತೀರ್ಥ ಆಚಾರ್ಯರ ವ್ಯಾಖ್ಯಾನದ ಪ್ರಕಾರ ಅದು ವಾಯಸತೀರ್ಥ, ವಯಸ್ಸು ಕಳೆಯಲು ಕಾಲ ಕಳೆಯಲು ಇರುವ ಸಾಹಿತ್ಯ. ಯಾವುದು ನಮ್ಮನ್ನು ಭಗವಂತನೆಡೆಗೆ ಒಯ್ಯುವುದೋ ನೀತಿ ಸದ್ಗುಣಗಳ ಕಡೆಗೆ ನಮ್ಮನ್ನು ನಡೆಸುವುದೋ ಅದು ನಿಜವಾದ ಸಾಹಿತ್ಯ. ಅದು ಹಂಸತೀರ್ಥ. ಹಂಸ-ಪರಮಹಂಸರೂ ಓದಬಹುದಾದ ಸಾಹಿತ್ಯವಾಗಬೇಕು. ಸನ್ಯಾಸಿಗಳು ಮನೆಗೆ ಬಂದಾಗ ಹಾಸಿಗೆಯ ಅಡಿಯಲ್ಲಿ ಮುಚ್ಚಿಡಬೇಕಾದ ಪುಸ್ತಕ ಆಗಬಾರದು. ಆದ್ದರಿಂದ ಭಗವಂತನ ಜ್ಞಾನವನ್ನುಂಟು ಮಾಡುವ ಈ ಉಪನಿಷತ್‌ಗಳು ಭಾರತೀಯ ಆಧ್ಯಾತ್ಮಿಕ ವಾಙ್ಮಯದಲ್ಲಿ ಶ್ರೇಷ್ಠವಾದ ಸಾಹಿತ್ಯ.

ಅಂತಹ ಉಪನಿಷತ್ತುಗಳಲ್ಲಿ ಕಠ ಋಷಿಗಳಿಂದ ಪ್ರೋಕ್ತವಾದ ಈ **'ಕಾಠಕೋಪನಿಷತ್'** ಒಂದು ಉತ್ತಮ ಉಪನಿಷತ್ ಅಗಿದೆ.

* * *

## 5. ಲೋಭ ಪ್ರವೃತ್ತಿ

ಉದ್ದಾಲಕ ಮಹರ್ಷಿಗಳು ಯಾಗ ನಡೆಸುತ್ತಿದ್ದರು. ಆ ಯಜ್ಞದಲ್ಲಿ ದಾನಕ್ಕಾಗಿ ಕೆಲವು ಹಸುಗಳನ್ನು ಆಯ್ಕೆ ಮಾಡಿದ್ದರು. ಅವುಗಳನ್ನು ಬ್ರಾಹ್ಮಣರಿಗೆ ಕೊಡಲು ಅಪೇಕ್ಷೆ ಪಟ್ಟಿದ್ದರು. ಆ ಹಸುಗಳು ಹೀಗಿದ್ದವು. **'ಪೀತೋದಕಾ ಜಗ್ಧತೃಣಾ ದುಗ್ಧದೋಹಾಃ ನಿರಿಂದ್ರಿಯಾಃ'** ಅಂದರೆ ಕುಡಿಯಬೇಕಾದ ನೀರು ಕುಡಿದಾಗಿದೆ ಇನ್ನು ನೀರು ಕುಡಿಯಲೂ ಅವು ಅಶಕ್ತ. **'ಜಗ್ಧತೃಣಾ'** ತಿನ್ನಬೇಕಾದ ಹುಲ್ಲನ್ನೆಲ್ಲ ತಿಂದಾಗಿದೆ. ಇನ್ನು ಹುಲ್ಲು ತಿನ್ನಲೂ ಅಸಮರ್ಥ. **'ದುಗ್ಧದೋಹಾ'** ಹಾಲೆಲ್ಲಾ ಕರೆದಾಗಿದೆ. ಇನ್ನು ಹಾಲು ಕೊಡಲಾಗುವುದಿಲ್ಲ. ಹೀಗೆ ಎಲ್ಲ ಇಂದ್ರಿಯಗಳೂ ಕುಂಠಿತವಾಗಿವೆ. ಇಂತಹ ಜರಾಜೀರ್ಣ, ರೋಗಗ್ರಸ್ತ, ಬಡಕಲು ಹಸುಗಳನ್ನು ದಾನಕ್ಕಾಗಿ ಸಿದ್ಧ ಪಡಿಸಿದ. ಕೆಲವು ಬ್ರಾಹ್ಮಣರು ಮನೆಗಳಲ್ಲಿ, ಶ್ರಾದ್ಧಾದಿಕಾಲಗಳಲ್ಲಿ ಬರುವ

ಪುರೋಹಿತರಿಗೆ ಕೊಡಲು ಸವಕಲು ನಾಣ್ಯವನ್ನು ಕೂಡಿ ಹಾಕುವಂತೆ. ಅದಕ್ಕೆ ಮತ್ತೆಲ್ಲೂ ಚಲಾವಣೆಯಿಲ್ಲ. ಹೀಗೆ ಉದ್ದಾಲಕರು ದಾನಕ್ಕಾಗಿ ಸಂಗ್ರಹಿಸಿದ ಹಸುಗಳನ್ನು ಕಂಡು ನಚಿಕೇತ ಹೀಗೆ ವಿಚಾರಿಸತೊಡಗಿದ– ಈ ಬಡಪಾಯಿಗಳಾದ ಜೀರ್ಣ ಹಸುಗಳನ್ನು ನಮ್ಮ ತಂದೆಯವರು ದಾನ ಮಾಡುತ್ತಿರುವರಲ್ಲ, ಇದರಿಂದ ದಾನ ತೆಗೆದುಕೊಂಡವರಿಗೆ ಸ್ವಲ್ಪವೂ ಪ್ರಯೋಜನವಿಲ್ಲ, ಇಂತಹ ಲೋಭ ಪ್ರವೃತ್ತಿಯನ್ನು ಏಕೆ ತಾಳುತ್ತಿದ್ದಾರೋ? ಇಂತಹ ಮುದಿ ಹಸುಗಳನ್ನು ನೀಡುವುದಕ್ಕಿಂತ ನನ್ನನ್ನೇ ಯಾರಿಗಾದರೂ ಕೊಟ್ಟರೆ ಸ್ವಲ್ಪ ಉಪಯೋಗವಾಗಬಹುದು. ನಾನು ಹಾಲು ಕೊಡದಿದ್ದರೂ ಮತ್ತೇನಾದರೂ ಸಾಧ್ಯವಿದ್ದಷ್ಟು ಉಪಕಾರ ಮಾಡಬಹುದು.

* * *

## 6. ನನ್ನನ್ನು ಯಾರಿಗೆ ಕೊಡುವಿರಿ?

ವಿಚಾರ ಮಾಡಿದ ನಚಿಕೇತನು ತಂದೆಯನ್ನು ಪ್ರಶ್ನಿಸುತ್ತಿದ್ದಾನೆ– ತಂದೆ! ನನ್ನನ್ನು ಯಾರಿಗಾದರೂ ದಾನ ಮಾಡಿ, ಇಂತಹ ನಿರುಪಯುಕ್ತ ಗೋವುಗಳನ್ನು ದಾನ ಮಾಡಿ ಪ್ರಯೋಜನವೇನು? ಆದ್ದರಿಂದ ಯಾರಿಗಾದರೂ ಕೊಡಿ. ಈ ಅನುಪಯೋಗಿ ಹಸುಗಳನ್ನು ಮಾತ್ರ ಖಂಡಿತವಾಗಿಯೂ ಕೊಡುವುದು ಬೇಡ. ನನ್ನನ್ನು ಯಾರಿಗೆ ಕೊಡುವಿರಿ! ಎಂದು ಪ್ರಶ್ನಿಸಿದ; ಒಮ್ಮೆ ಪ್ರಶ್ನಿಸಿದಾಗ, "ಏನೋ ಹುಡುಗ ಮಾತನಾಡುತ್ತಾನೆಂದು ಉದಾಸೀನ ತೋರಿದರು. ಎರಡು ಬಾರಿ, ಮೂರು ಬಾರಿ ಕೇಳಿದಾಗ ಉದ್ದಾಲಕರಿಗೆ ಸಿಟ್ಟು ಬಂತು. ಇಷ್ಟು ಚಿಕ್ಕ ಬಾಲಕ ನನ್ನನ್ನು ನನ್ನ ಯಾಗವನ್ನು ಹೀಗೆ ಹಂಗಿಸುತ್ತಾನೆ. ನನ್ನ ಪ್ರವೃತ್ತಿಯನ್ನು ಹಳಿಯುತ್ತಾನೆ. ಹೀಗೆ ಸುಮ್ಮನಿರುವುದು ತರವಲ್ಲ ಎಂದೆನಿಸಿ" ನಿನ್ನನ್ನು ಆ ಯಮನಿಗೆ ಕೊಟ್ಟಿದ್ದೇನೆ ಮೃತ್ಯುವಿಗೆ ದಾನ ಮಾಡಿದ್ದೇನೆ. ಮೃತನಾಗು ಎಂದು ಶಾಪ ಕೊಟ್ಟರು. ಉದ್ದಾಲಕರು ತಪಸ್ವಿಗಳೇ. ಸ್ವಲ್ಪ ಲೋಭ ಪ್ರವೃತ್ತಿ ಮಾತ್ರ ಇತ್ತು. ಶಾಪ ಕೊಡುವ ಸಾಮರ್ಥ್ಯ ಅವರಲ್ಲಿತ್ತು.

ಹೀಗೆ ತಂದೆ ಶಪಿಸಿದಾಗ ವಿಚಲಿತನಾಗದೇ ನಚಿಕೇತ ನುಡಿದ– ತಂದೆಯವರು ಯಮನಲ್ಲಿಗೆ ಹೋಗು ಎಂದು ಶಾಪ ಕೊಟ್ಟಿರುತ್ತೀರಿ,

ಅದರಿಂದ ನನಗೆ ಭಯವಿಲ್ಲ. ಯಮನ ಪಟ್ಟಣಕ್ಕೆ ಹೋಗುವ ಮಂದಿ ಬಹಳ ಇದ್ದಾರೆ. ಅವರಲ್ಲಿ ಮೊದಲಿಗನಾಗಿ, ಮಧ್ಯದವನಾಗಿ, ಅಂತಿಮನಾಗಿ ಹೋಗುತ್ತೇನೆ. ನಿರ್ಜನ ಪ್ರದೇಶದಲ್ಲಿ ಹೋಗಲು ಹೆದರಿಕೆ ಆಗುವುದು. ಈ ಯಮಪುರದ ರಸ್ತೆ ನಿರ್ಜನವೇನಲ್ಲ. ಹೋಗುವವರೂ ಬರುವವರೂ ಬಹಳ ಮಂದಿ ಇರುತ್ತಾರೆ. ಅದು ಬಹಳ ಟ್ರಾಫಿಕ್ ರಸ್ತೆ ಆದ್ದರಿಂದ ಸ್ವಲ್ಪವೂ ಭಯವಿಲ್ಲ. ಅದು ಸರಿ, "ನನ್ನನ್ನು ಯಮನಿಗೆ ಕೊಟ್ಟು ಆಗಬೇಕಾದ ಪ್ರಯೋಜನವೇನು? ಅವನ ಕೆಲಸಕ್ಕೆ ಬೇಕಾದಷ್ಟು ಯಮಭಟರೂ ಅವನಲ್ಲಿಯೇ ಇದ್ದಾರೆ. ಆದರೂ ನೀವು ಹೋಗಲು ಹೇಳಿದ್ದೀರಿ ನಿಮ್ಮ ಮಾತನ್ನೇಕೆ ಮೀರುವುದು. ಇದೋ ಹೋಗುತ್ತೇನೆ" ಎಂದು ಹೇಳಿ ನಚಿಕೇತ ತನ್ನ ಪಾಂಚಭೌತಿಕ ದೇಹವನ್ನು ಪರಿತ್ಯಾಗ ಮಾಡಿ ಯಮಪಟ್ಟಣ ಸೇರಿದನು. ಜೀವನ ಯಜ್ಞದ ಅವಭೃಥವೇ ಮರಣ. ಮರಣ ಜೀವನದ ನೆರಳು, ಕಳ್ಳರು ಮಾತ್ರ ತಮ್ಮ ನೆರಳಿಗೆ ಹೆದರುವರು. ಕರ್ತವ್ಯವನ್ನು ಪೂರೈಸಿದ ಜೀವನು ತನ್ನ ಮರಣಕ್ಕೆ ಹೆದರುವುದಿಲ್ಲ.

* * *

## 7. ಅತಿಥಿ ದೇವೋ ಭವ

ನಚಿಕೇತ ಯಮ ನಗರಿಗೆ ಬಂದಿದ್ದಾನೆ. ಆದರೆ ಯಮ ಮನೆಯಲ್ಲಿರಲಿಲ್ಲ. ಬೇರೆಡೆಗೆ ಹೋಗಿದ್ದ ಯಮನ ಪತ್ನಿ ಶ್ಯಾಮಲಾದೇವಿ ಸ್ವಾಗತಿಸಿದಳು. ಆದರೆ ಯಮ ಬರುವವರೆಗೆ ನಾನು ಮನೆಯೊಳಗೆ ಬರುವುದಿಲ್ಲವೆಂದು ಹೇಳಿ ನಚಿಕೇತ ಮನೆ ಬಾಗಿಲಲ್ಲಿ ಕಾದು ಕುಳಿತನು. ಮೂರು ದಿವಸಗಳ ನಂತರ ಯಮನು ಬಂದನು. ಬಂದು ಬ್ರಹ್ಮಚಾರಿ, ಜ್ಞಾನಿ, ನಚಿಕೇತನನ್ನು ಕಂಡ- ಹರ್ಷಚಿತ್ತನಾಗಿ ಸ್ವಾಗತ ಮಾಡಿ, ಪತ್ನಿಯಿಂದೊಡಗೂಡಿ ಅರ್ಘ್ಯಪಾದ್ಯಾದಿಗಳನ್ನಿತ್ತು ಪೂಜಿಸಿದ. ಮನೆಯನ್ನು ಪ್ರವೇಶಿಸುವ ಅತಿಥಿಯಲ್ಲಿ ವೈಶ್ವಾನರ ರೂಪನಾದ ಪರಮಾತ್ಮ ನೆಲೆಸಿರುತ್ತಾನೆ. ನಾವು ಮಾಡುವ ಸತ್ಕಾರ ಪೂಜೆಗಳು ಅವನಿಗೆ ಸೇರುತ್ತವೆ. ಮನೆಗೆ ಬಂದ ಅತಿಥಿ ನಿರಾಶನಾಗಿ ಹಿಂತಿರುಗಿದರೆ ಅವನು ತನ್ನ ಪಾಪವನ್ನು ಆ ಮನೆಯಲ್ಲಿ ಬಿಟ್ಟು, ಅಲ್ಲಿದ್ದ ಪುಣ್ಯವನ್ನು ತೆಗೆದುಕೊಂಡು ಹೋಗುತ್ತಾನೆ- **'ತತ್ರ ಪಾಪಂ ಪರಿತ್ಯಜ್ಯ ಪುಣ್ಯಮಾದಾಯ ಗಚ್ಛತಿ!'** ಮನೆಗೆ ಬರುವ ಜ್ಞಾನಿ,

ಬ್ರಾಹ್ಮಣ ಅತಿಥಿ ಅಗ್ನಿಯಂತೆ. ಅವನಿಗೆ ಸತ್ಕರಿಸದಿದ್ದರೆ ಅಗ್ನಿಯಂತೆ ನಮ್ಮಲ್ಲಿದ್ದ ಸಂಪತ್ತನ್ನೆಲ್ಲ ಭಸ್ಮ ಮಾಡುತ್ತಾನೆ. ಆದ್ದರಿಂದ ಜ್ಞಾನಿಯಾದ, ಬ್ರಹ್ಮಚಾರಿಯಾದ, ಅತಿಥಿಯಾಗಿ ಬಂದ ನಚಿಕೇತನಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು ಅವರ ಇಚ್ಛೆ ಪೂರ್ಣ ಮಾಡುವುದು ಕರ್ತವ್ಯವೆಂದು ಶ್ಯಾಮಲಾದೇವಿ ಯಮನಿಗೆ ಹೇಳಿದಳು. ಇಬ್ಬರೂ ಆತಿಥ್ಯ ಮಾಡಿದರು.

ಆತಿಥ್ಯ ಮಾಡಿ ಯಮ– ನಚಿಕೇತ! ನಿನಗೆ ನಮಸ್ಕಾರ. ನೀನು ಮೂರು ರಾತ್ರಿಗಳು ಊಟ ಮಾಡದೇ ನಮ್ಮ ಮನೆಯಲ್ಲಿ ವಾಸ ಮಾಡಿದ್ದಿ ಆದ್ದರಿಂದ ಅದಕ್ಕೆ ಪ್ರತಿಯಾಗಿ ಮೂರು ವರಗಳನ್ನು ಕೇಳಬೇಕು. ಕೊಡುತ್ತೇನೆ ಎಂದು

ಬ್ರಹ್ಮಚಾರಿ ನಚಿಕೇತನಲ್ಲಿ ಪ್ರಾರ್ಥಿಸಿದನು.

* * *

## 8. ವರ ಯಾಚನೆ

ನಚಿಕೇತ ಮೊದಲನೇ ವರವನ್ನು ಕೇಳಿದ್ದಾನೆ. ಯಮರಾಜ! ನನ್ನ ತಂದೆಯವರು ಬಹಳ ಕ್ರುದ್ಧರಾಗಿ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾರೆ. ಆ ಕೋಪದಿಂದ ಅವರಿಗೆ ಸರಿಯಾಗಿ ನಿದ್ರೆ ಬರಲಾರದು. ಮನಸ್ಸಿಗೆ ಶಾಂತಿಯಿರುವುದಿಲ್ಲ. ಆದ್ದರಿಂದ ಅವರು ಮತ್ತು ಅವರ ಎಲ್ಲಾ ಕೋಪವೂ ಶಾಂತಚಿತ್ತವಾಗಲಿ. ರಾತ್ರಿ ಸುಖವಾಗಿ ನಿದ್ರೆ ಮಾಡಲಿ. ಇಲ್ಲಿಂದ ಹಿಂತಿರುಗುವಾಗ ಸಂತೋಷದಿಂದ ನನ್ನನ್ನು ಸ್ವಾಗತಿಸುವವರಾಗಲಿ.

ಯಮ– ನಿಮ್ಮ ತಂದೆ ಕೋಪರಹಿತರಾಗಿ ಶಾಂತ ಚಿತ್ತರಾಗಲಿ. ನೀನು ಹೋದಾಗ ಆದರದಿಂದ ಸ್ವಾಗತಿಸಲಿ ಎಂದು ಆ ವರವನ್ನು ಕೊಟ್ಟನು.

ಎರಡನೇ ಪ್ರಶ್ನೆ ಯಾಗಕ್ಕೆ ಸಂಬಂಧ ಪಟ್ಟದ್ದು. ಇಲ್ಲಿಂದ ಪುನರಾವೃತ್ತಿ ಇಲ್ಲದ ಭಗವಂತನ ಲೋಕಕ್ಕೆ ಹೋದಾಗ ಅಲ್ಲಿ ನಮಗೆ ಮುಪ್ಪಿಲ್ಲ, ಭಯವಿಲ್ಲ, ಹಸಿವು ಬಾಯಾರಿಕೆಗಳಿಲ್ಲ. ಎಲ್ಲ ಶೋಕವನ್ನು ದಾಟಿ ಸುಖದಿಂದಿರುತ್ತಾರೆ. ಆ ಸ್ವರ್ಗಕ್ಕೆ ಸಾಧನವಾದ ಯಾಗಾಗ್ನಿಯಲ್ಲಿರುವ ಭಗವಂತನರೂಪವನ್ನು ನನಗೆ ಬೋಧಿಸು. ಯಮದೇವ ನಚಿಕೇತನನ್ನು ಕುರಿತು– ಸ್ವರ್ಗ್ಯ? ಅಗ್ನಿನಾಮಕನಾದ ಭಗವಂತನ ರೂಪವನ್ನು, ಅದಕ್ಕೆ

ಉಪಯೋಗಿಸುವ ಇಟ್ಟಿಗೆಗಳು, ಅವುಗಳ ಸಂಖ್ಯೆ, ಪರಿಮಾಣ ಅವುಗಳಲ್ಲಿನ ಭಗವದ್ರೂಪಗಳನ್ನು ಹೇಳುತ್ತೇನೆ ಆದರೆ ಇವನ್ನೆಲ್ಲ ಹಾಗೆಯೇ. ಪುನಃ ಅನುವಾದಿಸಬೇಕು. ಎಂದು ಹೇಳಿ ಆ ವಿಷಯವನ್ನೆಲ್ಲ ಸವಿವರವಾಗಿ ಹೇಳಲುಪಕ್ರಮಿಸುತ್ತಾನೆ.

* * *

## 9. ಜೀವನವೇ ಯಜ್ಞ

ನಮ್ಮ ಜೀವನವೇ ಒಂದು ಯಜ್ಞ ಆಗಬೇಕು.– **'ಪುರುಷೋ ವಾವ ಯಜ್ಞ',** ನಮ್ಮ ಹೃದಯ ವೇದಿಕೆಯಲ್ಲಿ ನೆಲೆಸಿರುವ ಭಗವಂತನೇ ಅಗ್ನಿ. ಸತ್ಕರ್ಮಗಳೇ ಹವಿಸ್ಸು. ಎಲ್ಲ ಸತ್ಕರ್ಮಗಳನ್ನು ಭಗವಂತನೆಂಬ ಅಗ್ನಿಯಲ್ಲಿ ಪ್ರಕ್ಷೇಪಿಸಬೇಕು ಸಮರ್ಪಿಸಬೇಕು. ಯಜ್ಞಕ್ಕೆ ಹಾಕುವ ಹವಿಸ್ಸು ಪವಿತ್ರವಾಗಿರಬೇಕು. ಶುದ್ಧವಾಗಿರಬೇಕು. ಅಪವಿತ್ರ–ಅಶುದ್ಧವಾದ ಹವಿಸ್ಸಿನ ಪ್ರಕ್ಷೇಪ ನಿಷಿದ್ಧ. ಎಲ್ಲ ಕೆಟ್ಟ ಕೆಲಸವನ್ನು ಮಾಡಿ ಕೃಷ್ಣಾರ್ಪಣವೆನ್ನುವುದು ತರವಲ್ಲ. ಯಜ್ಞದಲ್ಲಿ ದಕ್ಷಿಣೆಗೆ ಪ್ರಾಧಾನ್ಯ. ಜೀವನ ಯಜ್ಞದಲ್ಲಿ ನೀಡಬೇಕಾದ ದಕ್ಷಿಣೆಯೆಂದರೆ ದಯಾ, ಸತ್ಯ, ಅಹಿಂಸೆ ಮೊದಲಾದವುಗಳು. ಮರಣವೇ ಯಜ್ಞದ ಅವಭೃಥ ಸ್ನಾನ, ಯಜ್ಞದಲ್ಲಿ ಬೇಕಾದ 360 ಇಟ್ಟಿಗೆಗಳು ವರ್ಷದ 360 ದಿನಗಳು. ಹೀಗೆ ಜೀವನ ಯಜ್ಞಮಯವಾಗಬೇಕು.

ಯಮದೇವ ವಿವರಿಸಿದ ಯಜ್ಞದ ಸ್ವರೂಪವನ್ನು ನಚಿಕೇತ ಹಾಗೆಯೇ ಅನುವಾದಿಸಿದ.

* * *

## 10. ನಾಚಿಕೇತಾಗ್ನಿಯಾಗಲಿ !

ನಚಿಕೇತನ ಅನುವಾದ, ಅದರ, ಹಿಂದಿನ ಶ್ರದ್ಧೆಯನ್ನು ಮೆಚ್ಚಿದ ಯಮದೇವ–ಇನ್ನು ಮುಂದೆ ಯಾಗಾಗ್ನಿಗೆ ನಾಚಿಕೇತಾಗ್ನಿಯೆಂದೇ ನಾಮಕರಣವಾಗಲಿ. ಇದನ್ನು ಮಾಡಿದ ಪುಣ್ಯ ಪುರುಷರು ಸದ್ಗತಿಯನ್ನು ಹೊಂದುವರು. ಇದೋ ಈ ಸುವರ್ಣಮಯವಾದ ಹಾರ ನಿನಗೆ ಬಹುಮಾನವಾಗಿ, ಸಂತೋಷದ ಕುರುಹಾಗಿ ನೀಡುತ್ತಿದ್ದೇನೆ, ಸ್ವೀಕರಿಸು. ಈ ನಾಚಿಕೇತಾಗ್ನಿಯಲ್ಲಿ ಹೋಮಿಸಿದವರು– **'ತ್ರಿಭಿರೇತ್ಯ ಸಂಧಿಂ'** ಮೂರು

ವೇದಗಳೊಡನೇ ಸಂಧಾನ ಮಾಡಿ ವೇದೋಕ್ತ ಕರ್ಮಗಳನ್ನು ಮಾಡುವವರಾಗಿ ವೇದಾರ್ಥ ಜ್ಞಾನವನ್ನು ಪಡೆಯುವವರಾಗಿ, ತ್ರಿಕರ್ಮಕೃತೆ: ಯಜ್ಞ, ದಾನ ತಪಸ್ಸುಗಳೆಂಬ ಮೂರು ಕರ್ಮಗಳನ್ನು ಮಾಡಿ, ವೇದದ ಮೂಲಕ ಭಗವಂತನನ್ನೂ ವಿಚಾರ ಮಾಡಿ, ಅವನ ಸಾಕ್ಷಾತ್ಕಾರ ಪಡೆದು, ಅವನ ಅನುಗ್ರಹದಿಂದ ಪರಮಾತ್ಮನ ಲೋಕವನ್ನು ಹೊಂದಿ ಸುಖವಾಗಿರುತ್ತಾರೆ ಎಂಬುದಾಗಿ ಪ್ರಶಂಸೆ ಮಾಡುತ್ತಾನೆ.

* * *

## 11. ಮೂರನೇ ವರ

ನಚಿಕೇತ ಯಮನಲ್ಲಿ ಮೂರನೇ ವರವನ್ನು ಕೇಳುತ್ತಿದ್ದಾನೆ–ನಾವು ಮರಣ ಹೊಂದಿದ ಮೇಲೆ ಮೋಕ್ಷದಲ್ಲಿಯೂ ಭಗವಂತನು ನಮಗೆ ನಿಯಾಮಕನಾಗಿರುತ್ತಾನೆಯೇ?

ಕೆಲವರ ವಾದ–ಈ ಸುಖ ದುಃಖಗಳಿಂದ ಕೂಡಿದ ಈ ಜೀವನು ಕೇವಲ ಅವಿದ್ಯಾಕಲ್ಪಿತ. ಈ ಸಂಸಾರಾವಸ್ಥೆಯಿಂದ ಮುಕ್ತಿ ಹೊಂದಿದ ಮೇಲೆ ನಾವು ಭಗವಂತ ಒಂದಾಗುತ್ತೇವೆ. ನಾವು ಬೇರೆಯಲ್ಲ ಆ ದೇವರು ಬೇರೆಯಲ್ಲ. ಅಜ್ಞಾನದಿಂದಾಗಿ ಸಂಸಾರ ದೆಶೆಯಲ್ಲಿ ಬೇರೆಯವರಂತೆ ಕಾಣುತ್ತೇವೆಯಷ್ಟೆ. ನದಿಯು ಸಮುದ್ರಕ್ಕೆ ಸೇರುವಂತೆ ನಾವು ಮುಕ್ತಿಯಲ್ಲಿ ಭಗವಂತನಲ್ಲಿ ಲೀನವಾಗುತ್ತೇವೆ. ಮೋಕ್ಷವಾದ ಮೇಲೆಯೂ ಆ ಭಗವಂತನ ಆಧೀನರಾಗಬೇಕು ಎಂದಾದರೆ ಅದೇತರ ಪುರುಷಾರ್ಥ? ಎಂದಿದೆ.

ಜ್ಞಾನಿಗಳಾದ ಕೆಲವರು ಆ ಮೋಕ್ಷದಲ್ಲಿಯೂ ಭಗವಂತನು ನಿಯಾಮಕನಾಗಿರುತ್ತಾನೆ. ಅನಂತ ಗುಣನಿಧಿಯಾದ ಜ್ಞಾನಾನಂದ ಸ್ವರೂಪನಾದ ಆ ಭಗವಂತನೆಲ್ಲಿ! ದೋಷ ಕಲುಷಿತರಾದ ಅಜ್ಞಾನಿ, ದುಃಖಿಗಳಾದ ನಾವೆಲ್ಲಿ? ನಮಗೂ ಅವನಿಗೂ ಎಷ್ಟು ಮಾತ್ರಕ್ಕೂ ಐಕ್ಯ ಸಲ್ಲದು, ಎನ್ನುತ್ತಿದ್ದಾರೆ.

ಹೀಗೆ ವಿಪ್ರತಿಪನ್ನವಾದ ಈ ವಿಚಾರದ ಬಗ್ಗೆ ನೀನು ನನಗೆ ಉಪದೇಶ ಕೊಡಬೇಕು ಎಂದು ನಚಿಕೇತ ಪ್ರಾರ್ಥಿಸುವನು.

ಇಲ್ಲಿ ಕೆಲವರು ಮರಣದ ನಂತರ ಜೀವ ಇದ್ದಾನೆಯೇ ಇಲ್ಲವೆ? ಈ ದೇಹವೇ ಆತ್ಮನೆಂದು ಕೆಲವರು, ಅತಿರಿಕ್ತನಾಗಿ ಇದ್ದಾನೆಂದು ಕೆಲವರು.

ಹೀಗೆ ವಿಪ್ರತಿಪನ್ನವಾಗಿದೆ, ಆದ್ದರಿಂದ ಇದನ್ನು ಹೇಳು; ಎಂದು ಮರಣೋತ್ತರ ಜೀವನ ಅಸ್ತಿತ್ವದ ಪ್ರಶ್ನೆ ಇದು ಎನ್ನುತ್ತಾರೆ. ಆದರೆ ಇದು ಸರಿಯಾಗುವುದಿಲ್ಲ. ಮರಣೋತ್ತರ ಜೀವನ ಅಸ್ತಿತ್ವದ ಬಗ್ಗೆ ಸಂಶಯ ಬರುವ ಸಂದರ್ಭವೇ ನಚಿಕೇತನಿಗೆ ಇಲ್ಲ. ತಂದೆಯ ಶಾಪದಿಂದ ಮರಣ ಹೊಂದಿದ ಮೇಲೆಯೇ ಯಮನಗರಿಗೆ ಬಂದಿರುವ ನಚಿಕೇತನಿಗೆ, ಮರಣದ ನಂತರವೂ ಜೀವನಿಗೆ ಅಸ್ತಿತ್ವವಿದೆ ಎಂಬುದಕ್ಕೆ ತಾನೇ ಸಾಕ್ಷಿ. ಹೀಗೇ ಪ್ರತ್ಯಕ್ಷ ಅನುಭವವಿರುವಾಗ ಸಂಶಯ ಬರುವ ಸಂದರ್ಭ ಎಲ್ಲಿಯದು!

ಈ ಕಾರಣದಿಂದಲೇ ಮಧ್ವಾಚಾರ್ಯರು ಇಲ್ಲಿ ಮರಣೋತ್ತರ ಕಾಲೀನ ಜೀವನಿಗೆ ಮೋಕ್ಷದಲ್ಲಿ ಈ ಭಗವಂತನು ನಿಯಾಮಕನಾಗಿರುತ್ತಾನೆಯೇ ಎಂಬುದು ನಚಿಕೇತನ ಸಂಶಯ ಎಂದು ವ್ಯಾಖ್ಯಾನಿಸಿದ್ದಾರೆ. 'ಮೋಕ್ಷ' ಎಂದರೆ ನಮ್ಮಲ್ಲೇ ಅಡಗಿರುವ, ನಮ್ಮದೇ ಜ್ಞಾನ–ಆನಂದಗಳ ಅನುಭವವೇ ಆಗಿದೆ, ಹೊರತು ಈಗ ನಮ್ಮಲ್ಲಿಲ್ಲದ ಒಂದು ಹೊಸತನ ಆಗಿ ಬರುವುದಲ್ಲ. ನಾನೇ ಜ್ಞಾನಾನಂದ ಸ್ವರೂಪನಾದರೆ ಅದರ ಅನುಭವಕ್ಕೆ ಭಗವಂತನ ಅವಶ್ಯಕತೆ ಏನಿದೆ? ಹೊಳೆರಾಯನ ನೀರಿಗೆ ದೊಣ್ಣೆರಾಯನ ಅಪ್ಪಣೆ ಏಕೆ? ಎಂದು ಕೆಲವರು ಪ್ರಶ್ನಿಸಬಹುದು. ಆದರೆ ನಮ್ಮದೇ ಆಗಿದ್ದರೂ ಅದರ ಅನುಭವಕ್ಕೆ ಭಗವಂತನ ಅನುಗ್ರಹ ಬೇಕೇ ಬೇಕು. ನಾವು ಚೈತನ್ಯ ಜ್ಞಾನಾನಂದ ಸ್ವರೂಪಿಗಳಾಗಿದ್ದರೂ ಈಗ ನಮಗೆ ಅದರ ಅನುಭವವಿಲ್ಲ, ಕಾರಣ ಏನು?–ಅಜ್ಞಾನದ ಪ್ರಕೃತಿಯ ದಟ್ಟವಾದ ಆವರಣ ಅನಾದಿಯಾಗಿ ಬಂದಿದೆ. ಅದರ ನಿವೃತ್ತಿಗೆ ಭಗವಂತನು ಅವಶ್ಯ. **'ಯಮೇವೈಷ ವೃಣುತೇ ತೇನ ಲಭ್ಯಃ'**, ಯಾರಿಗೆ ಭಗವಂತನು ಪ್ರಸನ್ನನಾಗುವನೋ ಆತನಿಗೆ ಆ ಭಗವಂತನ ಪ್ರಾಪ್ತಿ. ನಮ್ಮ ಕೈಯಲ್ಲಿರುವ ಮೋಕ್ಷದ ಅನುಭವಕ್ಕೆ ಹೀಗೆ ಭಗವಂತನು ಬೇಕಾಗಿದ್ದಾನೆ.

ನಮ್ಮ ಕೈಯಲ್ಲಿರುವ ಮೋಕ್ಷ ಮಗುವಿನ ಕೈಯಲ್ಲಿಯ ಮೋಸಂಬಿಯಂತೆ. ಮಗುವಿನ ಕೈಯಲ್ಲಿ ಮೋಸಂಬಿ ಕೊಟ್ಟರೆ, ಮಗು ಹಣ್ಣು ಸಿಕ್ಕಿತೆಂದು ಸಂತೋಷಪಡುವುದು. ಆದರೆ ಅದನ್ನು ತಿನ್ನಲು ತಾನು ಅಸಮರ್ಥನಾದ್ದರಿಂದ ಅಮ್ಮನ ಬಳಿಗೆ ಹೋಗುವುದು. ತಾಯಿ ಆ ಹಣ್ಣಿನ ಸಿಪ್ಪೆಯನ್ನು ತೆಗೆದು ಒಳಗಿನ ಹಣ್ಣನ್ನು ಅದರ ಬಾಯಿಗೆ ಹಾಕಿದಾಗ

ಸಂತೋಷ ಪಡುವುದು, ಮಗುವಿನ ಕೈಯಲ್ಲಿಯೇ ಇದ್ದರೂ ಆ ಹಣ್ಣಿನ ಆಸ್ವಾದನೆಗೆ ತಾಯಿಯ ಸಹಾಯ ಬೇಕಾಗುವಂತೆ ನಮ್ಮಲ್ಲಿಯೇ ಮೋಕ್ಷವಿದ್ದರೂ ಅಜ್ಞಾನದ ತ್ವಚೆಯ ಮೋಚನೆಗೆ ಭಗವಂತನ ಅನುಗ್ರಹ ಬೇಕಾಗುವುದು.

* * *

## 12. ಭಗವಂತ ದುರ್ಜ್ಞೇಯ

ಮರಣೋತ್ತರ ಕಾಲದಲ್ಲಿಯೇ ಭಗವಂತನು ನಿಯಾಮಕನಾಗಿರುತ್ತಾನೆಯೇ ಎಂಬ ನಚಿಕೇತನ ಮೂರನೇ ಪ್ರಶ್ನೆಗೆ ಯಮ ಉತ್ತರ ಕೊಡದೆ ಜಾರಲು ಯತ್ನಿಸುತ್ತಾನೆ ಅನೇಕ ಸುಖ ಭೋಗಗಳ ಆಶೆ ತೋರಿಸಿ ಇದನ್ನು ಮರೆಯುವಂತೆ ಮಾಡಲು ಯತ್ನಿಸುತ್ತಾನೆ. ನಚಿಕೇತನು ಕೇವಲ ಪ್ರಶ್ನೆ ಮಾಡುತ್ತಿರುವನೋ ಅಥವಾ ನಿಜವಾಗಿಯೂ ಅವನಲ್ಲಿ ಆಧ್ಯಾತ್ಮಿಕದ ಜ್ಞಾನದ ಹಸಿವು ಕಳಕಳಿ ಇದೆಯೇ ಎಂದು ಪರೀಕ್ಷಿಸುವ ಇಚ್ಛೆ ಬರುವುದು. ಕೆಲವರಿಗೆ ಕಳಕಳಿಯಿಲ್ಲದಿದ್ದರೂ ಪ್ರಶ್ನೆ ಕೇಳುವುದು ಒಂದು ಫ್ಯಾಷನ್ ಆಗಿರುತ್ತದೆ.

ಯಮ ನಚಿಕೇತನಿಗೆ-ನಚಿಕೇತ! ಭಗವಂತನ ವಿಚಾರ ಸುಲಭವಾಗಿ ತಿಳಿಯಲು ಸಾಧ್ಯವಿಲ್ಲ. ದೇವತೆಗಳೇ ಇದರ ಬಗ್ಗೆ ಇನ್ನೂ ವಿಚಾರ ವಿಮರ್ಶೆ ಮಾಡುತ್ತಿದ್ದಾರೆ. ನನಗೆ ಇದರ ಬಗ್ಗೆ ಏನೂ ತಿಳಿದಿಲ್ಲ. ಆದ್ದರಿಂದ ದುರ್ಜ್ಞೇಯವಾದ ಈ ವಿಷಯವನ್ನು ಬಿಟ್ಟು ಬೇರೆ ಏನನ್ನಾದರೂ ಕೇಳು ಎಂದನು.

ಆಗ ನಚಿಕೇತ-ದೇವ ದೇವತೆಗಳೂ ಇದರ (ದೇವರ) ಬಗ್ಗೆ ಚಿಂತನೆ ನಡೆಸಿದ್ದಾರೆ. ಎಂದ ಮೇಲೆ ಇದು ಅವಶ್ಯವಾಗಿ ತಿಳಿಯಬೇಕಾದ ವಿಷಯವೆಂದಾಯ್ತು ಆದ್ದರಿಂದ ಇದು ಬಿಟ್ಟು ಬೇರೆ ಯಾವ ವರವೂ ಬೇಡ.

'ಭಗವಂತನ ಬಗ್ಗೆ ನನಗೇನು ತಿಳಿದಿಲ್ಲ' ಎಂದಿರುವಿ ಹಾಗಾದರೆ ನೀನೇ ನಿಜವಾದ ಜ್ಞಾನಿ. ಯಾರು ತಿಳಿದಿದ್ದೇನೆಂದು ತಿಳಿಯುತ್ತಾರೋ ಅವರು ನಿಜವಾಗಿ ಅಜ್ಞಾನಿಗಳು, ಯಾರು ತಿಳಿದಿಲ್ಲವೆಂದು ತಿಳಿಯುವರೋ ಅವರೇ

ನಿಜವಾದ ಜ್ಞಾನಿಗಳು. ನಾನು ಅವನನ್ನು ತಿಳಿದಿದ್ದೇನೆ ಎಂದು ಹೇಳಿದರೆ ನಮ್ಮ ಪರಿಮಿತ ಬುದ್ಧಿಗೆ ಗೋಚರನಾದ ಆ ಭಗವಂತನು ಪರಿಮಿತನೆಂದು ತಿಳಿದಂತಾಯಿತಲ್ಲವೇ? ಭಗವಂತನನ್ನು ತಿಳಿದಿಲ್ಲವೆನ್ನುವವರು, 'ಭಗವಂತನು-ಅಪರಿಮಿತ, ಅವನನ್ನು ತಿಳಿಯಲು ಸಾಧ್ಯವಿಲ್ಲ.' ಎಂದು ತಿಳಿದಂತೆ. ಆದ್ದರಿಂದ ಅವರೇ ನಿಜವಾಗಿ ಜ್ಞಾನಿಗಳು. ಆದ ಕಾರಣ ಈ ವಿಷಯವನ್ನೇ ಉಪದೇಶಿಸು ಎಂದನು.

* * *

## 13. ಶ್ರೇಯಸ್ಸು ಮತ್ತು ಪ್ರೇಯಸ್ಸು

ತನ್ನ ಯಾವ ಪ್ರಲೋಭನೆಗೂ, ಬಲಿಯಾಗದ ನಚಿಕೇತನ ಶ್ರದ್ಧೆಯನ್ನು ಮೆಚ್ಚಿದ ಯಮ ಅವನನ್ನು ಪ್ರಶಂಸೆ ಮಾಡತೊಡಗಿದ; ಪ್ರತಿಯೊಬ್ಬ ಮನುಷ್ಯನ ಮುಂದೆಯೂ ಶ್ರೇಯಸ್ಸು, ಪ್ರೇಯಸ್ಸು ಎಂದು ಎರಡು ಇರುತ್ತವೆ. ಇದರಲ್ಲಿ ಮನುಷ್ಯನು ಯಾವುದನ್ನು ಆಯ್ಕೆ ಮಾಡುತ್ತಾನೆ ಎನ್ನುವುದು ಮುಖ್ಯ.

**ಶ್ರೇಯಸ್**-ಭಗವಂತನ ಬಗ್ಗೆಯ ಜ್ಞಾನ ಸಂಪತ್ತು, ಅಧ್ಯಾತ್ಮ ಸಂಪತ್ತು.

**ಪ್ರೇಯಸ್**- ಪತ್ನೀ ಪುತ್ರಾದಿ ಐಹಿಕ ಸಂಪತ್ತು. ಶ್ರೇಯಸ್ಸು ಮನುಷ್ಯನನ್ನು ಅವನ ಸಂಸಾರದ ಬಂಧನ ಕಳಚಿ ಮುಕ್ತಿಗೆ ಒಯ್ಯುತ್ತದೆ. ಪ್ರೇಯಸ್ಸು ಮನುಷ್ಯನನ್ನು ಮೋಕ್ಷವನ್ನು ತಪ್ಪಿಸಿ ಸಂಸಾರದ ಚಕ್ರದಲ್ಲಿ ದೂಡುತ್ತದೆ. ಇದನ್ನರಿತ ವಿವೇಕಿ ಶ್ರೇಯಸ್ಸನ್ನು ಪರಿಗ್ರಹಣ ಮಾಡುತ್ತಾನೆ. ಪ್ರೇಯಸ್ಸನ್ನು ಅಪೇಕ್ಷಿಸುವುದಿಲ್ಲ. ಸಾಯಂಕಾಲವಾದಾಗ ನಮ್ಮ ಮನಸ್ಸಿನ ಮುಂದೆ ಪುರಾಣ ಪ್ರವಚನ, ಸಿನಮಾ ಎರಡೂ ಬರುತ್ತವೆ. ಕೆಲವರು ಪುರಾಣ ಪ್ರವಚನಕ್ಕೆ ಹೋಗುತ್ತಾರೆ. ಕೆಲವರು ಇದನ್ನು ಗೌಣವಾಗಿಸಿ ಸಿನೆಮಾ ನೋಡಲು ಹೋಗುವರು.

ನಾನು ನಿನಗೆ, ಸಕಲ ಸೌಭಾಗ್ಯದ ಆಮಿಷವನ್ನು ತೋರಿಸಿದಾಗ ಅದಾವುದನ್ನೂ ಬಯಸದೇ ಆ ಮುಕ್ತ ನಿಯಾಮಕ ಭಗವಂತನನ್ನು ಉಪದೇಶಿಸೆಂದು ಒತ್ತಾಯಿಸಿದ್ದಿ. ಬಂಧಕವಾದ ಪ್ರೇಯಸ್ಸನ್ನು ತಿರಸ್ಕರಿಸಿ

ಶ್ರೇಯಸ್ಸನ್ನೇ ಬಯಸಿದ್ದಿ. ಎಲ್ಲ ಜನರು ಅಪೇಕ್ಷೆಪಡುವ ಸುವರ್ಣಮಯ ಶೃಂಖಲೆಯನ್ನು ನೀನು ಅಪೇಕ್ಷಿಸಲಿಲ್ಲ.

ಪ್ರೇಯಸ್ಸನ್ನೇ ಬಯಸುವವರು ಅವಿದ್ಯೆಯ ಮಡುವಿನಲ್ಲಿ ಸಿಲುಕಿ, ತಾವು ಮಹಾಪಂಡಿತರೆಂದು ಭ್ರಮೆ ತಲೆಗೆ ಅಡರಿಸಿಕೊಳ್ಳುತ್ತಾರೆ. ಕಾಮೋಪಭೋಗಗಳಿಂದ ಮೋಹಿತರಾಗಿ ಸ್ವರ್ಗನರಕಾದಿಗಳಲ್ಲಿಯೇ ಪರಿಭ್ರಮಣ ಮಾಡುತ್ತಾರೆ. ಕುರುಡರನ್ನು ಹಿಂಬಾಲಿಸಿದ ಕುರುಡರಂತೆ ಮಾರ್ಗತಪ್ಪಿ ಗುರಿಸಿಗದೇ ಅಲೆದಾಡುತ್ತಾರೆ. ಇಂತಹ ಮೂಢರಿಗೆ ಭಗವಂತನ ಜ್ಞಾನ ಉಂಟಾಗಲು ಸಾಧ್ಯವಿಲ್ಲ. ಅವರು ಈ ಭೌತಿಕ ಸಂಪತ್ತನ್ನೇ ಶಾಶ್ವತವೆಂದು ಭಾವಿಸಿ ಪರಲೋಕದ ಪ್ರಜ್ಞೆ ಇಲ್ಲದೇ ಪುನಃ ಪುನಃ ಯಮಯಾತನೆಯನ್ನು ಅನುಭವಿಸುವವರಾಗಿ ಉದ್ಧಾರದ ಮಾರ್ಗವನ್ನೇ ಕಾಣದೇ ದಿಕ್ಕುಗೆಟ್ಟು ಅಲೆಯುತ್ತಾರೆ.

ಆ ಭಗವಂತನನ್ನು ತಿಳಿಯಬೇಕಾದರೆ ಶ್ರೇಯೋ ಮಾರ್ಗದಲ್ಲಿ ನಡೆಯಬೇಕು. ಶ್ರೀಹರಿಯನ್ನು ಸಂಪೂರ್ಣವಾಗಿ ತಿಳಿಯಲು ಯಾರಿಂದಲೂ ಯಾವುದರಿಂದಲೂ ಅಸಾಧ್ಯ. ಶಾಸ್ತ್ರಶ್ರವಣದಿಂದಾಗಲೀ, ತಪಸ್ಸಿನಿಂದಾಗಲೀ ವೇದದಿಂದಾಗಲೀ ಅವನನ್ನು ಪೂರ್ಣ ಅರಿಯಲು ಸಾಧ್ಯವಿಲ್ಲ. ತರ್ಕದಿಂದ ಬ್ರಹ್ಮಜ್ಞಾನವನ್ನು ಪಡೆಯಲು ಆಗುವುದಿಲ್ಲ. ಬ್ರಹ್ಮನನ್ನು ನಿರಾಕರಿಸಲೂ ಆಗುವುದಿಲ್ಲ. ತರ್ಕದಿಂದ ಏನನ್ನೂ ಸಾಧಿಸಬರುವುದಿಲ್ಲ. ಏಕೆಂದರೆ ತರ್ಕದಿಂದ ಏನನ್ನೂ ಸಾಧಿಸಬಹುದು. ಇದು ಬುದ್ಧಿವಂತಿಕೆಯ ಪ್ರದರ್ಶನವಾದೀತೇ ಹೊರತು ಸತ್ಯದರ್ಶನವಾಗಲಾರದು.

ನಚಿಕೇತ! ನಾನು ಅದೆಂತಹ ಭೌತಿಕ ಭೋಗಭಾಗ್ಯಗಳನ್ನು ಒಡ್ಡಿದರೂ ಅದನ್ನು ಅಪೇಕ್ಷಿಸದೇ ಭಗವಂತನನ್ನು ಉಪದೇಶಿಸೆಂದು ಹೇಳುತ್ತಿರುವಿ. ನೀನು ನಿಜವಾದ ಧೀರ.

ಯಮನು ತತ್ತ್ವೋಪದೇಶವನ್ನು ಬಿಟ್ಟು ತನ್ನ ಪ್ರಶಂಸೆ ಮಾಡುತ್ತಿರುವುದನ್ನು ಗಮನಿಸಿದ ನಚಿಕೇತ:– 'ನನ್ನ ಪ್ರಶಂಸೆ ಸಾಕು; ತತ್ತ್ವ ಬೋಧನೆ ಮಾಡು' ಎಂದನು.

ಯಮನು ತತ್ತ್ವೋಪದೇಶವನ್ನು ಮಾಡಲುಪಕ್ರಮಿಸುತ್ತಾನೆ.-

ಎಲ್ಲ ವೇದಗಳೂ ಯಾವಾತನನ್ನು ಪ್ರತಿಪಾದಿಸುವವೋ, ಯಾರ ಪ್ರೀತಿಯನ್ನು ಸಂಪಾದಿಸಲು ವ್ರತಾಚರಣೆ, ತಪಸ್ಸುಗಳನ್ನು ಎಲ್ಲ ಮಹಾತ್ಮರೂ ಮಾಡುವರೋ, ಅವನು ಓಂಕಾರವಾಚ್ಯನಾದ ಅವಿನಾಶಿ ಪರಬ್ರಹ್ಮ, **'ಓಂ ಇತ್ಯೇತದಕ್ಷರಂ । ಓಮಿತಿ ಬ್ರಹ್ಮ'**, ಜನ್ಮಮೃತ್ಯುರಹಿತನಾದ ಪರಮಾತ್ಮನನ್ನು ಅರಿತವನು ಬ್ರಹ್ಮಲೋಕವನ್ನು ಹೊಂದಿ ಜನ್ಮ ಮರಣ ಹೀನನಾಗುತ್ತಾನೆ.

ಈ ದೇಹ ನಾಶವಾದಾಗ ಅದರೊಳಗಿರುವ ಜೀವನೂ ನಾಶವಾಗುತ್ತಾನೆಯೋ ಎಂದು ಭಾವಿಸಬಾರದು. ಅವನು ಸ್ವರೂಪತಃ ನಾಶರಹಿತನು. ಜೀವನಿಗೆ ಜನ್ಮಮರಣಗಳೆಂದರೆ ದೇಹಯೋಗ-ವಿಯೋಗಗಳೇ ಆಗಿವೆ. ಪರಬ್ರಹ್ಮನನ್ನು ಸರಿಯಾಗಿ ಅರಿತವ ದೇಹದ ಸಂಬಂಧವನ್ನು ಕಳೆದುಕೊಂಡು ಮುಕ್ತನೆನಿಸುತ್ತಾನೆ.

ಯಾರನ್ನು ಹೊಂದಿ ಮುಕ್ತನು ಶೋಕರಹಿತನಾಗುವನೋ, ಆ ಪರಬ್ರಹ್ಮ ಅಣುವಿಗಿಂತ ಅಣು, ಮಹತ್ತಿಗಿಂತ ಮಹತ್. ಎಲ್ಲರ ಹೃದಯದಲ್ಲಿ ನಿಂತು ಸರ್ವಪ್ರೇರಕನಾಗಿದ್ದಾನೆ. ಅವನ ಅಚಿಂತ್ಯಶಕ್ತಿ ಇಂತಹದು- ಹತ್ತಿರದಲ್ಲಿಯೇ ಇರುತ್ತಾನೆ. ದೂರದಲ್ಲಿಯೂ ಇರುತ್ತಾನೆ. ನಶ್ವರವಾದ ಪ್ರಾಣಿಗಳ ದೇಹದಲ್ಲಿದ್ದರೂ ನಿರ್ವಿಕಾರನಾಗಿರುತ್ತಾನೆ. ಎಲ್ಲ ವಿರುದ್ಧ ಧರ್ಮಗಳೂ ಆತನಲ್ಲಿ ಒಂದುಗೂಡಿರುತ್ತವೆ.

ನಾನು ಬಹಳ ಪುರಾಣಗಳನ್ನು ಓದಿದ್ದೇನೆ, ಪ್ರವಚನ ಮಾಡಿದ್ದೇನೆ, ಸಾಕಷ್ಟು ಶಾಸ್ತ್ರಶ್ರವಣ ಮಾಡಿದ್ದೇನೆ, ನಾನು ದೊಡ್ಡ ವಿದ್ವಾಂಸ, ಆದ್ದರಿಂದ ನನಗೆ ಭಗವಂತ ತೋರಬೇಕು ಎಂದು ಹಕ್ಕು ಚಲಾಯಿಸುವಂತಿಲ್ಲ. ಶ್ರೀಹರಿ ಯಾರಿಗೆ ಪ್ರಸನ್ನನಾಗುವನೋ, ಯಾರಿಗೆ ಮುಕ್ತಿ ಕೊಡಬೇಕೆಂದು ಮನಸ್ಸಿಗೆ ತೋರುವುದೋ ಅವನಿಗೆ ಮಾತ್ರ ತನ್ನನ್ನು ತೋರಿಸುತ್ತಾನೆ **'ಯಮೇವೈಷ ವೃಣುತೇ ತೇನ ಲಭ್ಯಃ'**

ಸದಾ ಪರಮ ಅವ್ಯಕ್ತನಾದ ಭಗವಂತ ನಮಗೆ ಅವನು ಪ್ರಸನ್ನನಾಗುವುದು ಬೇಡವೇ? **'ಅತೋಽನಂತೇನ ತಥಾ ಹಿ ಲಿಂಗಮ್'** ಎಂಬ ಬ್ರಹ್ಮಸೂತ್ರದಲ್ಲಿ ಅವ್ಯಕ್ತ ಸ್ವಭಾವದವನಾದ ಪರಮಾತ್ಮನು ನಮಗೆ

ವ್ಯಕ್ತನಾಗಬೇಕಾದರೆ ಅವನ ಪ್ರಸಾದದಿಂದಲೇ ಸಾಧ್ಯ ಎಂದು ವೇದವ್ಯಾಸರು ತಿಳಿಸಿರುತ್ತಾರೆ.

ಕೆಲವರ ವಾದ–ಬ್ರಹ್ಮಜ್ಞಾನ ಬಂದ ಕೂಡಲೇ ಮೋಕ್ಷವಾಗುವುದು. ಸಾಕ್ಷಾತ್ಕಾರ–ಮುಕ್ತಿ ಇವೆರಡರ ನಡುವೆ ಪ್ರಸಾದದ ಪ್ರವೇಶವಿಲ್ಲ ಎಂದು.

ಅದಕ್ಕೆ ಸಮಾಧಾನ–ಭಗವಂತನ ಜ್ಞಾನ ಬಂದ ತಕ್ಷಣದಲ್ಲಿಯೇ ಮೋಕ್ಷವಾಗುವುದಾದರೆ ಈ ಜಗತ್ತಿನಲ್ಲಿ ಜೀವನ್ ಮುಕ್ತರು ಇರಲು ಸಾಧ್ಯವಿಲ್ಲ. ಭಗವಂತನನ್ನು ಅರಿತ ಜ್ಞಾನಿಗಳು ನಮ್ಮಂತಹ ಪಾಮರರಿಗೆ ಬ್ರಹ್ಮ ಜ್ಞಾನೋಪದೇಶವನ್ನೂ ನೀಡಿ ನಮ್ಮನ್ನೂ ಉದ್ಧರಿಸಬೇಕು. ಜ್ಞಾನ ಬಂದ ಕೂಡಲೇ ಮುಕ್ತಿಯನ್ನು ಹೊಂದಿದರೆ ಉಳಿದ ಅಜ್ಞಾನಿಗಳ ಗತಿಯೇನು? ಅವರಿಗೆ ಉಪದೇಶ ನೀಡುವವರಾರು? ಉಪದೇಶ ಮಾಡುವವರಿಗೆ ಬ್ರಹ್ಮಜ್ಞಾನವಿಲ್ಲ. ಬ್ರಹ್ಮಜ್ಞಾನ ಪಡೆದ ಭಗವಂತನ ವ್ಯಕ್ತಿಗಳು, ಉಪದೇಶ ಮಾಡಲು ಇಲ್ಲಿಲ್ಲ. ಎಂದಾಗುವುದು. ಆದ್ದರಿಂದ ಭಗವಂತನ ಅಪರೋಕ್ಷ ಜ್ಞಾನ ಪಡೆದ ಮೇಲೂ ಭಗವತ್ಪ್ರಸಾದಕ್ಕಾಗಿ ಕಾಯಬೇಕು. ಉಳಿದವರಿಗೆ ಉಪದೇಶ ನೀಡಬೇಕು. **'ಯಸ್ಯ ಪ್ರಸಾದಾತ್ಪರಮಾರ್ತಿರೂಪಾತ್ ಅಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ'** ಎಂಬ ಶ್ರುತಿಯು ಭಗವತ್ಪ್ರಸಾದದಿಂದಲೇ ಮೋಕ್ಷ ಎಂದು ಸಾರುತ್ತಿದೆ.

ಹಾಗಾದರೆ ದೇವರ ಪ್ರಸಾದ ಸಾಕು. ಜ್ಞಾನಭಕ್ತಿವೈರಾಗ್ಯಾದಿಗಳು ಏಕೆ? ಇಂದ್ರಿಯವಶನಾದ ದುರಾಚಾರಿಗೆ ಭಗವಂತನ ಪ್ರಸಾದ ಆಗಲಾರದು. ಜ್ಞಾನವೈರಾಗ್ಯಾದಿಗಳು ಇದ್ದರೆ ಮಾತ್ರ ಭಗವಂತನ ಪ್ರಸಾದ ಆಗುವುದು.

ಈ ರೀತಿ ಭಗವಂತನನ್ನು ಚೆನ್ನಾಗಿ ಅರಿತು ಧ್ಯಾನ ಮಾಡಿ ಸಾಕ್ಷಾತ್ಕಾರ ಪಡೆಯಬೇಕು. ಅದರಿಂದ ಅವನ ಪ್ರಸಾದ ಹೊಂದಿ ಮೋಕ್ಷ ಪಡೆಯಬಹುದು.

* * *

## 14. ಧ್ಯಾನದ ಮೂಲಕ ಜ್ಞೇಯ

**'ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ'** (1–2–12)

ಧ್ಯಾನಯೋಗದಿಂದ ಭಗವಂತನನ್ನು ಕಂಡ ಧೀರ ಸಾಧಕ ಲೌಕಿಕವಿಷಯ ಪದಾರ್ಥಗಳ ಲಾಭ ಅಲಾಭಗಳಿಂದ ಸುಖ ದುಃಖಗಳನ್ನು ಹೊಂದುವುದಿಲ್ಲ, ಭಗವಂತನ ಜ್ಞಾನದಿಂದ ತೃಪ್ತಿಗೊಂಡು ಆನಂದ ಭರಿತನಾಗಿರುತ್ತಾನೆ. ಹೀಗೆ ಭಗವಂತನ ಧ್ಯಾನ ಮಾಡಿ ಅವನ ಅಪರೋಕ್ಷ ಜ್ಞಾನವನ್ನು ಪಡೆಯಬೇಕು ಎಂದು ತಿಳಿಸಿದ ಮೇಲೆ ಭಗವಂತನನ್ನು ಎಲ್ಲಿ ಹೇಗೆ ಧ್ಯಾನ ಮಾಡಬೇಕು ಎನ್ನುವುದನ್ನು ತಿಳಿಸುತ್ತಿದೆ.

* * *

## 15. ಹೇಗೆ ಧ್ಯಾನಿಸಬೇಕು ?

ನಮ್ಮ ಹೃದಯದಲ್ಲಿರುವ ಜೀವೋತ್ತಮನಾದ ಮುಖ್ಯಪ್ರಾಣನಲ್ಲಿ ಭಗವಂತನು, ಆತ್ಮ ಅಂತರಾತ್ಮ ಎಂಬ ಎರಡು ರೂಪಗಳಿಂದ ನೆಲೆಸಿದ್ದಾನೆ. ನಾವು ಮಾಡುವ ಸತ್ಕರ್ಮಗಳ ಶುಭಫಲವನ್ನು ಸ್ವೀಕರಿಸುತ್ತಿದ್ದಾನೆ. ಭಗವಂತನಿಗೆ ನಾವು ಸತ್ಕರ್ಮಗಳ ಶುಭ ಫಲವನ್ನು ಮಾತ್ರ ಸಮರ್ಪಿಸಬೇಕು. ಅದನ್ನು ಮಾತ್ರ ದೇವರು ಸ್ವೀಕರಿಸುವುದು. ಮಾಡಬಾರದ ದುಷ್ಕೃತ್ಯಗಳನ್ನೆಲ್ಲ ಮಾಡಿ ಕೊನೆಗೆ ಶ್ರೀಕೃಷ್ಣಾರ್ಪಣಮಸ್ತು ಎಂದು ಕೈ ತೊಳೆಯುವುದಲ್ಲ. **'ಶುಭಾನ್ ಪಿಬತಿ ಭೋಗಾನ್ ಸಃ'**

* * *

## 16. ಕರ್ಮ ಸಮರ್ಪಣೆ

**'ದ್ವಾ ಸುಪರ್ಣಾ...'** ಎಂಬ ಶ್ರುತಿಯಲ್ಲಿ **'ಅನಶ್ನನ್'**– ಕರ್ಮಫಲವನ್ನು ಅನುಭವಿಸದೇ ಭಗವಂತನು ಪ್ರಕಾಶಿಸುತ್ತಿದ್ದಾನೆ ಎಂದು ಹೇಳಿದೆ. ಇಲ್ಲಿ ಭಗವಂತನು ಕರ್ಮಫಲವನ್ನು ಭೋಗಿಸುತ್ತಾನೆ ಎನ್ನುವುದು ಹೇಗೆ? ಅಲ್ಲಿ ಅಶುಭ ಫಲವನ್ನು ದೇವರು ಭೋಗಿಸುವುದಿಲ್ಲವೆಂದು ಹೇಳಿರುವುದು. ಇಲ್ಲಿ ಶುಭಫಲವನ್ನು ಅನುಭವಿಸುವನೆಂದು ಹೇಳುತ್ತಿರುವುದು **'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್** ।' ಕೆಲವರು– ಪಾಪ ಪುಣ್ಯವನ್ನೆಲ್ಲ ದೇವರಿಗೆ ಸಮರ್ಪಿಸಬೇಕು. ಶ್ರೀಕೃಷ್ಣನೂ– **'ಯತ್ಕರೋಷಿ... ತತ್ ಕುರುಷ್ವ ಮದರ್ಪಣಮ್'** ಎಂದಿರುವನು. **'ಕರೋಮಿ ಯದ್ಯತ್ ಸಕಲಂ ಪರಸ್ಮೈ'** ಏನೇನು ಮಾಡುತ್ತೇವೆ ಎಲ್ಲವನ್ನು ಹರಿಗೆ ಸಮರ್ಪಿಸಬೇಕು ಎನ್ನುತ್ತಾರೆ,

ಈ ವಿಷಯದಲ್ಲಿ ಕೆಲವು ದಾಸರ ಪದಗಳನ್ನು ಉದಾಹರಿಸುತ್ತಾರೆ. ಅದು ಸರಿಯಲ್ಲ. ಪುಣ್ಯವನ್ನು ಮಾತ್ರ ಹರಿಗೆ ಸಮರ್ಪಿಸಬೇಕು. **'ಶುಭಂ ಪಿಬತ್ಯ – ಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್'**.

ಅಶುಭ ಕರ್ಮ ಫಲವನ್ನು ಸ್ವೀಕರಿಸುವುದಿಲ್ಲ. ಎಲ್ಲವನ್ನು ಸಮರ್ಪಿಸುವುದು ಎಂದರೆ, ಕೆಲವು ಲೋಕದೃಷ್ಟಿಯಲ್ಲಿ ಪಾಪ–ಅಧರ್ಮವೆಂದು ಕಂಡಿದ್ದರೂ ವಾಸ್ತವವಾಗಿ ಧರ್ಮವಾಗಿರುತ್ತದೆ. ಅಂತಹದನ್ನು ಸಮರ್ಪಿಸುವುದು, ಉಪವಾಸ ಮಾಡಲು ಹೊರಟ ಮಗನನ್ನು ತಾಯಿ ಬೇಡವೆನ್ನುತ್ತಾಳೆ, ಇಲ್ಲಿ ತಾಯಿಯ ಮಾತನ್ನು ಮೀರುವುದು ಲೋಕದೃಷ್ಟಿಯಲ್ಲಿ ಪಾಪ, ಆದರೆ ಇದು ತಪ್ಪಲ್ಲ. ಇಂತಹ ಪಾಪವನ್ನೂ ದೇವರಿಗೆ ಸಮರ್ಪಿಸಬಹುದು. ಶ್ರೀಸತ್ಯಧ್ಯಾನತೀರ್ಥರು ತಮ್ಮ ಗ್ರಂಥದಲ್ಲಿ ಇದನ್ನು ನಿರೂಪಿಸಿದ್ದಾರೆ.

* * *

## 17. ಹೃದಯ ಗುಹಾವಾಸಿ ಯಾರು ?

**ಕೆಲವರ ವಾದ** : ಜೀವ ಮತ್ತು ಬುದ್ಧಿಯು ಹೃದಯ ಗುಹೆಯಲ್ಲಿರುವುದು. ಬುದ್ಧಿ ಅಚೇತನ. ಅದು ಕರ್ಮ ಫಲವನ್ನು ಉಣ್ಣುವುದಿಲ್ಲ. ಜೀವ ಮಾತ್ರ ಕರ್ಮ ಫಲವನ್ನು ಭೋಗಿಸುವನು, ಆದರೂ **'ಪಿಬಂತೌ'** ಇಬ್ಬರು ಕರ್ಮ ಫಲವನ್ನು ಭೋಗಿಸುವವರೆಂದು ಉಪನಿಷತ್ ಹೇಳಿರುವುದು ಔಪಚಾರಿಕವಾಗಿದೆ. ಇಬ್ಬರು ಇನ್ನು ಕೆಲವರು– ಉಪನಿಷತ್ **'ಪಿಬಂತೌ'** ಕರ್ಮಫಲವನ್ನು ಭೋಗಿಸುವವರಿದ್ದಾರೆ ಎನ್ನುತ್ತಿದೆ. ಆ ಎರಡು ವಸ್ತುಗಳಲ್ಲಿ ಕರ್ಮ ಫಲವನ್ನನುಭವಿಸುವ ಒಬ್ಬನಂತು ಜೀವನೇ ಆಗಬೇಕು. ಇನ್ನೊಂದು ವಸ್ತು ಅಚೇತನವಾದ ಬುದ್ಧಿಯಾಗಲು ಸಾಧ್ಯವಿಲ್ಲ. ಚೇತನನಾದ ಪರಮಾತ್ಮನೇ ಆ ಜೀವನೊಂದಿಗೆ ಇರುವುದು. ಚೇತನ ಅಚೇತನ ಎರಡು ವಸ್ತುಗಳಿದ್ದಾಗ ಇಬ್ಬರು ಎಂದು ವ್ಯವಹಾರವಿಲ್ಲ. ಆ ಈಶ್ವರ ಕರ್ಮ ಫಲವನ್ನು ಉಣ್ಣುವುದಿಲ್ಲ, ಆದರೂ ಔಪಚಾರಿಕವಾಗಿ ಉಪನಿಷತ್ **'ಪಿಬಂತೌ'** ಎಂದಿದೆ ಎಂದು ಹೇಳುತ್ತಾರೆ.

ಆದರೆ ಈ ಎರಡೂ ವಾದ ಸರಿಯಲ್ಲ. **'ಯೋ ವೇದ ನಿಹಿತಂ ಗುಹಾಯಾಂ' 'ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ'** ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಭಗವಂತನ ಎರಡು ರೂಪಗಳೇ ಹೃದಯ ಗುಹೆಯಲ್ಲಿರುವುದೆಂದು ಸಾರುತ್ತಿದೆ. ಈ ಪ್ರಮಾಣಗಳಿಗೆ ವಿರುದ್ಧವಾಗಿ ಹೊರಟಿರುವ ಮೇಲಿನ ಎರಡು ರೀತಿಯ ವಾದ ಸಮಂಜಸವಲ್ಲ. ಅಷ್ಟೇ ಅಲ್ಲದೇ ಮುಂದಿನ ಮಂತ್ರದಲ್ಲಿ **'ಯಃ ಸೇತುರೀಜಾನಾನಾಂ ಅಕ್ಷರಂ ಬ್ರಹ್ಮ'** ಎಂದು ಈ ಹೃದಯ ಗುಹಾನಿವಾಸಿಯನ್ನು ಬ್ರಹ್ಮನೆಂದು ಕರೆದಿದೆ. ಜೀವನಲ್ಲಿ ಬ್ರಹ್ಮಶಬ್ದದ ಮುಖ್ಯ ಪ್ರವೃತ್ತಿ ಇಲ್ಲ. ಎರಡನೇ ವಾದದವರೂ ಉಪನಿಷತ್ತಿಗೆ ಗೌಣಾರ್ಥವನ್ನು ಮಾಡುವುದರಿಂದ ಮೊದಲನೇ ವಾದವನ್ನು ಖಂಡನೆ ಮಾಡುವುದರಲ್ಲಿ ಅರ್ಥವಿಲ್ಲ.

ಹೀಗೆ ಹೃದಯ ಗುಹೆಯಲ್ಲಿರುವ ಮುಖ್ಯಪ್ರಾಣನಲ್ಲಿ ನೆಲೆಸಿರುವ ಭಗವಂತನು ಬ್ರಹ್ಮಜ್ಞಾನಿಗಳಿಗೆ ಸುಖ ಕೊಡುವ ನೆರಳು, ಅಜ್ಞಾನಿಗಳಿಗೆ ದುಷ್ಟರಿಗೆ ತಾಪವನ್ನೀಯುವ ಬಿಸಿಲು. ಸಂಸಾರ ಸಾಗರವನ್ನು ದಾಟಬಯಸುವ ಜ್ಞಾನಿಗೆ ಅಭಯವನ್ನೀಡುವ ತೀರ.

* * *

## 18. ಸ್ಥಾನಪಲ್ಲಟ

ಏಕಾಗ್ರತೆಯಿಂದ ಭಗವಂತನನ್ನು ಧ್ಯಾನಿಸಬೇಕಾದರೆ ಇಂದ್ರಿಯ ನಿಗ್ರಹ ಬಹಳ ಮುಖ್ಯ. ವಿಷಯದಲ್ಲಿ ವೈರಾಗ್ಯ, ದೇವರಲ್ಲಿ ಭಕ್ತಿ ಇವೆರಡೂ ಧ್ಯಾನದ ಅಂಗಗಳು. ಇವೆರಡೂ ನಮ್ಮಲ್ಲಿ ಇಲ್ಲದೇ ಭಗವಂತನನ್ನು ಧ್ಯಾನಿಸಲು ಸಾಧ್ಯವಾಗುತ್ತಿಲ್ಲ. ಶ್ರೀವಾದಿರಾಜ ಗುರುಗಳು ಹೇಳುತ್ತಾರೆ, ನಮಗೆ ಜ್ಞಾನ ಭಕ್ತಿ ವೈರಾಗ್ಯ ಮೂರು ಇವೆ. ಆದರೆ ಅದು ಹೀಗೆ–ಜ್ಞಾನವೆನಗೆ ದ್ರವ್ಯದಲ್ಲಿ, ಭಕ್ತಿಯೆನಗೆ ಪತ್ನಿಯಲ್ಲಿ, ವೈರಾಗ್ಯವೆನಗೆ ದೇವರಲ್ಲಿ. ಧ್ಯಾನಕ್ಕೆ ಕುಳಿತರೆ ಭಗವಂತನನ್ನು ಬಿಟ್ಟು ಉಳಿದ ವಿಷಯ ಪದಾರ್ಥಗಳೇ ತಲೆಯಲ್ಲಿ ಸುತ್ತುತ್ತವೆ. ಕೈಯಲ್ಲಿ ಜಪಮಣಿ ತಿರುಗುತ್ತದೆ. ಮನಸ್ಸು ಊರೆಲ್ಲ ತಿರುಗುತ್ತದೆ. ಮನೆಯ ತಾಪತ್ರಯಗಳನ್ನೆಲ್ಲ ಆಲೋಚಿಸಲು ಒಳ್ಳೆ ಸಮಯವೆಂದರೆ ದೇವರ ಪೂಜೆ ಮಾಡುವ ಸಮಯ, ಸಂಧ್ಯಾವಂದನೆ ಸಮಯ, ಆಗ ಯಾರೂ

ನಮ್ಮ ಸುದ್ದಿಗೆ ಬರುವುದಿಲ್ಲ–ಹೀಗಾಗಿದೆ ನಮ್ಮ ಪರಿಸ್ಥಿತಿ ನಮಗೆ ಏಕಾಗ್ರತೆ ಇಲ್ಲವೆಂದಲ್ಲ, ಇದೆ ಆದರೆ ಭಗವಂತನಲ್ಲಿ ಅಲ್ಲ. ವಿಷಯ ಪದಾರ್ಥಗಳಲ್ಲಿ, ವಿಷಯ ಪದಾರ್ಥಗಳನ್ನು ಪ್ರೀತಿಸುವಷ್ಟು ನಾವು ದೇವರನ್ನು ಪ್ರೀತಿಸುವುದಿಲ್ಲ.

* * *

## 19. ಪತಿಯಲ್ಲಿಯ ಪ್ರೀತಿ ಜಗತ್ಪತಿಯಲ್ಲಿಲ್ಲವೇ?

ಒಬ್ಬ ರಾಜ ಧ್ಯಾನ ಮಾಡುತ್ತ ಕುಳಿತಿದ್ದಾನೆ. ಅದೇ ಮಾರ್ಗದಲ್ಲಿ ಒಬ್ಬಳು ತನ್ನ ಗಂಡನ ಬಳಿಗೆ ಬಹಳ ಆತುರದಿಂದ ಹೊರಟಿದ್ದಾಳೆ. ಹೋಗುವಾಗ ಅವಳ ಕಾಲು ರಾಜನಿಗೆ ಸ್ವಲ್ಪ ತಾಗಿದೆ. ಹಾಗೆಯೇ ಹೋಗಿದ್ದಾಳೆ. ಸಿಟ್ಟುಗೊಂಡ ರಾಜ ಅವಳನ್ನು ಕರೆದು ಹೆಣ್ಣೆ! ನಿನಗೆಷ್ಟು ದುರಂಹಕಾರ! ನಾನು–ರಾಜ ಧ್ಯಾನ ಮಾಡುತ್ತಾ ಕುಳಿತಿದ್ದೇನೆ. ನನ್ನನ್ನು ಒದ್ದುಕೊಂಡು ಹೋಗುತ್ತಿರುವೆಯಲ್ಲಾ? 'ಸಾರಿ' ಎಂದಾದರೂ ಹೇಳಬಹುದಿತ್ತಲ್ಲವೇ? ಅದೂ ಇಲ್ಲ, ಎಂದು ಗದರಿಸಿದನು. ಅವಳು ನಗಲು ಪ್ರಾರಂಭಿಸಿದಳು. ರಾಜ ಮತ್ತೂ ಕುಪಿತನಾಗಿದ್ದಾನೆ. ಆಗ ಅವಳು ಪತಿಯನ್ನೇ ಧ್ಯಾನಿಸುತ್ತ ಹೊರಟಿರುವ ನನಗೆ, ಕಾಲು ನಿನಗೆ ತಾಕಿದ್ದು ತಿಳಿಯಲೇ ಇಲ್ಲ. ಜಗತ್ಪತಿಯನ್ನು ಧ್ಯಾನಿಸುತ್ತ ಕುಳಿತಿರುವ ನಿನಗೆ ಅದು ತಿಳಿಯಿತೆಂದರೆ ನಿನ್ನ ಧ್ಯಾನ ಅರ್ಥವಾಯಿತು. ನನಗೆ ನನ್ನ ಪತಿಯಲ್ಲಿರುವಷ್ಟು ಪ್ರೀತಿಯೂ ಆ ಜಗತ್ಪತಿಯಲ್ಲಿ ನಿನಗಿಲ್ಲವೆಂದಾಯಿತು ಎಂದು ನುಡಿದಳು. ರಾಜ ತಲೆ ತಗ್ಗಿಸಿದನು. ನಮ್ಮ ದುರವಸ್ಥೆಯೂ ಹೀಗೆ.

* * *

## 20. ಸುಖ ಪಯಣದ ಪರಿಕರಗಳು

ಈ ದೇಹ ಒಂದು ರಥ. ಜೀವ ಇದರಲ್ಲಿ ಪ್ರಯಾಣ ಮಾಡುವ ರಥಿಕ. ಬುದ್ಧಿ ಇದರ ಸಾರಥಿ. ಈ ರಥವನ್ನು ಎಳೆಯುವ ಕುದುರೆಗಳು–ಇಂದ್ರಿಯಗಳು. ಇದರ ಸಂಚಾರ ಭೂಮಿ–ವಿಷಯ ಪದಾರ್ಥಗಳು, ಈ ಕುದುರೆಗಳನ್ನು ನಿಯಂತ್ರಿಸುವ ಕಡಿವಾಣ–ಮನಸ್ಸು.

ರಥಿಕನು ಗುರಿಯನ್ನು ತಲುಪಬೇಕಾದರೆ ಸಾರಥಿ ಬೇಕು. ಸಾಧಕನು ಗುರಿ ಮುಟ್ಟಬೇಕಾದರೆ ಸಾರಾಸಾರ ವಿವೇಕ ಬೇಕು.

ರಥಿಕನು ಸುಖ ಪ್ರಯಾಣ ಮಾಡಬೇಕಾದರೆ ಕಡಿವಾಣ ಬೇಕು. ಮತ್ತು ಕುದುರೆಗಳು ನಿಯಂತ್ರಣದಲ್ಲಿರಬೇಕು. ಅವಶವಾಗಿರಬಾರದು. ಸಾಧಕನು ಸುಖವಾಗಿ ದೇವರೆಡೆಗೆ ಸಾಗಬೇಕಾದರೆ ಮನೋನಿಗ್ರಹವಿರಬೇಕು. ಇಂದ್ರಿಯಗಳು ಅವಶವಾಗಿರಬಾರದು. ಅವುಗಳ ಮೇಲೆ ಹತೋಟಿಯಿರಬೇಕು.

ಮನೋನಿಗ್ರಹ, ಸಾರಾಸಾರ ವಿವೇಕ, ಇಂದ್ರಿಯಗಳ ಮೇಲೆ ನಿಯಂತ್ರಣ ಇವುಗಳು ಇಲ್ಲದಿದ್ದರೆ ಹೊಂಡಕ್ಕೆ ಬೀಳುತ್ತವೆ. ಇವೆಲ್ಲವೂ ಇದ್ದರೆ ಸುಖ ಸುಖ ಪ್ರಯಾಣ, ಗುರಿ ತಲುಪಬಹುದು.

* * *

## 21. ಬ್ರಹ್ಮವಿದ್ಯೆ ಮತ್ತು ವೈರಾಗ್ಯ

ಬ್ರಹ್ಮವಿದ್ಯೆಯನ್ನು ಸಂಪಾದಿಸಬೇಕಾದರೆ ವೈರಾಗ್ಯವನ್ನು ಹೊಂದಬೇಕು. ವೈರಾಗ್ಯವು ಸುಲಭವಲ್ಲ, ಆದರೂ ಅತ್ಯಂತ ಪ್ರಯತ್ನಪೂರ್ವಕವಾಗಿ ಸಂಪಾದಿಸಬೇಕು ಎಂದು ಉಪನಿಷತ್ ಉಪದೇಶಿಸುತ್ತಿದೆ.

ಬ್ರಹ್ಮನು ನಮ್ಮ ಇಂದ್ರಿಯಗಳನ್ನು ಬಹಿರ್ಮುಖವಾಗಿ ಸೃಷ್ಟಿ ಮಾಡಿದ್ದಾನೆ. ಆದ್ದರಿಂದಲೇ ನಮ್ಮ ಇಂದ್ರಿಯಗಳು ಸರ್ವದಾ ಬಾಹ್ಯ ವಿಷಯಗಳೆಡೆಗೇ ಧಾವಿಸುತ್ತವೆ. ಅವುಗಳನ್ನು ವಿಷಯ ಪದಾರ್ಥಗಳಿಂದ ಪರಾವೃತ್ತಿಗೊಳಿಸಬೇಕು. ಅಂತರ್ಮುಖಿಗೊಳಿಸಬೇಕು. ಕಣ್ಣು ತೆರೆದು ನೋಡುತ್ತೇವೆ. ಕಣ್ಣು ಮುಚ್ಚಿ ನೋಡುವ ಬಗೆ ನಮಗೆ ತಿಳಿದಿಲ್ಲ. ಕಣ್ಣಿಲ್ಲದಿದ್ದರೆ ಮಾತ್ರ ಕುರುಡರು, ಕಣ್ಣಿರುವವರು ಕುರುಡರಲ್ಲವೆಂದು ನಮ್ಮ ನಂಬಿಕೆ. ಆದರೆ ನಿಜವಾಗಿ ಕಣ್ಣಿರುವುದರಿಂದಲೇ ನಾವು ಕುರುಡರಾಗಿದ್ದೇವೆ. ಒಳಗಣ್ಣು ಕಳೆದು ಕೊಂಡಿದ್ದೇವೆ. ಕಣ್ಣಿಂದ ನೋಡಬಾರದ ವಸ್ತುಗಳನ್ನು ನೋಡುತ್ತೇವೆ. ನೋಡಬೇಕಾದ ಪದಾರ್ಥಗಳನ್ನು ಕಾಣಲು ಕಣ್ಣು ನಮಗೆ ಬಹಳ ಅಡ್ಡಿಯಾಗಿದೆ.

ಉಪನಿಷತ್ ಹೇಳುತ್ತಿದೆ ಮೃತ್ಯುವಿನಿಂದ ಅಮೃತತ್ತ್ವದೆಡೆಗೆ ಸಾಗಬೇಕಾದರೆ ಕಣ್ಣುಮುಚ್ಚಿ ನೋಡುವುದನ್ನು ಕಲಿಯಬೇಕು. ಒಳಗಣ್ಣು ತೆರೆಯಬೇಕು **'ಆವೃತ್ತಚಕ್ಷುಃ ಅಮೃತತ್ತ್ವಮಿಚ್ಛನ್'**.

ರಜತಪರದೆಯ ಮೇಲೆ ಚಿತ್ರವು ಕಾಣಬೇಕಾದರೆ ಬಾಗಿಲು ಮುಚ್ಚಬೇಕು. ಹೊರಗಿನ ಬೆಳಕು ಬೀಳಬಾರದು. ಹೃದಯ ಪರದೆಯಲ್ಲಿ ಭಗವಂತನ ಚಿತ್ರ ಮೂಡಬೇಕಾದರೆ ಕಣ್ಣು ಮುಚ್ಚಬೇಕು. ಹೊರಗಿನ ಬೆಳಕು ಒಳಗೆ ಬೀಳಬಾರದು. ಹೀಗೆ ಅಂತರ್ಮುಖಿಯಾದ ಬದುಕು ಒಂದು ಕಲೆ. ಇಂದ್ರಿಯಗಳಿಗೆ ಸ್ವಾತಂತ್ರ್ಯ ಕೊಟ್ಟು ಅಂತರ್ಮುಖಿಯಾದ ಬದುಕು ಒಂದು ಕಲೆ-ಕಲಂಕ. ಸ್ವಚ್ಛಂದದ ಬದುಕು, ಸ್ವತಂತ್ರ ಜೀವನವಲ್ಲ, ಅದು ಅತಂತ್ರ ಜೀವನ. ಮತ್ತೊಬ್ಬರ ಅಧೀನರಾಗದೇ ಸ್ವತಂತ್ರರಾಗಿ ಬಾಳಬೇಕೆಂಬ ಅಪೇಕ್ಷೆ ನಮಗೆ. ಸ್ವಚ್ಛಂದದ ಬದುಕನ್ನೇ ಸ್ವತಂತ್ರವಾದ ಬಾಳು ಎಂದು ಭ್ರಮಿಸಿದ್ದೇವೆ. ಸ್ವಚ್ಛಂದದ ಪ್ರವೃತ್ತಿ-ನಾವು ಇಂದ್ರಿಯಗಳ ಗುಲಾಮರು ಎಂಬುದನ್ನು ಸಂಕೇತಿಸುತ್ತದೆ. ಇಂದ್ರಿಯಗಳ ಮೇಲೆ ನಿಯಂತ್ರಣವನ್ನು ಎಂದು ಹೊಂದುತ್ತೇವೆಯೋ ಅಂದು ನಾವು ಸ್ವತಂತ್ರರು ಅಲ್ಲಿಯವರೆಗೆ ನಾವು ಅತಂತ್ರರು, ಅಭದ್ರರು, ನೀತಿ ನಿಯಮಗಳಿಗೆ

ಬದ್ಧರಾಗಿ ನಡೆಸುವ ಶಿಸ್ತಿನ ಜೀವನವೇ ಸ್ವತಂತ್ರ ಜೀವನ.

ಇಂದ್ರಿಯ ನಿಗ್ರಹವೆಂದರೆ ಇಂದ್ರಿಯಗಳ ಸಂಹಾರವಲ್ಲ, ಇಂದ್ರಿಯಗಳ ಸಹಜ ವೃತ್ತಿಯನ್ನು ನಿರೋಧಿಸಿ ಸರಿಯಾದ ಮಾರ್ಗದಲ್ಲಿ ಉಪಯೋಗಿಸಿಕೊಳ್ಳುವುದು. ಒಬ್ಬನು, ನಾವು ಕೆಡುವುದು ಇಂದ್ರಿಯಗಳಿಂದ, ಆದ್ದರಿಂದ ಅವುಗಳನ್ನು ನಿಗ್ರಹಿಸಬೇಕೆಂದು ಖಡ್ಗದಿಂದ ಅವುಗಳನ್ನು ತುಂಡರಿಸಲು ಉದ್ಯುಕ್ತನಾದನು. ಆಗ ಆ ಇಂದ್ರಿಯಾಭಿಮಾನಿ ದೇವತೆಗಳು ಪ್ರತ್ಯಕ್ಷರಾಗಿ, ಇಂದ್ರಿಯಗಳು-ನಿನ್ನ ಸಾಧನೆಗೆ ಬೇಕಾದ ಉಪಕರಣಗಳು. ಅವುಗಳನ್ನೇ ಕಿತ್ತೊಗೆದರೆ ಸಾಧನೆ ಮಾಡುವುದೆಂತು? ಅವುಗಳನ್ನು ವಿಷಯ ಪದಾರ್ಥಗಳಿಂದ ಬೇರ್ಪಡಿಸಿ ಸಾಧನೆಗೆ ಅನುಕೂಲ ಮಾಡಿಕೊ; ಇದೇ ನಿಜವಾದ ಇಂದ್ರಿಯ ನಿಗ್ರಹ. ವ್ಯರ್ಥವಾಗಿ ಹರಿಯುವ ನೀರಿಗೆ ಅಣೆಕಟ್ಟು ನಿರ್ಮಿಸಿ ಸದುಪಯೋಗ ಪಡೆಯುವಂತೆ ಎಂದರು.

ವಿಷವನ್ನು ನುಂಗಿದರೆ ಮಾತ್ರ ನಾವು ನಾಶಹೊಂದುತ್ತೇವೆ. ವಿಷಯವನ್ನು ನೋಡಿದರೆ ಸಾಕು. ನಮ್ಮನ್ನು ನುಂಗಿ ಹಾಕುತ್ತದೆ. ನಾವು ನಾಶ ಹೊಂದುತ್ತೇವೆ. ವಿಷಯ ಪದಾರ್ಥಗಳಲ್ಲಿ ದೋಷಚಿಂತನ ಮಾಡಿ

ಅವುಗಳಿಂದ ನಿವೃತ್ತಿ ಹೊಂದುವುದೇ ವೈರಾಗ್ಯ. ಇದು ಇದ್ದರೆ ಮಾತ್ರ ಬ್ರಹ್ಮಜ್ಞಾನ ಬರಲು, ಮುಕ್ತಿ ಸಿಗಲು ಸಾಧ್ಯ.

ಬಿಸಿಲಿನ ಬೇಗೆಗೆ ಬಳಲಿದ ಕಪ್ಪೆಯೊಂದು ದೂರದ ನೆರಳಿಗೆ ಓಡಿ ಹೋಯಿತು. ಅದು ಹಾವಿನ ಹೆಡೆಯ ಅಡಿಯ ನೆರಳು. ಹಸಿದಿದ್ದ ಆ ಘಟಸರ್ಪ ಕೂಡಲೇ ಕಪ್ಪೆಯನ್ನು ಕಬಳಿಸಿತು. ಹಾವಿಗೆ ಕುಳಿತಲ್ಲಿಯೇ ಆಹಾರ ದೊರೆಯಿತು. ಸಾಂಸಾರಿಕ ಕಷ್ಟ ಕಾರ್ಪಣ್ಯಗಳಿಂದ ಬೇಸತ್ತು ಸುಖಕ್ಕಾಗಿ ವಿಷಯ ಪದಾರ್ಥಗಳ ಕಡೆಗೆ ಓಡುವ ನಾವೂ ಆ ಕಪ್ಪೆಯಂತೆಯೇ. ವಿಷಯ ಪದಾರ್ಥಗಳ ಸುಖ ಆ ಹಾವಿನ ಅಡಿಯ ನೆರಳಂತೆ. ಈ ವಿಷಯ ಪದಾರ್ಥಗಳ ಕಡೆಗೆ ಧಾವಿಸಿದರೆ ಅದು ನಮ್ಮನ್ನು ಬಲಿ ತೆಗೆದುಕೊಳ್ಳುತ್ತದೆ. ಸುಖ ನಮಗೆ ಬೇಕು. ಆದರೆ ಯಾವುದು ಸುಖ ಗೊತ್ತಿಲ್ಲ. ಮರದ ನೆರಳು ಸುಖದಾಯಿ. ಹಾವಿನ ಹೆಡೆಯ ನೆರಳಲ್ಲ. ವಿಷಯ ಪದಾರ್ಥಗಳ ಸುಖ–ಸುಖವಲ್ಲ. ಈ ಜಗದ್ವೃಕ್ಷದ ತಾಯಿಬೇರಾದ ಆ ಭಗವಂತನ ಕೃಪಾ ಛಾಯೆಯೇ ನಿಜವಾದ ತಂಪು ನೀಡುವ ನೆರಳು. ಅದನ್ನು ಆಶ್ರಯಿಸಬೇಕು.

ಎಷ್ಟು ವೇಗವಾಗಿ ಓಡಿದರೂ ನಮ್ಮ ನೆರಳನ್ನು ಹಿಡಿಯಲಾಗುವುದಿಲ್ಲ. ನಮಗಿಂತಲೂ ಮುಂದೆಯೇ ಇರುತ್ತದೆ. ಅದನ್ನು ಬಿಟ್ಟು ಸೂರ್ಯನೆಡೆಗೆ ಧಾವಿಸಿದರೆ ಆ ನೆರಳು ನಮ್ಮ ಹಿಂದೆಯೇ ಓಡಿಕೊಂಡು ಬರುವುದು. ನಾವು ವಿಷಯಪದಾರ್ಥಗಳೆಡೆಗೆ ಓಡಿದಷ್ಟೂ ಅದನ್ನು ಹೊಂದಲಾಗುವುದಿಲ್ಲ ತೃಪ್ತಿಯಾಗುವುದಿಲ್ಲ. ಅದನ್ನು ಬಿಟ್ಟು ಭಗವಂತನೆಡೆಗೆ ಧಾವಿಸಿದರೆ ಈ ಎಲ್ಲ ಕಾಮನೆಗಳೂ ಭೋಗ ಭಾಗ್ಯಗಳೂ ನಮ್ಮ ಬೆನ್ನ ಹಿಂದೆಯೇ ಓಡಿಕೊಂಡು ಬರುವುವು. **'ತದ್ವತ್ಕಾಮಾಃ ಪ್ರವಿಶಂತಿ ಸರ್ವೇ'**

ಈ ವಿಷಯಗಳ ಕಡೆಗೆ ಓಡುವ ನಮ್ಮನ್ನು ಉಪನಿಷತ್ ಅವಿವೇಕಿಗಳೆಂದು ಹೀಯಾಳಿಸುತ್ತದೆ. –**'ಪರಾಚಃ ಕಾಮಾನನುಯಂತಿ ಬಾಲಾಃ'**

ವಿವೇಕಿಯಾದವನು ಶಾಶ್ವತ ಸುಖರೂಪವಾದ ಮೋಕ್ಷವನ್ನು ಬಯಸುತ್ತಾನೆ; ಭಗವಂತನನ್ನು ಬಯಸುತ್ತಾರೆ. ಈ ಅಲ್ಪ ಸುಖಕ್ಕೆ ಬಾಯಿ ಬಿಡುವುದಿಲ್ಲ. **'ಅಥ ಧೀರಾಃ ಅಮೃತತ್ತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ'**

ಯಾವ ವಿಷಯಾಕರ್ಷಣೆಗೂ ಬಲಿಯಾಗದೇ ಭಗವತ್ತತ್ವಜ್ಞಾನದ ಬಗ್ಗೆ ಆಸ್ಥೆ ತೋರಿಸಿದ ನಚಿಕೇತನನ್ನೂ ಯಮನು ಪರೋಕ್ಷವಾಗಿ ಪ್ರಶಂಸೆಗೈಯುತ್ತಿದ್ದಾನೆ. ಇದನ್ನು ಅರ್ಥ ಮಾಡಿಕೊಂಡ ನಚಿಕೇತ, ನನ್ನ ಸ್ತುತಿ ಬೇಡ. ಭಗವತ್ಸ್ವರೂಪದ ಉಪದೇಶ ನೀಡು, ಎನ್ನುತ್ತಿದಾನೆ.

ಯಮದೇವ ಬ್ರಹ್ಮೋಪದೇಶವನ್ನು ಮುಂದುವರಿಸುತ್ತಾನೆ–

ಜೀವನಿಗೆ ಸುಷುಪ್ತಿ, ಸ್ವಪ್ನಗಳನ್ನು ನೀಡುವವನು ಆ ಭಗವಂತ. ಈ ದೇಹದಲ್ಲಿದ್ದು ಸಾರಭೋಕ್ತನಾದ ಆ ಪರಬ್ರಹ್ಮ ಈ ಜೀವನ ಸಮೀಪದಲ್ಲಿಯೇ ನಿಂತು ಜೀವನಿಗೆ ಪ್ರೇರಕನಾಗಿದ್ದಾನೆ. ಭಗವಂತನು ದೂರದ ವೈಕುಂಠದಲ್ಲಿ ನೆಲೆಸಿದ್ದಾನೆ. ನಮ್ಮ ಪ್ರಾರ್ಥನೆ ಅವನ ಕಿವಿ ಸೇರುತ್ತದೆಯೋ ಇಲ್ಲವೋ ಎಂಬ ಸಂಶಯಬೇಡ– **'ಆತ್ಮಾನಂ ಜೀವಮಂತಿಕಾತ್'** ಈ ಜೀವನ ಸಮೀಪದಲ್ಲಿಯೇ ಪ್ರೇರಕನಾಗಿ ನೆಲೆಸಿದ್ದಾನೆ. ಆದರೆ ನಾವು ಮಾತ್ರ ಅವನನ್ನು ಕಾಣುತ್ತಿಲ್ಲ, ಮರೆಯುತ್ತಿದ್ದೇವೆ.

ಜಗನ್ನಾಥದಾಸರು ಹೇಳುತ್ತಾರೆ– **'ಕಣ್ಣಿಗೆ ಎವೆಯಂದದಿ'** ಕಣ್ಣಿಗೆ ಒದಗುವ ಆಪತ್ತನ್ನೆಲ್ಲ ಪರಿಹರಿಸಿ ಸದಾ ಕಣ್ಣನ್ನು ರಕ್ಷಿಸುವ ರೆಪ್ಪೆಯಂತೆ, ಅನೇಕ ಆಪತ್ತುಗಳಿಂದ ಕ್ಷಣಕ್ಷಣದಲ್ಲಿಯೂ ಭಗವಂತನು ನಮ್ಮನ್ನು ರಕ್ಷಿಸುತ್ತಿದ್ದಾನೆ. ಕಣ್ಣನ್ನು ರಕ್ಷಿಸುವ ರೆಪ್ಪೆ ಕಣ್ಣಿನಿಂದ ಎಷ್ಟು ದೂರ ಇದೆ? ಭಗವಂತನೂ ನಮ್ಮ ಸಮೀಪದಲ್ಲಿದ್ದಾನೆ. ನಮ್ಮನ್ನು ರಕ್ಷಿಸುವ ಭಗವಂತ ನಮ್ಮಿಂದ ದೂರದಲ್ಲಿಲ್ಲ. ಕಣ್ಣನ್ನು ರಕ್ಷಿಸುವ ರೆಪ್ಪೆ ಕಣ್ಣಿನಿಂದ ಎಷ್ಟು ದೂರ ಇದೆ? ಭಗವಂತನೂ ನಮ್ಮ ಸಮೀಪದಲ್ಲಿದ್ದಾನೆ. ಆದರೆ ಕಣ್ಣು ದೂರದಲ್ಲಿರುವ ಎಲ್ಲವನ್ನು ನೋಡುತ್ತದೆ. ತನ್ನನ್ನು ರಕ್ಷಿಸುವ ಸಮೀಪದಲ್ಲಿರುವ ರೆಪ್ಪೆಯನ್ನು ಮಾತ್ರ ನೋಡುವುದಿಲ್ಲ. ನಾವೂ ದೂರದಲ್ಲಿರುವ ಮನೆ ಮಡದಿಯೆಲ್ಲವನ್ನು ನೋಡುತ್ತೇವೆ. ಆದರೆ ನಮ್ಮಲ್ಲಿಯೇ ನೆಲೆಸಿರುವ ಆ ಭಗವಂತನನ್ನು ಕಾಣುವುದಿಲ್ಲ. ಭಗವಂತನು ರೆಪ್ಪೆಯಂತೆ ನಮ್ಮನ್ನು ರಕ್ಷಿಸಿದರೆ ನಾವು ಕಣ್ಣಿನಂತೆ ಅವನನ್ನು ಮರೆಯುತ್ತಿದ್ದೇವೆ. ಇದು ತಪ್ಪು. ಅವನಿಗೆ ಕೃತಜ್ಞರಾಗಿ ಬಾಳಬೇಕು.

ಭಗವಂತನು ಸರ್ವಪ್ರೇರಕ, ಸರ್ವರಕ್ಷಕ ಎಂದು ನಂಬುವ ಭಕ್ತ ತನ್ನ ರಕ್ಷಣೆಗೆ ಇಚ್ಛೆ ಮಾಡುವುದಿಲ್ಲ. ನಮಗೆ ದೇವರ ಮೇಲೆ ನಂಬಿಕೆಯೇ

ಇಲ್ಲ. ಸುಮ್ಮನೇ ಆಸ್ತಿಕರೆಂದು ಹಣೆಗೆ ಪಟ್ಟಿ ಹಚ್ಚಿದ್ದೇವೆ. ನಾವು ಒಬ್ಬ ಗೂರ್ಖನನ್ನು ನಂಬಿ ನಿಶ್ಚಿಂತರಾಗಿ ಮಲಗುತ್ತೇವೆ. ಆದರೆ ಜಗದ್ರಕ್ಷಕನಾದ ಭಗವಂತನನ್ನು ನಂಬಿ ನಿಶ್ಚಿಂತರಾಗಿ ಮಲಗುವುದಿಲ್ಲ. ನಮಗೆ ಗೂರ್ಖನಲ್ಲಿರುವಷ್ಟು ವಿಶ್ವಾಸವೂ ದೇವರಲ್ಲಿ ಇಲ್ಲ. ನಾವೆಂತಹ ಭಕ್ತರು?

ಕಷ್ಟ ಬಂದಾಗ ರಾಮ, ಕೃಷ್ಣ, ಗೋವಿಂದ, ಎಲ್ಲರೂ ನಮ್ಮ ಬಾಯಲ್ಲಿ ಬರುತ್ತಾರೆ. ಕಷ್ಟ ಪರಿಹಾರವಾಗಿ ಸುಖ ಬಂದರೆ ಮಾತ್ರ ರಾಮ, ಕೃಷ್ಣ ಎಲ್ಲ ಗೋವಿಂದ. ಹಾಗಾದರೆ ಭಕ್ತನಾರು? ಭಗವಂತನ ಆಜ್ಞೆಗೆ ನೀತಿನಿಯಮಗಳಿಗೆ ವಿಧೇಯನಾಗಿದ್ದು ಅವನಲ್ಲಿ ನಿರ್ವ್ಯಾಜ ಭಕ್ತಿ ಮಾಡುವವನೇ ಭಕ್ತ. **'ಶ್ರುತಿಸ್ಮೃತೀ ಹರೇರಾಜ್ಞೇ'**-ಶ್ರುತಿಸ್ಮೃತಿಗಳು ಶ್ರೀಹರಿಯ ಆಜ್ಞೆಗಳು. ಅವುಗಳು ತಿಳಿಸಿದಂತೆ ನಡೆದುಕೊಂಡಾಗ ನಾವು ಭಕ್ತರೆನಿಸುತ್ತೇವೆ. ಶ್ರೀಮಧ್ವಾಚಾರ್ಯರು ಹೇಳುತ್ತಾರೆ-ದೇವರ ನಿಯಮಕ್ಕೆ ವಿಧೇಯನಾಗದೇ ಭಕ್ತನ ವೇಷ ತೊಡುವವನು ಭಕ್ತನಲ್ಲ. ಅವನು ಡಾಂಭಿಕಭಕ್ತ; **'ಡಾಂಭಿಕತ್ವೇನ ಸ ವಿಜ್ಞೇಯಃ'**

* * *

## 22. ಮುಕ್ತನಿಯಾಮಕ ಭಗವಂತನ ಸ್ವರೂಪ

ಚತುರ್ಮುಖಬ್ರಹ್ಮದೇವರೂ ಮೊದಲಿಗೆ ದೇವರ ಅನುಗ್ರಹದಿಂದ ಜನಿಸಿದರು. ಆ ಭಗವಂತನು ಸರ್ವದೇವೋತ್ತಮನಾಗಿ ಮುಖ್ಯಪ್ರಾಣನಿಂದ ಕೂಡಿಕೊಂಡು ಈ ಹೃದಯಗುಹೆಯಲ್ಲಿ ನೆಲೆಸಿದ್ದಾನೆ. ಗರ್ಭಿಣಿಯರು ಗರ್ಭವನ್ನು ಬಹಳ ಜಾಗ್ರತೆಯಿಂದ ಧರಿಸುವಂತೆ ಗುರುಶಿಷ್ಯರು ಭಗವಂತನನ್ನು ಅವನ ಜ್ಞಾನವನ್ನು ಬಹಳ ಜಾಗ್ರತೆಯಿಂದ ಧರಿಸುವರು. ಎಲ್ಲ ಜ್ಞಾನಿಗಳಿಂದ ಯಾವಾಗಲೂ ಸ್ತುತಿಗೊಳ್ಳುತ್ತಾನೆ. ಎಲ್ಲರನ್ನೂ ಸೃಷ್ಟಿಸುವ ಈ ಭಗವಂತನು ಮತ್ಸ್ಯಾದಿರೂಪಗಳಿಂದ ತನ್ನನ್ನು ಪ್ರಕಟಗೊಳಿಸುತ್ತಾನೆ. ಯಾರಿಂದಾಗಿ ಸೂರ್ಯನು ಉದಯಿಸುವನೋ, ಪ್ರಲಯದಲ್ಲಿ ಯಾರಲ್ಲಿ ಅಸ್ತವನ್ನು ಹೊಂದುವನೋ, ಆ ದೇವನನ್ನು ಎಲ್ಲ ದೇವತೆಗಳು ಹೊಂದಿದರೂ ಯಾರೂ ಅವನನ್ನು ಮೀರುವುದಿಲ್ಲ. **'ತದು ನಾತ್ಯೇತಿ ಕಶ್ಚನ'**

ಭಗವಂತನಿಗೆ ಅವನ ಮತ್ಸ್ಯಾದಿ ಅವತಾರ ರೂಪಗಳಿಗೂ ಪರಸ್ಪರ ಭೇದವನ್ನಾಗಲಿ, ಭೇದಾಭೇದವನ್ನಾಗಲಿ ಸರ್ವಥಾ ಚಿಂತಿಸಬಾರದು. ಈ

ಎಲ್ಲ ಜೀವದ ಒಳಗಿಹ ಭಗವಂತನೂ ವೈಕುಂಠದಲ್ಲಿರುವ ಪರಮಾತ್ಮನೂ ಒಬ್ಬನೇ. ಸ್ವಲ್ಪವೂ ಭೇದವಿಲ್ಲ. ಭಗವಂತನಿಗೂ, ಅವನಲ್ಲಿರುವ ಗುಣಗಳಿಗೆ, ಅವನ ಅವಯವಗಳಿಗೂ ಅತ್ಯಂತ ಅಭೇದವು ಇದೆ. ಭೇದ, ಭೇದಾಭೇದಗಳಿಲ್ಲ. ಭಗವಂತನಿಗೆ ಅವನ ಅವತಾರ ರೂಪಗಳಿಂದ, ಗುಣಗಳಿಂದ, ಅವಯವಗಳಿಂದ ಭೇದವನ್ನು ಅಥವಾ ಭೇದಾಭೇದಗಳನ್ನು ಚಿಂತಿಸಿದರೆ, ಅವರು ಪರ್ವತದ ಶಿಖರದಿಂದ ಅಂಧಃತಮಸ್ಸಿಗೆ ಬೀಳುತ್ತಾರೆ. ಈ ಜೀವನ ಹೃದಯದಲ್ಲಿ ಅಂಗುಷ್ಠಪರಿಮಾಣದಲ್ಲಿ ಭಗವಂತ ನೆಲೆಸಿದ್ದಾನೆ. **'ಅಂಗುಷ್ಠಮಾತ್ರಃ ಪುರುಷಃ'**

ಮುಕ್ತಿಯನ್ನು ಹೊಂದಿದ ಚತುರ್ಮುಖಬ್ರಹ್ಮದೇವರೇ ಮುಕ್ತಿಯಲ್ಲಿ ದೇವರಂತೆ ಆಗುತ್ತಾರೆ. ದೇವರೇ ಆಗುವುದಿಲ್ಲ. ಅಂದಮೇಲೆ ಜೀವರು ದೇವರಾಗುವುದಿಲ್ಲವೆಂದು ಪ್ರತ್ಯೇಕ ಹೇಳಬೇಕಿಲ್ಲ. ನೀರಿನಲ್ಲಿ ನೀರು ಹಾಕಿದರೆ ಮೊದಲಿದ್ದ ನೀರಿನಂತೆಯೇ ಇದೂ ಆಗುತ್ತದೆ. ಅದರೊಂದಿಗೆ ಸೇರುತ್ತದೆ. ಆದರೆ ಅದೇ ಆಗುವುದಿಲ್ಲ. ಆ ನೀರಿನ ಅಭೇದವನ್ನು ಹೊಂದುವುದಿಲ್ಲ. ಅಂತೆಯೇ ಭಗವಂತನಲ್ಲಿ ಪ್ರವೇಶಿಸಿದರೂ ಭಗವಂತನೇ ಆಗುವುದಿಲ್ಲ. ಭಗವಂತನಂತೇ ಮುಕ್ತನೂ ಜ್ಞಾನಪೂರ್ಣನೂ ಆನಂದಪೂರ್ಣನೂ ಆಗುತ್ತಾನೆ. ಆದರೆ ಆ ಪೂರ್ಣತೆಯಲ್ಲಿ ತಾರತಮ್ಯವಿದೆ, ನೀರು ತುಂಬಿದ ಬಿಂದಿಗೆಯೂ ಪೂರ್ಣ, ತಂಬಿಗೆಯೂ ಪೂರ್ಣ, ಆದರೂ ಪೂರ್ಣತೆಯಲ್ಲಿ ಅಂತರವಿದೆ.

* * * *

# ಮಹಾಭಾರತ ಸಂದೇಶ



ಚಕ್ರ-ಶಂಖ-ಪದ್ಮ-ಗದಾಧಾರಿಯಾದ **'ಕಮಲಾ'**ಪತಿ **'ಮಾಧವ'**



## ದೇವರನ್ನು ಕಾಣುವ ಕಣ್ಣು

ನಮ್ಮೆದುರಿಗೇ ನೂರಾರು ಸೂಕ್ಷ್ಮ ವಸ್ತುಗಳು ಹರಿದಾಡುತ್ತಿದ್ದರೂ ನಮಗೆ ಅವುಗಳ ಪರಿಜ್ಞಾನವೇ ಆಗುವುದಿಲ್ಲ. ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಅವುಗಳನ್ನು ನಾವು ಗ್ರಹಿಸಬಹುದಷ್ಟೇ.

ಅದರಂತೆ ವಿಶ್ವವ್ಯಾಪಿಯಾಗಿ, ಸರ್ವಪದಾರ್ಥಗಳಲ್ಲಿಯೂ ಅನುಸ್ಯೂತವಾಗಿ ಇರುವ ಪರಮಾತ್ಮನ ಸಚ್ಚಿದಾನಂದಮಯ ರೂಪಗಳು ನಮ್ಮ ಸ್ಥೂಲದೃಷ್ಟಿಗೆ ನಿಲುಕುವುದಿಲ್ಲ. ಅದಕ್ಕಾಗಿಯೇ ಅರ್ಜುನನಿಗೆ ಶ್ರೀಕೃಷ್ಣ ದಿವ್ಯದೃಷ್ಟಿಯನ್ನು ನೀಡಿದ್ದಾನೆ.

ಹೀಗೆ ದೇವರು ಎಲ್ಲೆಡೆ ಇದ್ದರೂ ಅವನನ್ನು ಕಾಣುವ ಕಣ್ಣು ನಮಗಿಲ್ಲ. ಆಧ್ಯಾತ್ಮಿಕ ಸಾಧನೆಯಿಂದ ಆ ಕಣ್ಣನ್ನು ನಾವು ಗಳಿಸಿಕೊಳ್ಳಬೇಕು.

– ಶ್ರೀ ವಿಶ್ವೇಶತೀರ್ಥಶ್ರೀಪಾದರು

## 1. ಅವನು ತ್ರಿಶಂಕು, ನಾವು?

"ಸ್ವಾಮಿ ಸತ್ಯವ್ರತರೇ! ಹೀಗೂ ಉಂಟೆ! ಪ್ರಜೆಗಳಿಗೆ ತೊಂದರೆ ಕೊಡುವುದೇ? ಜೀವನದ ಮಧುರ ಹೊಂಗನಸುಗಳನ್ನು ಕಾಣುತ್ತ, ಬಾಳಸಂಗಾತಿಯನ್ನು ಪಡೆಯುವ ಮಧುರ ಮದುವೆಯ ಸಂದರ್ಭದಲ್ಲಿ ವಧೂ ಅಪಹರಣವೇ? ಪರಸ್ತ್ರೀ–ಅಪಹರಣ ಮಹಾಪರಾಧವಲ್ಲವೇ?"

"ಏನು? ನಾನು, ಪರಸ್ತ್ರೀ–ಅಪಹರಣ ಮಾಡಿದೆನೇ? ಛೇ! ಎಂಥ ಅವಿವೇಕಿಗಳು ನೀವು! ನಿಮಗೆ ಧರ್ಮಸೂಕ್ಷ್ಮ ಗೊತ್ತೆ? ಆಕೆಗಿನ್ನೂ ಸಪ್ತಪದಿಯೇ ಆಗಿಲ್ಲ. ಪರಸ್ತ್ರೀ ಹೇಗೆ? ಸಪ್ತಪದಿಯಾಗುವ ಮುಂಚೆ, ಕನ್ಯಾವಸ್ಥೆಯಲ್ಲಿಯೇ ಹೆಣ್ಣನ್ನು ಒಯ್ದರೆ ಅದೂ ಪರಸ್ತ್ರೀ–ಅಪಹರಣವೇ? ಅದೊಂದು ಅಪರಾಧವೇ? ಶಾಸ್ತ್ರ ವಿರೋಧವಿಲ್ಲ"

"ಯೌವನ, ಸಂಪತ್ತು, ಅಧಿಕಾರ, ಅವಿವೇಕ"–ಇವುಗಳಲ್ಲಿ ಒಂದೊಂದೂ ಮಹಾ ಅನರ್ಥಸಾಧನ, ಎಲ್ಲವೂ ಸಮ್ಮಿಳಿತಗೊಂಡರೆ? ಕೇಳಬೇಕೆ? ಇವೆಲ್ಲದರ ಕೂಡಲಸಂಗಮ – ಸತ್ಯವ್ರತ. ಹೆಸರಿನಲ್ಲಿ ಸತ್ಯವ್ರತ. ಪ್ರವೃತ್ತಿಯಲ್ಲಿ ಅಧರ್ಮ ರತ, ಧಾರ್ಮಿಕ ತಂದೆ–ತ್ರಯ್ಯಾರುಣ. ಅವನಲ್ಲಿ ಇಂತಹ ಅಧರ್ಮ ಪುತ್ರ!

ಕನ್ಯಾಪಹರಣ ಇವನ ಹವ್ಯಾಸ. ಪ್ರಜೆಗಳಲ್ಲಿ ಪ್ರತಿಭಟನೆ ಕಂಡರೆ ಸಮರ್ಥನೆ ಬೇರೆ. ಈಗಿನ ಅನೇಕರು ಅಪರಾಧ ಮಾಡಿ ಕಾಯಿದೆ ಪ್ರಕಾರ ಅಪರಾಧವಲ್ಲವೆಂದು ವ್ಯವಹರಿಸುವಂತೆ.

ರಾಜಪುತ್ರನ ದಾಂಧಲೆ ಸಹಿಸಲಾರದೆ ರಾಜನಲ್ಲಿ ರಕ್ಷಣೆಗಾಗಿ ಪ್ರಜೆಗಳ ಮನವಿ, ದೂರು. ಮಗನ ಅವ್ಯವಹಾರ ಸಹಿಸದ ತಂದೆ ತ್ರಯ್ಯಾರುಣ, ಮಗನನ್ನು "ಹೊರಟು ಹೋಗು ನೀನು ಮಗನಲ್ಲ, ನಿನ್ನಂಥ ದುಷ್ಟನಿಗೆ ಇಲ್ಲಿ ಅವಕಾಶವಿಲ್ಲ" ಎಂದನು. ತ್ರಯ್ಯಾರುಣ ಈಗಿನ ರಾಜಕಾರಣಿಗಳಂತೆ ಪುತ್ರ ವ್ಯಾಮೋಹ ತೋರಿಸಲಿಲ್ಲ.

ಸತ್ಯವ್ರತ – ಹೋಗು ಎಂದರೆ ಎಲ್ಲಿಗೆ ಹೋಗಲಿ? ಶ್ವಪಚರಲ್ಲಿಗೆ ಹೋಗು, ಅಲ್ಲಿಯೇ ವಾಸಮಾಡಲು ಸರಿ. ನಮ್ಮೊಂದಿಗಿರಲು ಅನರ್ಹ ನೀನು.

ಸತ್ಯವ್ರತ ಮನೆ ಬಿಟ್ಟು ಹೊರಹೊರಟ. ಇವನ ದುಷ್ಟತನವನ್ನು ಅರಿತಿದ್ದ ಪ್ರಜಾಹಿತಾಕಾಂಕ್ಷೀ ರಾಜಗುರು ವಸಿಷ್ಠರು ಇವನನ್ನು ಉಳಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ತ್ರಯ್ಯಾರುಣನಲ್ಲಿ ಇವನ ಪರವಾಗಿ ಪ್ರಭಾವ ಬೀರಲಿಲ್ಲ. ಸತ್ಯವ್ರತನಿಗೆ ಇದಕ್ಕಾಗಿ ವಸಿಷ್ಠರಲ್ಲಿ ದ್ವೇಷ.

ಸತ್ಯವ್ರತ ಕಾಡಿಗೆ, ದೇಶದಲ್ಲಿ ಅನಾವೃಷ್ಟಿ. ಆಗ ರಾಜತ್ವ ಬಿಟ್ಟು ಬ್ರಹ್ಮರ್ಷಿಯಾಗಲು ವಿಶ್ವಾಮಿತ್ರ ಅದೇ ಕಾಡಿಗೆ. ಆತನ ಪತ್ನಿಗೆ ಅತೀವ ದುಃಸ್ಥಿತಿ. ಬದುಕು ದುರ್ಭರ, ಮಗನನ್ನು ಮಾರಿ ಬದುಕಲು ಹೊರಟಿದ್ದಾಳೆ. ಘೋರ ದೃಶ್ಯ ಸತ್ಯವ್ರತನ ಮನ ಕಲುಕಿತು. ಅನುಕಂಪ ಹುಟ್ಟಿತು.

"ತಾಯಿ! ಮಗನನ್ನು ಮಾರುವುದು ಬೇಡ. ನಿಮ್ಮ ಹೊಟ್ಟೆ ತುಂಬಿಸುವ ಹೊಣೆ ನನಗಿರಲಿ" ಸತ್ಯವ್ರತನಿಂದ ಉಳಿದುಕೊಂಡ ವಿಶ್ವಾಮಿತ್ರನ ಮಗ ಗಾಲವ.

ಕಾಡಿನಲ್ಲಿನ ಪ್ರಾಣಿಗಳ ಮಾಂಸ ತಂದಿತ್ತು, ಅವರ ಆಹಾರ ಸಮಸ್ಯೆಯನ್ನು ಬಗೆಹರಿಸಿದನು ಸತ್ಯವ್ರತ. ಒಂದು ದಿವಸ ವಸಿಷ್ಠರ ಧೇನುವನ್ನು ಆಹಾರಕ್ಕಾಗಿ ಅಪಹರಿಸಿದ.

ಕನ್ಯಾಪಹರಣ, ಗುರುದ್ವೇಷ, ಗುರುಧೇನು ಅಪಹರಣ. ಅಪರಾಧಗಳನ್ನು ಮಾಡಿದ ಸತ್ಯವ್ರತ **'ತ್ರಿಶಂಕು'** ಎನಿಸಿದ. (ತ್ರಿ–ಮೂರು ಶಂಕು–ಅಪರಾಧವುಳ್ಳವನು)

ತ್ರಯ್ಯಾರುಣ ಬೇಸರದಿಂದ ರಾಜ್ಯ ಬಿಟ್ಟು ಹೋಗಿದ್ದ. ರಾಜ್ಯಭಾರದ ಹೊಣೆ ವಸಿಷ್ಠರಿಗೆ ಬಂದಿತ್ತು. 12 ವರ್ಷ ಪ್ರಾಯಶ್ಚಿತ್ತವಾಗಿ ಕಾಡಿಗೆ ಹೋಗಿದ್ದ ತ್ರಿಶಂಕು ಮರಳಿ ಬಂದಾಗ ವಸಿಷ್ಠರು ರಾಜ್ಯವನ್ನು ಹಿಂತಿರುಗಿಸಿದರು. ಇಷ್ಟೆಲ್ಲ ಆದರೂ ತ್ರಿಶಂಕು ವಸಿಷ್ಠರಲ್ಲಿ ಗುರುತ್ವ ಬುದ್ಧಿಯಿರಿಸಲಿಲ್ಲ. ವಿಶ್ವಾಮಿತ್ರರನ್ನೇ ಗುರುವಾಗಿ ಸ್ವೀಕರಿಸಿದ, ಅವರ ತಪಃ ಪ್ರಭಾವದಿಂದ ಸಶರೀರವಾಗಿ ಸ್ವರ್ಗ ಏರಲು ಯತ್ನಿಸಿ ಮಧ್ಯದಲ್ಲಿ ನಿಂತ. ತ್ರಿಶಂಕು ಸ್ಥಿತಿ ಎಂದೇ ಪ್ರಸಿದ್ಧವಾಯಿತು.

ಆ ಸತ್ಯವ್ರತ ಮೂರು ಅಪರಾಧಗಳನ್ನು ಮಾಡಿ ತ್ರಿಶಂಕು ಎನಿಸಿದ. ಆದರೆ ನಾವು? ಸಹಸ್ರ ಶಂಕು ಎಂದರೂ ಕಡಿಮೆ. ನಮಗೆ ಯಾವ

ಪರಿಸ್ಥಿತಿ ಕಾದಿದೆ? ನಮ್ಮಿಂದ ಮತ್ತೊಬ್ಬರಿಗೆ ಅನ್ಯಾಯವಾಗದಂತೆ ಜಾಗ್ರತೆಯಿಂದ ಇರಬೇಕು.

* * *

## 2. ದಂಪತಿಗಳಿಗೊಂದು ಸಂದೇಶ

ಸಂಜ್ಞಾ ತ್ವಷ್ಟ್ರನ ಮಗಳು; ಸೂರ್ಯನ ಪತ್ನಿ. ವೈವಸ್ವತ ಮನು, ಯಮ ಇವರ ಮಕ್ಕಳು, ಸೂರ್ಯ ಬಹಳ ಕ್ರೂರಿ ತಾಪದಾಯಕ. ಸೂರ್ಯನ ತಾಪ ಸಹಿಸದ ಸಂಜ್ಞಾ ಹೇಳದೇ ತವರಿಗೆ ಪಯಣ. ತಾನು ತವರಿಗೆ ಹೋಗಿರುವ ವಿಚಾರ ತಿಳಿಯಬಾರದೆಂದು ತನ್ನಂತೆ ಇರುವ ಛಾಯೆ ಎಂಬ ಕನ್ಯಾಸೃಷ್ಟಿ–ಸಂಜ್ಞೆಯಿಂದ. "ಗಂಡನ ಮನೆಗೇ ಹೋಗು. ಇಲ್ಲಿ ನಿನಗೆ ಅವಕಾಶವಿಲ್ಲ" – ತಂದೆಯಿಂದ ನಿರಾಕರಣೆ, ತಪಸ್ವಿನಿಯಾಗಿ ಹೆಣ್ಣು ಕುದುರೆಯಾಗಿ ಹುಲ್ಲುಗಾವಲಿನಲ್ಲಿ ಅಲೆದಾಟ. ಸೂರ್ಯನಿಗೆ ಛಾಯೆಯಲ್ಲಿ ಸಂಜ್ಞೆಯೆಂದೇ ಭ್ರಮೆ. ಇಬ್ಬರ ಮೈಥುನ. ಗಂಡುಮಗು ಜನನ. ಮೊದಲ ಮಗನಾದ ವೈವಸ್ವತ ಮನುವಿನಂತೆ ರೂಪ. ಅದರಿಂದಲೇ ಮನು ಎಂದೇ ನಾಮಕರಣ, ತನಗೆ ಸ್ವಂತ ಮಗು ಹುಟ್ಟಿದ ನಂತರ ವೈವಸ್ವತ, ಯಮರ ಮೇಲೆ ಮಲತಾಯಿ ಧೋರಣೆ, ಸಹಿಸದ ಯಮ ಕಾಲು ಎತ್ತಿದ. ಪ್ರತಿಭಟಿಸಿದ. ಎತ್ತಿದ ಕಾಲು ಕೆಳಗೆ ಬೀಳಲಿ ಎಂದು ಛಾಯಾ ಶಾಪ. ತಂದೆ–ಸೂರ್ಯನಲ್ಲಿ ಯಮನ ಮೊರೆ. ಸೂರ್ಯನಿಗೆ ಸಿಟ್ಟು, ಉಪದೇಶ, ವಿಚಾರಣೆ, ಛಾಯೆಯಿಂದ ಹಾರಿಕೆಯ ಉತ್ತರ, ಸೂರ್ಯನ ಸಹನೆ ಮೀರಿದೆ. ಛಾಯೆಯನ್ನು ಹೊಡೆಯಲು ಹೊರಟ. "ನಿನ್ನಿಂದ ಪೆಟ್ಟು ತಿನ್ನಲು ನಾನು ಸಂಜ್ಞೆಯಲ್ಲ. ಅವಳ ಪ್ರತಿನಿಧಿ– ಛಾಯೆ" ರಹಸ್ಯ ಬಯಲು.

ಮಾವನ ಮನೆಗೆ ಸೂರ್ಯನ ಪಯಣ. "ನಿನ್ನ ಉಗ್ರತೆ. ತಾಪ ಸಹಿಸದೆ ಹೆಣ್ಣುಕುದುರೆಯಾಗಿ ಹೋಗಿದ್ದಾಳೆ" – ಮಾವನಿಂದ ಸತ್ಯಾಂಶ ಬಯಲು. ಕೂಡಲೇ ಪಯಣ. "ಹೀಗೆ ಹೋಗುವುದು ಬೇಡ, ಹೆದರಿಯಾಳು, ಶಾಂತರೂಪ ಹೊಂದಿರಿ" ಮಾವನ ಮನವಿ. ಶಾಂತ ಗಂಡು ಕುದುರೆಯಾಗಿ ಸಂಜ್ಞೆಯೊಂದಿಗೆ ಸಂಗಮ. ಅಶ್ವಿನೀ ದೇವತೆಗಳ ಜನನ. ಸೂರ್ಯ– ಛಾಯೆಯರಿಗೆ ಹುಟ್ಟಿದ ಆ ಮಗುವೇ ಶನಿಗ್ರಹ.

ಈ ಕಥೆ ಗಂಡ ಹೆಂಡತಿಯರಿಗೆ ಅರ್ಥಪೂರ್ಣ ಸಂದೇಶ ನೀಡುತ್ತದೆ. ಗಂಡ ತನ್ನ ಹೆಂಡತಿಯ ಬಗ್ಗೆ ಅತಿ ಕ್ರೂರನಾಗಿ ವರ್ತಿಸಬಾರದು. ತಾಪದಾಯಕನಾಗಬಾರದು ಸೂರ್ಯ ತನ್ನ ತಪ್ಪು ಅಂತ ಮೇಲೆ ಬದಲಾದ. ಹೃದಯ ಪರಿವರ್ತನೆಯಾಗಿ ಶಾಂತನಾದ. ಅವನದು ಕೇವಲ ಬಾಹ್ಯತಾಪ, ಬಾಹ್ಯ ಶಾಂತತೆ. ನಾವು ಆಂತರಿಕವಾಗಿ ತಾಪ ನೀಡದೆ ಆಂತರಿಕವಾಗಿ ಶಾಂತರಾಗಬೇಕು. ಆಗ ಮಧುರ ದಾಂಪತ್ಯ ಸಾಧ್ಯ. ಹೆಂಡಂದಿರೇ ಆಗಲಿ ಗಂಡಂದಿರಾಗಲಿ ಹೇಳದೇ ಕೇಳದೆ ಹೊರಹೋಗಬಾರದು. ಹಾಗೆ ಹೆಣ್ಣು ಮಗಳು ತವರು ಮನೆಗೆ ಬಂದರೆ ತಂದೆ, ತಾಯಿಯರು ಅವಳ ಅಸಹನೆ, ಕೋಪಗಳಿಗೆ ಉತ್ತೇಜನ ನೀಡಿ ಗಂಡನಿಂದ ದೂರವಾಗಿಸಿಬಾರದು. ಅಳಿಯ–ಮಗಳು ಬಂದು ಸೇರುವಂತೆ ನಡೆದುಕೊಳ್ಳಬೇಕು. ಅಲ್ಲದೆ ಹಿರಿಯರ ಮುಂದೆ ಅತಿರೇಕದಿಂದ ಕೆಲವೊಮ್ಮೆ ವರ್ತಿಸಿದರೂ ಸೌಮ್ಯದಿಂದ ನಡೆದುಕೊಳ್ಳಬೇಕು.

* * *

## 3. ವೇನನ ಮಥನ

ಅದು ವೇನ ರಾಜನಾಗಿದ್ದ ಕಾಲ. ಪರಮ ಅಧಾರ್ಮಿಕ ವೇನ ಧರ್ಮಕ್ಕೆ ಕಡು ವಿರೋಧಿ. ಧರ್ಮಾತೀತ ರಾಜ್ಯ ಸ್ಥಾಪನೆಯ ದುರುದ್ದೇಶ. ಅರ್ಥ, ಕಾಮಗಳಿಗೆ ಅಭಿಷೇಕ, ಧರ್ಮಕ್ಕೆ ಮೋಕ್ಷ. ಯಜ್ಞ ಕೂಡದು, ಮಾಡಿದರೆ ನನ್ನ ಹೆಸರಿಗೆ ಆಹುತಿ ಪ್ರಕ್ಷೇಪ. ಅವಿವೇಕದ ಪರಾಕಾಷ್ಠೆ, ಮೇರೆ ಮೀರಿದ ಅಧರ್ಮ, ಎಲ್ಲವೂ ನನ್ನಿಂದಲೇ ಎಂಬ ಅಹಂಕಾರದ ವಿಜೃಂಭಣೆ, **'ವಿನಾಶಕಾಲೇ ವಿಪರೀತ ಬುದ್ಧಿಃ'**

ಪ್ರಜೆಗಳಿಗೆ ಸಂತಾಪ, ಗೊಂದಲ. ಋಷಿಗಳಿಗೆ ಧರ್ಮಸಂಕಟ, ಧರ್ಮವಿಲ್ಲದ ರಾಜ್ಯ ಪಂಚಾಂಗವಿಲ್ಲದ ಸೌಧ, ದೇಶವೇ ಕಂಗಾಲು, ಕ್ಷಾಮ. ಋಷಿಮುನಿಗಳಿಗೆ ಕೋಪ. ಧರ್ಮದೇವತೆಗೆ ಮುನಿಸು ಶಿಷ್ಟ ಮಂಡಳ ರಚನೆ. ರಾಜರಲ್ಲಿ ಮನವಿ, ರಾಜನಿಂದ ತಿರಸ್ಕಾರ, ಅನುನಯ ನಿರರ್ಥಕ, ಋಷಿಗಳ ತಾಳ್ಮೆಗೆ ಮುಕ್ತಾಯ, ವೇನನ ನಿಗ್ರಹ, ದುರಾಡಳಿತ ಸಮಾಪ್ತಿ. ಋಷಿಗಳಿಂದ ವೇನನ ಬಲಕ್ಕೆ ಮಥನ, ಪೃಥುವಿನ ಉತ್ಪತ್ತಿ, ಆತ

ಪರಮಧಾರ್ಮಿಕ, ಆತನಲ್ಲಿ ತೇಜಸ್ಸು, ಆಗ ಶುಭಶಕುನ, ಪ್ರಜೆಗಳಿಗೆ ಭಾಗ್ಯೋದಯ, ತಂದೆ-ಮಗ-ಅಜಗಜಾಂತರ, ಪೃಥುವಿಗೆ ಪಟ್ಟಾಭಿಷೇಕ, ಅಧರ್ಮಕ್ಕೆ ಉಚ್ಚಾಟನೆ, ಧರ್ಮಕ್ಕೆ ಪಟ್ಟಾಭಿಷೇಕ, ಪೃಥುವಿನಿಂದ ಗೋದೋಹನ, ಭೂಮಾತೆಯೇ ಗೋರೂಪ, ಸಮೃದ್ಧಿ, ಹಸಿರು ಕ್ರಾಂತಿ, ಸುಭಿಕ್ಷೆ, ಪೃಥುವಿಗೆ ಮುಂಚೆ ಭೂಮಿ ಏರುಪೇರು. ಈಗ ಭೂಮಿ-ಸಮಾನ, ಪ್ರಜೆಗಳಿಗೆ ಸ್ವರ್ಗಸಮಾನ, ಎಲ್ಲೆಡೆ ಹರ್ಷೋದ್ಗಾರ, ಪೃಥುವಿಗೆ ಜಯಕಾರ.

ಅಂತಃಕರಣವೂ ವೇನನಂತೆ. ಎಲ್ಲವೂ ನಾನೇ, ಎಲ್ಲವೂ ನನ್ನಿಂದಲೇ ಎನ್ನುವ ಅಹಂಕಾರ, ನಮ್ಮ ಜೀವನ- ವೇನನ ಜೀವನ, ಕೆಟ್ಟು ಹೋಗಿದ್ದೇವೆಂದು ಸಂಕೋಚ, ಭೀತಿ ಬೇಡ, ಸಾತ್ವಿಕ ಶಕ್ತಿಗಳೆಂಬ ಋಷಿಗಳಿಂದ ಮಥನ ನಡೆಯಲಿ, ಮುಂಚೆ ವೇನನ ಊರುಮಥನ ನಡೆಸಿದಾಗ ದುಷ್ಟರು ಜನಿಸಿದಂತೆ ರಾಗ, ದ್ವೇಷ, ವ್ಯಾಮೋಹಗಳು ಹುಟ್ಟಬಹುದು, ಭಯ ಬೇಡ, ಕೊನೆಗೆ ಸುಪ್ತವಾದ ಸದ್ದು! ಪೃಥುವಿನ ಉತ್ಪತ್ತಿ ಖಚಿತ. ಕೆಟ್ಟೆವೆಂದು ನಿರಾಶೆ ಬೇಡ, ಮಥನ ನಡೆಸಲಿ, ಸದ್ಗುಣಗಳ ಅಭಿವ್ಯಕ್ತಿ ನಿಶ್ಚಿತ.

* * *

## 4. ಆಸೆಗಿಂತ ಹಿರಿದು, ಕಿರಿದು ಬೇರಿಲ್ಲ

ಅವನ ಹೆಸರು ವೀರದ್ಯುಮ್ನ, ಅವನಿಗೊಬ್ಬ ಮಗ, ಹೆಸರು ಭೂರಿದ್ಯುಮ್ನ. ಪರಮಧಾರ್ಮಿಕ. ಇದ್ದ ಒಬ್ಬ ಮಗ ಕಳೆದುಹೋಗಿದ್ದಾನೆ. ತಂದೆ ಚಿಂತಾಕ್ರಾಂತ. ಮಗನಿಗಾಗಿ ಅಲೆದಾಟ. ಮಗನ ಆಸೆ ವೀರದ್ಯುಮ್ನನನ್ನು ಅರಣ್ಯವೆಲ್ಲ ಅಲೆದಾಡಿಸಿದೆ. ಮಗನ ಹುಡುಕಾಟ, ಅಡವಿಯೊಂದಕ್ಕೆ ಪ್ರವೇಶ.

ಅರಣ್ಯದಲ್ಲೊಂದು ಆಶ್ರಮ. ಋಷಿಪುಂಗವರ ಆಲಯ. ವೀರದ್ಯುಮ್ನನ ಆಗಮನ. ರಾಜನ ವಿಲಾಪ. ಪತಿಯೊಡನೆ ಸಲ್ಲಾಪ. ಋಷಿಯ ಹೆಸರು ತನು. ಅತ್ಯಂತ ಕೃಶ, ಆ ತನುಮುನಿಯ ತನುವಿಗಿಂತ ಕೃಶವಾದ ಮತ್ತೊಂದು ವಸ್ತು ಭೂಮಿಯಲ್ಲಿ ಇಲ್ಲ- ರಾಜನ ಎಣಿಕೆ. ಪುತ್ರನ ಆಶೆಗೆ ಬಲಿಯಾಗಿ ಶ್ರಮಪಡುತ್ತಿರುವ ರಾಜ. ಎಲ್ಲ ಆಶೆಗಳನ್ನು ತೊರೆದು ವಿಶ್ರಮದಿಂದ ಇರುವ ಋಷಿ.

“ಋಷಿಗಳೆ! ನಿಮಗಿಂತ ಕೃಶವಾದ ವಸ್ತು ಬೇರೊಂದಿದೆಯೆ?”

“ರಾಜನ್! ನಾನೇ ಕೃಶನೆಂದು ನಿನ್ನ ಗ್ರಹಿಕೆ. ಆದರೆ ನನಗಿಂತಲೂ ಅತ್ಯಂತ ಕೃಶವಾದದ್ದು ಆಶೆ. ಅದರ ಕಾಲು ಹಿಡಿದು ಎಲ್ಲರೂ ಕೃಶ. **‘ಸಾಽಽಶಾಕೃಶತರೀ ಮಯಾ.’**

“ಸ್ವಾಮಿನ್! ನಿಮ್ಮ ಮಾತು ನೂರಕ್ಕೆ ನೂರು ಸತ್ಯ. ಪುತ್ರನ ಆಶೆಯಿಂದ ಪಡಬಾರದ ಪಾಡು ನನ್ನದಾಗಿದೆ, ನಿಮ್ಮ ಹೇಳಿಕೆ ನನಗೆ ಮನವರಿಕೆ.”

ಇರುವ ಒಬ್ಬ ಮಗ. ಅವನು ಹೋದರೆ ನನ್ನ ಗತಿ? ಕೃಪೆಯಿಟ್ಟು ಅವನು ದೊರಕುವಂತೆ ಮಾಡಿ.”

– ರಾಜನ ಮೊರೆ ಋಷಿಯಲ್ಲಿ. ಋಷಿಯ ತಪಶ್ಶಕ್ತಿಯಿಂದ ರಾಜನಿಗೆ ಪುತ್ರಲಾಭ.

ಅವನು ಸುಮಿತ್ರ, ಹೈಹಯವಂಶದ ರಾಜ. ಪರಿವಾರದೊಂದಿಗೆ ಬೇಟೆಗಾಗಿ ಪಯಣ, ಮೃಗಗಳ ಹಿಂಡು ಬಾಣಪ್ರಯೋಗ, ಮೃಗ ಅಪಾಯದಿಂದ ಪಾರು. ಮತ್ತೆ ಬಾಣ, ಮತ್ತೆ ಪಾರು, ಸನಿಹದಲ್ಲಿಯೇ ಮೃಗ, ಬಾಣ ಬಿಡಲು ಕಣ್ಮರೆ. ಭೀತಿಯಿಂದ ಮೃಗದ ಓಡಾಟ, ಆಸೆಯಿಂದ ಅರಸನ ಅಲೆದಾಟ, ಮೃಗಕ್ಕಾಗಿ ಮೃಗಯಾ.

ಮೃಗದ ಬೆನ್ನು ಹಿಡಿದ ಅರಸು ಬಂದದ್ದು ಕಾಡೊಂದಕ್ಕೆ. ಭೇಟಿಯಾದದ್ದು ಋಷಿಗಳೊಂದಿಗೆ. ಮೃಗದ ಆಸೆಯಿಂದ ಕಾಡೆಲ್ಲ ಅಲೆದಾಡಿ ಆಯಾಸಗೊಂಡ ಅರಸು ಕೇಳಿದ; ಋಷಿಗಳೇ– ಈ ಪ್ರಪಂಚದಲ್ಲಿ ಆಶೆ ದೊಡ್ಡದೋ? ಆಕಾಶ ದೊಡ್ಡದೋ?

“ರಾಜನ್! ಆಕಾಶಕ್ಕಿಂತ ದೊಡ್ಡದು ಆಶೆ. ಅದಕ್ಕಿಂತ ದೊಡ್ಡದು ಬೇರೊಂದಿಲ್ಲ.”

ಋಷಭ ಋಷಿ ರಾಜನಿಗೆ ಹೇಳಿದನು, ಮೇಲಿನ ಕಥೆಯನ್ನೂ ಹೇಳಿದನು. ಧರ್ಮರಾಜನ ಪ್ರಶ್ನೆಗೆ ಭೀಷ್ಮರು ಈ ಕಥೆಯನ್ನು ಹೇಳಿ ಆಸೆ ಬಿಡುವಂತೆ ಹೇಳಿದರು.

ಒಮ್ಮೆ ಸೆಲ್ಯೂಕಸ್ ರಾಜ ರಸ್ತೆಯಲ್ಲಿ ಬರುತ್ತಿದ್ದ. ಮಾರ್ಗದಲ್ಲಿ ಋಷಿಗಳೆಲ್ಲ ಕಲೆತು ವೇದಾಂತ ವಿಚಾರ ಮಾಡುತ್ತಾ ಕುಳಿತಿದ್ದರು. ರಾಜ ಬಂದರೂ ಋಷಿಗಳು ಏಳಲಿಲ್ಲ. ರಾಜನಿಗೆ ಕೋಪ. "ಎಷ್ಟು ದುರಹಂಕಾರ? ನಾನು ರಾಜ ಬಂದಿದ್ದೇನೆ. ಏಳದೇ ಕುಳಿತಿದ್ದೀರಿ!"

"ರಾಜನ್! ನೀನು ನಮಗೆ ರಾಜನಾಗಿರಬಹುದು. ಆದರೆ ನಿನ್ನ ಒಡೆಯ ನಮ್ಮ ಗುಲಾಮ, ಅಂದಮೇಲೆ ನಾವೇಕೆ ನಿನಗೆ ಗೌರವ ಸಲ್ಲಿಸಬೇಕು?"

"ಏನು? ನನಗೆ ಒಡೆಯ, ನಿಮ್ಮ ದಾಸ? ಅದಾರು?

–ಅರ್ಥವಾಗದೆ ರಾಜ ಕೇಳಿದ.

"ನೀನು ಆಸೆಯ ದಾಸ, ಆಸೆ ನಿನ್ನ ರಾಜ. ಆಸೆ ನಮ್ಮ ಗುಲಾಮ. ಎಲ್ಲ ಆಸೆ ಕಾಮನೆಗಳನ್ನೂ ಮೆಟ್ಟಿ ನಿಂತಿದ್ದೇವೆ–ನಾವು."

ಋಷಿಗಳ ಉತ್ತರ. ರಾಜನಿಗೆ ಎಚ್ಚರ.

ಕಾಮಕ್ಕೆ ಬಲಿಯಾಗಿ ಮುದುಕನಾದ ಯಯಾತಿ ಮತ್ತೆ ಯುವಕನಾದ! ಆಸೆಗಿಂತ ಹಿರಿದಿಲ್ಲ. ಆಸೆಗಿಂತ ಕಿರಿದಿಲ್ಲ.

* * *

## 5. ನಾಯಿಯೂ ಶಾಪ ಕೊಡಬಲ್ಲದು

ಜನಮೇಜಯನು ಕುರುಕ್ಷೇತ್ರದಲ್ಲಿ ದೀರ್ಘಕಾಲದ ಸತ್ರ ಯಾಗವನ್ನು ಪ್ರಾರಂಭಿಸಿದನು. ಈ ಸತ್ರಯಾಗದ ಮಧ್ಯದಲ್ಲಿ ಒಂದು ನಾಯಿ ಮರಿಯು ಅಲ್ಲಿಗೆ ಆಗಮಿಸಿತು. ಜನಮೇಜಯನ ತಮ್ಮಂದಿರು ಕಲ್ಲುಗಳಿಂದ ಆ ನಾಯಿ ಮರಿಯನ್ನು ಹೊಡೆದಾಗ ಅದು ಅರಚಿಕೊಂಡು ತಾಯಿ ಸರಮೆಯ ಬಳಿಗೆ ಆಗಮಿಸಿತು. ನಾಯಿಮರಿಗೂ ತಾಯಿ ಸರಮೆಗೂ ಈ ಕೆಳಗಿನಂತೆ ಸಂಭಾಷಣೆ ನಡೆಯಿತು.

**ಸರಮೆ:**– ನೀನು ಯಾಕೆ ಅಳುತ್ತಿರುವಿ? ನಿನಗೆ ಯಾರು ಹೊಡೆದರು?

**ಮರಿ:**– ಜನಮೇಜಯನ ತಮ್ಮಂದಿರು ನನಗೆ ಹೊಡೆದರು.

**ಸರಮೆ:–** ನೀನು ಆ ಯಜ್ಞದಲ್ಲಿ ಖಂಡಿತವಾಗಿಯೂ ಅಪರಾಧ ಮಾಡಿರುವಿ. ಆದ್ದರಿಂದಲೇ ನಿನಗೆ ಅವರು ಹೊಡೆದಿರಬೇಕು.

**ಮರಿ:–** ನಾನೇನೂ ಅಲ್ಲಿ ತಪ್ಪು ಮಾಡಿಲ್ಲ. ಹವಿಸ್ಸನ್ನು ಮುಟ್ಟಿಲ್ಲ. ನೆಕ್ಕಿಲ್ಲ. ಅವುಗಳನ್ನು ನೋಡಿಯೂ ಕೂಡಾ ಇಲ್ಲ.

ನಿರಾಪರಾಧಿಯಾದ ತನ್ನ ಮರಿಯ ಮೇಲೆ ರಾಜನ ತಮ್ಮಂದಿರು ಸೊಕ್ಕಿನಿಂದ ಮಾಡಿದ ನಿರ್ದಯ ಪ್ರಕಾರದ ಈ ಘಟನೆಯಿಂದ ಸರಮೆಗೆ ಬಹಳ ದುಃಖವಾಯಿತು. ಅದು ನೇರವಾಗಿ ಸತ್ರಯಾಗದಲ್ಲಿ ದೀಕ್ಷಿತನಾದ ಜನಮೇಜಯ ರಾಜನ ಬಳಿಗೆ ಆಗಮಿಸಿತು. ಅಲ್ಲಿ ರಾಜನ ಮುಂದೆ ಸರಮೆಯು "ನನ್ನ ಮಗುವನ್ನು ನಿನ್ನ ತಮ್ಮಂದಿರು ನಿರ್ದಯವಾಗಿ ಹೊಡೆದಿರುವ ಬಗ್ಗೆ ಸರಿಯಾದ ವಿಚಾರಣೆ ನಡೆಯಬೇಕೆಂದು ಸಿಟ್ಟಿನಿಂದ ನುಡಿಯಿತು. ಈ ನಾಯಿಯ ಮೊರೆಯನ್ನು ಅಲ್ಲಿ ಕೇಳುವವರು ಯಾರು? ಜನಮೇಜಯನಾಗಲೀ ಅಲ್ಲಿ ನೆರೆದಿರುವ ಋತ್ವಿಜರಾಗಲೀ ನಾಯಿಯ ಈ ಆಕ್ರೋಶ ಆರ್ತನಾದಗಳಿಗೆ ಕಿವಿಗೊಡಲೇ ಇಲ್ಲ. ಆಗ ಸರಮೆಯು ನಿನ್ನ ರಾಜ್ಯದಲ್ಲಿ ನಿರಪರಾಧಿಗಳ ಮೇಲೆ ಹಿಂಸಾಚಾರ ನಡೆಯುತ್ತಿದೆ. ಬಡಪ್ರಾಣಿಗಳಿಗೆ ಈ ಅನ್ಯಾಯ ನಡೆಯುತ್ತಿದ್ದರೂ ಅಪರಾಧಿಗಳನ್ನು ಶಿಕ್ಷಿಸಲು ನೀನು ಸಿದ್ಧನಾಗಲಿಲ್ಲ. ನಿನ್ನ ಈ ಕರ್ತವ್ಯ ಚ್ಯುತಿಗಾಗಿ ನಿನಗೆ ಅನಿರೀಕ್ಷಿತ ಭಯ ಒದಗಲಿ." ಎಂದು ಶಪಿಸಿತು. ನಾಯಿಯ ಈ ಸಾತ್ವಿಕ ಕ್ರೋಧವು ರಾಜನ ಅಂತಃಕರಣವನ್ನು ಕಲುಕಿತು. ಅವನು ಸಂಭ್ರಾಂತನಾಗಿ ಶಾಪದ ಪ್ರಕ್ಷಾಲನೆಗಾಗಿ ವಿಚಾರ ಪರವಶನಾದನು. ಇದು ಒಂದು ಬಡನಾಯಿಯ ಚಿಕ್ಕ ಕಥೆಯಾಗಿದ್ದರೂ ಇದರ ಹಿಂದೆ ಇರುವ ಸೂಕ್ಷ್ಮ ಸಂವೇದನೆಯು ಭಾರತೀಯ ಮಹರ್ಷಿಗಳ ಹೃದಯದ ಮಿಡಿತವನ್ನು ನಮಗೆ ಗುರುತಿಸಿ ಕೊಡುತ್ತದೆ. ನಿರಪರಾಧಿ, ದುರ್ಬಲ ಜನಾಂಗದ ಮೇಲೆ ಮಾತ್ರವಲ್ಲ, ಮೂಕ ಪಶುವರ್ಗದ ಮೇಲೂ ನಡೆಯುವ ಅತ್ಯಾಚಾರವನ್ನು ನಮ್ಮ ಋಷಿಗಳು ಸಹಿಸಲಾರರು. ನಮ್ಮ ಅತ್ಯಾಚಾರಗಳಿಂದ ಪೀಡಿತಗಳಾದ ಪಶುಗಳೂ ಆಕ್ರೋಶದಿಂದ ಹೇಗೆ ಶಾಪಕೊಡಬಲ್ಲವು? ಎಂಬುದನ್ನು ತೋರಿಸಿಕೊಟ್ಟು ನಮಗೆ ಎಚ್ಚರಿಕೆ ನೀಡಿದ್ದಾರೆ. ಮೂಕ ಪಶುಗಳ ಹೃದಯಾಂತರಾಳದ ದನಿಯನ್ನೂ ಅವರು ಆಲಿಸಿದ್ದಾರೆ. ಪಶುಗಳಿಗೂ ಅಂತಃಕರಣವಿದೆ.

ಅತ್ಯಾಚಾರದಿಂದ ಅವುಗಳಲ್ಲಿ ಉಂಟಾದ ಕೋಪ ತಾಪಗಳಿಂದ ನಮಗೆ ಎಂತಹ ಅಭಿಶಾಪವು ದೊರೆಯಬಹುದು ಎಂಬುದನ್ನು ತಮ್ಮ ಸೂಕ್ಷ್ಮ ಸಂವೇದನ ಶಕ್ತಿಯಿಂದ ಅರ್ಥಮಾಡಿಕೊಂಡು ಸಕಲ ಪ್ರಾಣಿವರ್ಗದ ಬಗ್ಗೆ ಎಂತಹ ಉದಾರ ಭಾವದಿಂದ ವರ್ತಿಸಬೇಕೆನ್ನುವ ಮಹತ್ವಪೂರ್ಣ ಸಂದೇಶವನ್ನು ಈ ಚಿಕ್ಕ ಘಟನೆಯು ನಮಗೆ ತಿಳಿಸಿ ಕೊಡುವುದು.

* * *

## 6. ಶರ ಸಂದೇಶ

"ನಿಮ್ಮ ಕಣ್ಣಿಗೆ ಏನೇನು ಕಾಣುತ್ತಿದೆ?"

"ನೀವು ಕಾಣಿಸುತ್ತಿದ್ದೀರಿ. ಎಲ್ಲ ಸೋದರರೂ ಕಾಣಿಸುತ್ತಿದ್ದಾರೆ. ಆ ಸುಂದರ ವೃಕ್ಷ, ಚಿಗುರೆಲೆಗಳು ಪಕ್ಷಿ, ಎಲ್ಲವೂ ಕಾಣುತ್ತಿದೆ. ನಮ್ಮ ಕಣ್ಣು ಚೆನ್ನಾಗಿದೆ."

"ಸಂತೋಷ; ಧನುರ್ಬಾಣಗಳನ್ನು ಕೆಳಗಿಟ್ಟು ಹೋಗಿ ಕುಳಿತುಕೊಳ್ಳಿ."

"ನಿನಗೇನು ತೋರುತ್ತಿದೆ?"

"ಗುರುಗಳೇ ನೀವು, ಸೋದರರು, ಮರ ಯಾವುದೂ ತೋರುತ್ತಿಲ್ಲ. ಪಕ್ಷಿ ಮಾತ್ರ ಕಾಣುತ್ತಿದೆ."

"ಸರಿಯಾಗಿ ಗಮನಿಸು!"

"ಪಕ್ಷಿಯೂ ಪೂರ್ಣವಾಗಿ ಕಾಣುತ್ತಿಲ್ಲ. ಕಣ್ಣುಮಾತ್ರ ಕಾಣುತ್ತಿದೆ."

"ಹೂಡು ಬಾಣ"

"ಕೂಡಲೇ ಪಕ್ಷಿಯ ಕಣ್ಣು ಉದುರಿ ಬಿದ್ದಿದೆ.

"ಭಲೇ! ಸರಿಯಾದ ಗುರಿ, ಅಪ್ರತಿಮ ಬಿಲ್ಲುಗಾರ"– ಎಲ್ಲೆಡೆ ಜನರ ಹರ್ಷೋದ್ರೇಕ, ಕರತಾಡನ, ಜಯಘೋಷ.

ದ್ರೋಣರಲ್ಲಿ ಧನುರ್ವಿದ್ಯೆಯ ತರಬೇತಿ ಪಡೆದ ಕೌರವ ಪಾಂಡವ ರಾಜಕುಮಾರರ ಸ್ಪರ್ಧೆ. ವೃಕ್ಷದ ಮೇಲೆ ಪಕ್ಷಿಯಾಕಾರದ ಗೊಂಬೆ. ಅದರ ನೇತ್ರಕ್ಕೆ ಬಾಣ ಪ್ರಯೋಗ ರಾಜಕುಮಾರರಿಗೆ ಸವಾಲು. ಸವಾಲು

ಎದುರಿಸಲು ರಾಜಕುವರರ ಸಾಲು. 'ಲಕ್ಷ್ಯದಲ್ಲಿ ಏಕಾಗ್ರತೆಯಿಲ್ಲ'– ದ್ರೋಣರ ತಿರಸ್ಕಾರ. ಪಕ್ಷಿಯ ಕಣ್ಣು ಮಾತ್ರ ತೋರಿದೆ–ಅರ್ಜುನನ ಕಣ್ಣಿಗೆ. ಲಕ್ಷ್ಯವನ್ನು ತಲುಪಿದೆ ಬಾಣ. ಏಕಾಗ್ರತೆಗೆ ಮೆಚ್ಚುಗೆ. ದ್ರೋಣರಿಂದ ಪುರಸ್ಕಾರ. ಜನರಿಂದ ಜಯಘೋಷ.

ಉಪನಿಷತ್ತು, ಸಾಧಕರಿಗೆ ಇದೇ ಸ್ಪರ್ಧೆಯನ್ನು ಏರ್ಪಡಿಸಿದೆ. ಭಗವಂತನೇ ಲಕ್ಷ್ಯ. ಮನಸ್ಸು ಬಾಣ. ಭಗವಂತನೆಡೆಗೆ ಗುರಿಯಿಟ್ಟು ಮನಸ್ಸನ್ನು ಪ್ರಯೋಗಿಸಬೇಕು. ಧನುಸ್ಸಿನ ಆಸರೆಯಿಲ್ಲದ ಬಾಣ ಗುರಿ ಮುಟ್ಟಲು ಅಸಮರ್ಥ. ವೇದವೇ ಧನುಸ್ಸು. ವೇದದ ಅಧ್ಯಯನದಿಂದ ಶಕ್ತಿ ಸಂಪನ್ನವಾದ ಮನಸ್ಸು ಬ್ರಹ್ಮನ ಕಡೆಗೆ ವೇಗದಿಂದ ಸಾಗಬಲ್ಲದು. ಬಾಣವನ್ನು ಬಿಡುವಾಗ ಸ್ಥಿರದೃಷ್ಟಿ, ಏಕಾಗ್ರತೆ ಅಗತ್ಯ, ಅಪ್ರಮತ್ತನಾದರೆ ಬಾಣ ಗುರಿ ಮುಟ್ಟದು.

ದುರ್ಯೋಧನಾದಿಗಳಿಗೆ ಗುರಿಯ ಜೊತೆ ಉಳಿದೆಲ್ಲವೂ ತೋರುತ್ತಿತ್ತು. ನಮಗಂತೂ ಗುರಿಯಾದ ಭಗವಂತನನ್ನು ಬಿಟ್ಟು ಉಳಿದೆಲ್ಲವೂ ತೋರುತ್ತಿದೆ. ಅರ್ಜುನನಂತೆ ಉತ್ತಮ ಗುರಿಕಾರನಾಗಬೇಕು. ಉಳಿದೆಲ್ಲವನ್ನು ಮರೆತು ಭಗವಂತನೊಬ್ಬನನ್ನೇ ಚಿತ್ತಪಟಲದಲ್ಲಿ ಚಿತ್ರಿಸಬೇಕು. ಅಂತಹವನೇ ಯಶಸ್ವೀ ಬಿಲ್ಲುಗಾರ–ಯಶಸ್ವೀ ಸಾಧಕ. ನಮ್ಮ ಮನಸ್ಸಿನಲ್ಲಿ ದೇವರ ಬದಲು ಏನೇನೋ ವಿಕೃತ ಚಿತ್ತಗಳೇ ಕುಣಿದಾಡುತ್ತಿದೆ ಗಣಪತಿಯ ಚಿತ್ರ ಬರೆಯಲು ಉಪಕ್ರಮ ಕಪಿಯ ಚಿತ್ರ ಪರಿಣಾಮ.

**ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।**
**ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ।**

– ಆಥರ್ವಣೋಪನಿಷತ್

* * *

## 7. ಅಹಂಕಾರದಿಂದ ಪತನ – ತ್ಯಾಗದಿಂದ ಉತ್ಥಾನ

### ರಾಜಾ ಯಯಾತಿಯ ಜೀವನದ ರೋಚಕ ಸನ್ನಿವೇಶ

ರಾಜಾ ಯಯಾತಿಯು ಪ್ರಜಾಪಾಲನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಜೊತೆಗೆ ಯಜ್ಞ, ದಾನಗಳಿಂದ ತನ್ನ ಸಂಪತ್ತಿನ

ವಿತರಣೆಯನ್ನೂ ನಡೆಸಿ ಆದರ್ಶ ಮಹಾರಾಜನೆಂದು ಖ್ಯಾತಿಯನ್ನು ಪಡೆದನು. ಸಂಸಾರದ ಸುಖಭೋಗಗಳನ್ನೇನೋ ಯಥೇಚ್ಛವಾಗಿ ಅನುಭವಿಸಿದನು. ಶಾಪದಿಂದ ಬಂದ ಮುದಿತನವನ್ನೂ ಮಗನಿಗೆ ಬದಲಾಯಿಸಿ ಅವನ ತಾರುಣ್ಯವನ್ನು ತಾನು ಪಡೆದು ದೀರ್ಘಕಾಲ ಭೋಗ ವಿಲಾಸಗಳಲ್ಲಿ ವಿಹರಿಸಿದನು. ಆದರೆ ಕೊನೆಗೆ ಬೇಸತ್ತು "ಎಷ್ಟೇ ದೀರ್ಘಕಾಲದ ಭೋಗ ವಿಲಾಸ ಜೀವನದಿಂದಲೂ ನಮ್ಮ ಮನಸ್ಸಿನ ಕಾಮನೆಯು ತಣಿಯಲಾರದು. ಘೃತಾಹುತಿಯನ್ನು ಕೊಟ್ಟು ಬೆಂಕಿಯನ್ನು ಶಾಂತಗೊಳಿಸಬಹುದೇ? ಹವಿಸ್ಸುಗಳಿಂದ ಬೆಂಕಿಯು ಇನ್ನೂ ಪ್ರಜ್ವಲಿತವಾಗುವಂತೆ ಭೋಗಾನುಭವಗಳಿಂದ ನನ್ನ ಕಾಮನೆಯು ಇನ್ನೂ ಕೆರಳುವುದು" ಎಂದು ತನ್ನ ಅನುಭವದ ಉದ್ಗಾರವನ್ನು ಉಸಿರಿದನು. ಎಲ್ಲ ರಾಜಭೋಗ, ಐಶ್ವರ್ಯ, ವೈಭವಗಳನ್ನು ತ್ಯಜಿಸಿ ತನ್ನ ಅಂತಿಮ ದಿನಗಳಲ್ಲಿ ಅರಣ್ಯದಲ್ಲಿ ತಪಸ್ವೀ ಜೀವನವನ್ನು ನಡೆಸಿದನು. ಹೀಗೆ ಯಯಾತಿಯ ಭೋಗದಲ್ಲೂ, ತ್ಯಾಗದಲ್ಲೂ ತನ್ನದೇ ಆದ ದಾಖಲೆಯನ್ನು ಸ್ಥಾಪಿಸಿದನು. ತನ್ನ ಯಜ್ಞ, ದಾನ, ತಪಸ್ಸು, ಪ್ರಜಾರಕ್ಷಣೆಗಳಿಂದ ಅಪಾರ ಪುಣ್ಯರಾಶಿಯನ್ನು ಪಡೆದು ಸ್ವರ್ಗಸಾಮ್ರಾಜ್ಯದಲ್ಲಿ ಮೆರೆದನು. ಇಂದ್ರಲೋಕದಲ್ಲಿ ವೈಭವ, ಸಂತೃಪ್ತಿಗಳಿಂದ ಕಾಲವನ್ನು ಕಳೆಯುತ್ತಿದ್ದನು. ಒಮ್ಮೆ ಇಂದ್ರನು ಅವನಲ್ಲಿ ಮಾತಾಡುತ್ತ "ಪ್ರಪಂಚದಲ್ಲಿ ತನ್ನ ಕರ್ತವ್ಯವನ್ನೆಲ್ಲ ನೆರವೇರಿಸಿ ಕೊನೆಗೆ ಭೋಗ, ಭಾಗ್ಯಗಳನ್ನೆಲ್ಲ ತ್ಯಜಿಸಿ ಅರಣ್ಯದಲ್ಲಿ ತಪೋಮಯ ಜೀವನ ನಡೆಸಿದ ಧರ್ಮಾತ್ಮನು ನೀನು. ನಿನಗಿಂತ ಆದರ್ಶ ತಪಸ್ವಿಗಳು ಬೇರೆ ಯಾರಿದ್ದಾರೆ?" ಎಂದು ಪ್ರಶ್ನಿಸಿದನು. "ಈ ದೇವ, ಮನುಷ್ಯ, ಗಂಧರ್ವರಲ್ಲಿ, ನನ್ನ ತಪಸ್ಸಿಗೆ ಸರಿಸಾಟಿಯಾದ ಇನ್ನೊಬ್ಬ ವ್ಯಕ್ತಿಯು ಎಲ್ಲಿಯೂ ದೊರೆಯಲಾರ"ನೆಂದು ಯಯಾತಿಯು ಒಡನೆಯೇ ಉತ್ತರಿಸಿದನು. ಅವನ ಈ ಅಹಂಕಾರದ ನುಡಿಯೇ ಅವನ ಸ್ವರ್ಗಸುಖ ವೈಭವದ ಚರಮ ಗೀತೆಯಾಗುವುದು. ಅವನ ಪುಣ್ಯ ಪರ್ವತವೆಲ್ಲ ಒಡನೆಯೇ ಕುಸಿದು ಬೀಳುವುದು. ಅಹಂಕಾರದಿಂದ ತನ್ನೆಲ್ಲ ಪುಣ್ಯ ಸಂಪತ್ತನ್ನು ಕಳೆದಕೊಂಡು ನಿರ್ಭಾಗ್ಯನಾಗಿ ಯಯಾತಿಯು ಕೆಳಗಿಳಿಯುವನು.

ಭೂಲೋಕದಲ್ಲಿ ಯಜ್ಞದಲ್ಲಿ ಪ್ರಸಕ್ತರಾಗಿದ್ದ ರಾಜರ್ಷಿಗಳಾದ ಅಷ್ಟಕ, ಪ್ರವರ್ಧನ, ವಸುಮನ, ಶಿಬಿಗಳ ಯಜ್ಞ ಮಂಟಪದಲ್ಲಿಯೇ ಯಯಾತಿಯ

ಪತನವಾಗುವುದು. ಸ್ವರ್ಗದಿಂದ ಕೆಳಗಿಳಿಯುತ್ತಿರುವ ಈ ಪುಣ್ಯಜೀವಿಯನ್ನು ಗುರುತಿಸಿದ ಈ ರಾಜರ್ಷಿಗಳು ಅವನ ಪತನದ ಹಿನ್ನೆಲೆಯನ್ನು ಅವನಲ್ಲಿ ವಿಚಾರಿಸಿ ಅರಿತುಕೊಳ್ಳುವರು. ಅಹಂಕಾರದಿಂದ ತನಗಾದ ಈ ದುಃಸ್ಥಿತಿಯನ್ನು ಯಯಾತಿಯು ವಿವರಿಸಿ ಅಹಂಕಾರ ಮುಕ್ತರಾಗಿ ಕರ್ತವ್ಯವನ್ನು ಮಾಡುವಂತೆ ಅವರಿಗೆ ಉಪದೇಶಿಸುವನು. ಸ್ವರ್ಗದಲ್ಲಿ ತಾವು ಗಳಿಸಿರುವ ಅಪಾರ ಪುಣ್ಯ ಸಂಪತ್ತಿನ ಲೆಕ್ಕಾಚಾರವನ್ನೂ ಅದರ ಫಲವಾಗಿ ತಮಗೆ ದೊರೆಯಲಿರುವ ಉತ್ತಮ ಲೋಕಗಳ ವಿಸ್ತಾರವನ್ನೂ ಯಯಾತಿಯಿಂದ ಈ ರಾಜರುಗಳು ತಿಳಿದುಕೊಳ್ಳುವರು. ತಮ್ಮ ನಾಲ್ವರಲ್ಲಿ ಒಬ್ಬರ ಪುಣ್ಯ ಫಲವನ್ನು ಸ್ವೀಕರಿಸಿ ಪುನಃ ಸ್ವರ್ಗ ಸುಖವನ್ನು ಅನುಭವಿಸುವಂತೆ ಇವರು ಯಯಾತಿಯನ್ನು ಕೇಳುವರು. ಯಯಾತಿಯು ಇದನ್ನು ನಿರಾಕರಿಸುವನು. ಅಧಿಕಾರಿಗಳಿಗೆ ಲಂಚವನ್ನು ಕೊಡುವಾಗ ಅವರು ಅದನ್ನು ನಿರಾಕರಿಸುವುದೂ ಉಂಟು. ಹಣ ತೀರಾ ಕಡಿಮೆಯಾಯಿತೆಂದೇ ಇದಕ್ಕೆ ಅರ್ಥ. ತಾವು ಕೊಡಮಾಡಿರುವ ಪುಣ್ಯ ಕಡಿಮೆಯಾಯಿತೇ? ಎಂದು ಸಂಕೋಚಗೊಂಡು ಈ ನಾಲ್ವರೂ ತಮ್ಮೆಲ್ಲರ ಪುಣ್ಯಫಲವನ್ನು ಒಟ್ಟಾಗಿ ಪೂರ್ಣವಾಗಿ ಯಯಾತಿಗೆ ಅರ್ಪಿಸಲು ಮುಂದೆ ಬರುವರು. ಸ್ವಾಭಿಮಾನಿಯಾದ ಯಯಾತಿಯು "ನಾನು ಕಷ್ಟಪಟ್ಟು ಗಳಿಸಿದ ತಪಸ್ಸನ್ನೆಲ್ಲ ಅಹಂಕಾರಮತ್ತನಾಗಿ ಕಳೆದುಕೊಂಡೆ. ಈಗ ಇನ್ನೊಬ್ಬರ ಶ್ರಮದ ಫಲದಿಂದ ನಾನು ಸ್ವರ್ಗದಲ್ಲಿ ಮೆರೆಯಲೇ? ನಿಮ್ಮನ್ನು ಪುನಃ ಈ ಸಂಸಾರದಲ್ಲಿ ಕೆಡವಿಹಾಕಿ ನಿಮ್ಮ ಫಲವನ್ನೆಲ್ಲ ಕಸಿದುಕೊಂಡು ನಾನು ಸ್ವಾರ್ಥಿಯಾಗಿ ಸ್ವರ್ಗಕ್ಕೆ ಹೇಗೆ ಹೋಗಲಿ?" ಎಂದು ಅವರ ಕೊಡುಗೆಯನ್ನು ನಿರಾಕರಿಸಿದನು.

ಯಃಕಶ್ಚಿತ್ ಅಪರಿಚಿತನಿಗಾಗಿ ತಮ್ಮ ಸಮಗ್ರ ಜೀವನದ ತಪಸ್ಸಿನ ಗಳಿಕೆಯನ್ನೆಲ್ಲ ಒಂದೇ ಕ್ಷಣದಲ್ಲಿ ಅರ್ಪಿಸಲು ಮುಂದಾಗುವ ಈ ನಾಲ್ಕು ರಾಜರ ಔದಾರ್ಯವು ರೋಮಾಂಚಕಾರಿಯಾಗಿದ್ದರೆ ಈ ಪುಣ್ಯ ದಾರಿದ್ರ್ಯದ ವಿಪನ್ನಾವಸ್ಥೆಯಲ್ಲೂ ತನ್ನೆಡೆಗೆ ಅನಾಯಾಸವಾಗಿ ಹರಿದುಬಂದ ಈ ಅಪಾರ ಪುಣ್ಯ ಸಂಪತ್ತಿನ ಆಕರ್ಷಣೆಗೆ ಸ್ವಲ್ಪವೂ ವಿಚಲಿತನಾಗದೆ ಅದೆಲ್ಲವನ್ನೂ ಕಡೆಗಣಿಸುವ ಯಯಾತಿಯ ತ್ಯಾಗ ಭಾವವೂ ಅಸಾಮಾನ್ಯವಾದುದು. ಯಯಾತಿ ಮತ್ತು ಈ ನಾಲ್ಕು ರಾಜರ ತ್ಯಾಗದ ಈ ಸ್ಪರ್ಧೆಯು

ದೇವತೆಗಳನ್ನೂ ವಿಚಲಿತಗೊಳಿಸಿತು. ಈ ಐದುಮಂದಿ ತ್ಯಾಗವೀರರನ್ನೂ ಸ್ವರ್ಗಕ್ಕೆ ಸ್ವಾಗತಿಸಲು ಪುನಃ ದೇವಲೋಕದ ವಿಮಾನಗಳು ಕೆಳಗಿಳಿಯುತ್ತವೆ. ಮಾನವನು ಎಷ್ಟೇ ದೇವತ್ವಕ್ಕೇರಿದರೂ ಅಹಂಕಾರದಿಂದ ಅವನ ಪತನವಾಗುವುದು. ತ್ಯಾಗದಿಂದಲೇ ಪುನಃ ಅವನು ದೇವತ್ವವನ್ನು ಪಡೆಯಬಲ್ಲನೆಂಬ ಉದಾತ್ತ ಪ್ರೇರಣೆಯನ್ನು ಯಯಾತಿಯ ಜೀವನದ ಈ ಘಟನೆಯು ನಮಗೆ ನೀಡುವುದು.

* * *

## 8. ಶ್ರೀಕೃಷ್ಣ ಸರ್ವಾಧಿಕಾರಿಯಾಗಿದ್ದನೆ?

ಶ್ರೀಕೃಷ್ಣ ಎಂದೂ ಸರ್ವಾಧಿಕಾರಿ ಪ್ರವೃತ್ತಿಯನ್ನು ತೋರಿಸಿಲ್ಲ. ಶ್ರೀಕೃಷ್ಣ ಭಗವಂತನಾಗಿರುವುದರಿಂದ **'ಮಾಮನುಸ್ಮರ ಯುಧ್ಯ ಚ....'** ನನ್ನ ಸ್ಮರಣೆಯೊಂದಿಗೆ ಯುದ್ಧ ಮಾಡು ಎಂದು ತಿಳಿಸಿರುವನು. **'ಮಾಮೇಕಂ ಶರಣಂ ವ್ರಜ....'** ಎಂಬುದು ವೇದಾಂತ ದೃಷ್ಟಿಯಿಂದ ಹೊರಟ ಸಂದೇಶ. ಬರೇ ಅರ್ಜುನನಿಗೆ ಅಲ್ಲ. ಎಲ್ಲರಿಗೂ ಸಂಬಂಧಿಸುವ ಸಂದೇಶ. ಭಗವಂತನಲ್ಲಿ ಭಕ್ತಿ ಇಟ್ಟು ಭಗವಂತನ ಸೇವಾರೂಪದಿಂದ ತಮ್ಮ ತಮ್ಮ ಕರ್ತವ್ಯವನ್ನು ಮಾಡಬೇಕು. ಕರ್ಮ ಮಾಡುವುದರಲ್ಲಿ ಸ್ವಾರ್ಥ ಮನೋಭಾವ ಬಂತೆಂದರೆ ಕೃತ್ರಿಮತೆ, ವಂಚನೆ ಮುಂತಾದ ಕಾಲುಷ್ಯ ಕಾಣಿಸಿಕೊಳ್ಳುವುದು. ಸ್ವಾರ್ಥ ಬಿಟ್ಟು ಭಗವಂತನ ಸೇವಾರೂಪದಿಂದ ಲೋಕದ, ಸಮಾಜದ ಕಲ್ಯಾಣದ ದೃಷ್ಟಿಯಿಂದ ತಮ್ಮ ತಮ್ಮ ಕರ್ತವ್ಯವನ್ನು ನಡೆಸಿದ್ದಾದರೆ ಅದರಲ್ಲಿ ಯಾವುದೇ ಲೋಪದೋಷಗಳು ಸುಳಿಯಲಾರವು.

**'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ'** – ಎಂಬ ಮಾತಿನಲ್ಲಿ ಶ್ರೀಕೃಷ್ಣ ಬಂಡವಾಳಶಾಹಿ ಪ್ರವೃತ್ತಿಗೆ ಪುಷ್ಟಿ ಕೊಟ್ಟಿದ್ದಾನೆ. ಕೆಲಸ ಮಾಡಬೇಕು, ಸಂಬಳ ಕೇಳಬಾರದು, ಕೊಟ್ಟಷ್ಟು ಸಂಬಳ ತೆಗೆದುಕೊಳ್ಳಬೇಕು ಎಂದು 'ಕಮ್ಯುನಿಸ್ಟರು' ಶ್ರೀಕೃಷ್ಣನ ಮಾತಿಗೆ ಅಪಾರ್ಥ ಹಚ್ಚಿದ್ದೂ ಇದೆ. ಆದರೆ ಶ್ರೀಕೃಷ್ಣ ಪರಮಾತ್ಮನಲ್ಲಿ ಭಕ್ತಿ ಇಟ್ಟು ಅವನ ಸೇವಾರೂಪದಿಂದ ತಮ್ಮ ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕು. ಕರ್ಮದ ಫಲದ ಕಡೆಗೆ ಗಮನವಿದ್ದಲ್ಲಿ ಕರ್ತವ್ಯ ನಿರ್ವಹಣೆಯಲ್ಲಿ ಭ್ರಷ್ಟತೆಗೆ ಅವಕಾಶವಿದೆ. ಹಾಗಾಗಬಾರದು, ಎಂದು ಮಾನವೀಯ ಸಂದೇಶ ನೀಡಿದ್ದಾನೆಯೇ

ಹೊರತು ಅವನ ಸಂದೇಶದಲ್ಲಿ ಸರ್ವಾಧಿಕಾರಿಯ ಪ್ರವೃತ್ತಿಯ ಧ್ವನಿ ಇಲ್ಲವೇ ಇಲ್ಲ. ಆದುದರಿಂದಲೇ ಸಾಮಾಜಿಕ ದೃಷ್ಟಿಕೋನದಿಂದ ಫಲವ್ಯಾಮೋಹದ ತ್ಯಾಗದ ಬಗ್ಗೆ ಉಪದೇಶ ನೀಡಿ ಕೊನೆಗೆ **'.....ಯಥೇಚ್ಛಸಿ ತಥಾ ಕುರು'**– ಇವನ್ನೆಲ್ಲ ಪರಿಶೀಲಿಸಿ ನಿನ್ನ ಇಚ್ಛೆಗನುಗುಣವಾಗಿ ನಡೆದುಕೊಳ್ಳು ಎಂದು ಪ್ರಜಾಪ್ರಭುತ್ವದ, ವೈಯಕ್ತಿಕ ಸ್ವಾತಂತ್ರ್ಯದ ಸಂದೇಶವನ್ನೂ ನೀಡಿರುವನೆಂಬುದನ್ನು ಮರೆಯುವಂತಿಲ್ಲ. – ಅರ್ಜುನನಲ್ಲಿ ದುರ್ಯೋಧನನನ್ನು ಮಾತ್ರ 'ಗುಂಡು ಇಕ್ಕಿ ಕೊಲ್ಲು' – ಎಂದು ಹೇಳಿದ್ದಲ್ಲ. 'ಸಮಾಜ ಘಾತುಕ ಶಕ್ತಿ' ಯಾವುದೇ ಇರಲಿ ಅದರ ವಿರುದ್ಧ ಹೋರಾಡಲು ಕರೆ ನೀಡಿದ್ದಾನೆ. ಮಹಾಭಾರತದಲ್ಲಿ 'ವಿದುರನೀತಿ' 'ಕಣಿಕನೀತಿ' ಎಂದೂ ರಾಮಾಯಣದಲ್ಲಿ 'ರಾಮನೀತಿ' 'ರಾವಣನೀತಿ' ಎಂದೂ ಪರಸ್ಪರ ವಿರುದ್ಧ ನೀತಿಗಳಿದ್ದು ಅವುಗಳಲ್ಲಿಯ ಒಂದು ನೀತಿಯನ್ನು ಸ್ಥಾಪಿಸಬೇಕೆಂದರೆ ಅದರ ವಿರುದ್ಧ ನೀತಿಯ ನಿಗ್ರಹ ಆಗಲೇಬೇಕು.

ಅಲ್ಲದೆ, ರಾಮಾಯಣ ಮಹಾಭಾರತಗಳೆಲ್ಲ ಬರೇ ಇತಿಹಾಸಗಳೆನಿಸದೆ ಎಲ್ಲರ ಬದುಕಿಗೆ ಸಂಬಂಧಿಸುವ ಕೃತಿಗಳೂ ಆಗಿವೆ. ಶ್ರೀಮಧ್ವಾಚಾರ್ಯರು ಅವುಗಳೆಲ್ಲ ಆಧ್ಯಾತ್ಮಿಕ ಗ್ರಂಥಗಳೂ ಆಗಿವೆ ಎಂದು ತೋರಿಸಿ ಕೊಟ್ಟಿದ್ದಾರೆ. ನಮ್ಮೆಲ್ಲರ ಬದುಕಿನಲ್ಲಿ ಪ್ರತಿನಿತ್ಯ ಸಾತ್ವಿಕ ಹಾಗೂ ದುಷ್ಟಶಕ್ತಿಗಳ ಹೋರಾಟ ನಡೆಯುತ್ತಿದ್ದು, ಅಂತಹ ಹೋರಾಟಕ್ಕೆ ಸಂಬಂಧಿಸಿಯೂ ಗೀತೆಯ ಸಂದೇಶ ಹೊರಟಿದೆ.

* * * *

# ಭಾಗವತ ಸಂದೇಶ



ಗದಾ-ಪದ್ಮ-ಶಂಖ-ಚಕ್ರಧಾರಿಯಾದ **'ಪದ್ಮಾ'**ಪತಿ **'ಗೋವಿಂದ'**



ಪ್ರಕೃತಿಗೆ ಅತೀತನಾದ ಪರಮಾತ್ಮನಿಗೆ ರಾಗ-ದ್ವೇಷಾದಿ ಮನೋವಿಕಾರಗಳ ಲವಲೇಶವೂ ಇರುವುದಿಲ್ಲ. ಸ್ತೋತ್ರ, ನಿಂದೆಗಳಿಂದ ನಮ್ಮಂತೆ ಅವನಲ್ಲಿ ಯಾವುದೇ ವಿಕಾರ ವಿಪರಿಣಾಮಗಳು ಸಂಭವಿಸುವುದಿಲ್ಲ. ಸ್ತೋತ್ರಪೂಜೆಗಳಿಗೆ ಮರುಳಾಗಿಯಾಗಲೀ, ತನ್ನ ನಿಂದೆಯಿಂದ ವಿಭ್ರಾಂತನಾಗಿಯಾಗಲೀ ಪರಮಾತ್ಮನು ಶಿಕ್ಷೆರಕ್ಷೆಗಳನ್ನು ವಿಧಿಸುತ್ತಿಲ್ಲ. ಸತ್ಯವನ್ನು ತಿಳಿದು ಆ ತತ್ವಜ್ಞಾನದ ತಳಹದಿಯಲ್ಲಿ ತಮ್ಮ ಜೀವನವನ್ನು ನಡೆಸುವವರೇ ಸಂತರು ಹಾಗೂ ಭಕ್ತರು.

**- ಶ್ರೀ ವಿಶ್ವೇಶತೀರ್ಥಶ್ರೀಪಾದರು**

## 1. ಭಾಗವತದ ಸಂದೇಶ

ಭಾಗವತವು ಪುರಾಣಗಳಲ್ಲಿಯೇ ಅದ್ಭುತವೂ ವೈಶಿಷ್ಟ್ಯಪೂರ್ಣವೂ ಆದ ಗ್ರಂಥವಾಗಿದೆ. ಅದರಲ್ಲಿರುವ ಸ್ತೋತ್ರಪ್ರಾರ್ಥನೆಗಳಾಗಲೀ, ಸಂವಾದ ನಿರೂಪಣೆಗಳಾಗಲೀ ನಮ್ಮನ್ನು ಅಧ್ಯಾತ್ಮದ ಆಳಕ್ಕೆ ಕರೆದುಕೊಂಡು ಹೋಗುತ್ತವೆ. ಓದಿದಷ್ಟೂ ಹೊಸಹೊಸ ಅರ್ಥಗಳನ್ನು ತೆರೆದುಕೊಳ್ಳುತ್ತವೆ. ಅದರ ಮಧುರ ಭಾಷೆ, ಉದಾತ್ತಶೈಲಿ, ಅರ್ಥಗಾಂಭೀರ್ಯ, ನಿರೂಪಣ ರೀತಿ ಎಲ್ಲವೂ ಅನ್ಯಾದೃಶವಾಗಿವೆ. ಭಾಗವತವು ಭಗವಂತನ ವಿವಿಧ ಅವತಾರಗಳನ್ನು ವರ್ಣಿಸುವಂತೆ ಭಕ್ತರ ವಿವಿಧ ಅವತಾರಗಳನ್ನೂ ನಿರೂಪಿಸುತ್ತದೆ. ಅತ್ಯಂತ ದುರಾಚಾರಿಯಾಗಿ, ಕೊನೆಗೂ ಪಶ್ಚಾತ್ತಾಪದಿಂದ ಬೆಂದು ಪರಿವರ್ತನೆಗೊಳ್ಳುವ, ಭಗವಂತನ ಭಕ್ತರ ಜೊತೆಗೆ ಜಗಳವಾಡಿದರೂ ಅವನನ್ನು ಅತಿಯಾಗಿ ಪ್ರೀತಿಸುವ, ಸಂಸಾರದ ಕಷ್ಟಕಾರ್ಪಣ್ಯಗಳಿಂದ ನೊಂದು ಅವನ ಕಡೆಗೆ ಸಾಗುವ ಜನರ ದುಃಖ ಸಂಕಟಗಳನ್ನು ಕಂಡು ಕರುಣೆಯಿಂದ ಮಿಡಿಯುವ, ಆ ಎಲ್ಲಾ ಕಷ್ಟಗಳು ತನಗೊಬ್ಬನಿಗೆ ದೊರೆತು ಅವರೆಲ್ಲರೂ ದುಃಖ ಮುಕ್ತರಾಗಲೆಂದು ಭಗವಂತನನ್ನು ಬೇಡುವ, ಭಗವಂತನಿಂದಲೂ ಏನನ್ನೂ ಬಯಸದ ನಿಷ್ಕಾಮ ಯೋಗಿ ಎನಿಸುವ ಭಕ್ತರ ವಿವಿಧ ರೂಪಗಳನ್ನು ನಮ್ಮ ಮುಂದಿಟ್ಟು ಭಕ್ತಿಯ ವಿಶಾಲ ರಾಜಪಥದಲ್ಲಿ ನಮ್ಮನ್ನು ನಿರಾಳವಾಗಿ ಕೊಂಡೊಯ್ಯಬಲ್ಲ ಮಹಾಗ್ರಂಥವೇ ಭಾಗವತವಾಗಿದೆ.

* * *

## 2. ಎಲ್ಲರ ದುಃಖ ತಾಪಗಳೂ ನನಗಿರಲಿ

ಎಲ್ಲರೂ ದೇವರಲ್ಲಿ ಸುಖ ಸಂಪತ್ತುಗಳನ್ನೇ ಬೇಡುವವರು. ಮೋಕ್ಷವನ್ನು ಮಾತ್ರ ಬೇಡುವವರೂ ಇದ್ದಾರೆ. ಏನೂ ಬೇಡದ ನಿಷ್ಕಾಮಯೋಗಿಗಳೂ ಇರುವರು. ಆದರೆ ದೇವರಲ್ಲಿ ದುಃಖವನ್ನು ಬೇಡುವವರು ಇದ್ದಾರೆಯೇ? ಅಂತಹ ಆದರ್ಶ ಕರುಣಾಳು ಭಕ್ತ ರಂತಿದೇವನ ಪ್ರೇರಕ ಆಖ್ಯಾಯಿಕೆಯನ್ನು ನಾವು ತಿಳಿದುಕೊಳ್ಳಲೇಬೇಕು.

ರಂತಿದೇವನ ರಾಜ್ಯದಲ್ಲೊಮ್ಮೆ ಭೀಕರ ಬರಗಾಲವು ಸಂಭವಿಸಿತು. ಪ್ರಜೆಗಳು ಅನ್ನ ನೀರಿಲ್ಲದೆ ಹಸಿವೆಯಿಂದ ನರಳುತ್ತಿರುವ ದುರಂತ ದೃಶ್ಯವನ್ನು

ಕಂಡು ರಾಜ ರಂತಿದೇವನ ಮನಸ್ಸು ತಳಮಳಗೊಂಡಿತು. ಪ್ರಜೆಗಳು ಆಹಾರವಿಲ್ಲದೆ ಸಾಯುತ್ತಿರುವಾಗ ತಾನು ಮಾತ್ರ ಉಂಡು ಮೆರೆಯಲಾರೆನೆಂದು ರಂತಿದೇವನು ನಿರ್ಧರಿಸಿದ ತಾನು ನಿರಾಹಾರನಾಗಿ ನಿಂತು ಪ್ರಜೆಗಳ ಆಹಾರದ ಏರ್ಪಾಡು ಮಾಡುತ್ತಿದ್ದನು. ತನ್ನ ದೇಶದ ಎಲ್ಲ ಪ್ರಜೆಗಳಿಗೂ ಆಹಾರ ದೊರಕಿದೆಯೆಂದು ಖಾತ್ರಿಯಾದ ನಂತರವೇ ತಾನು ಭೋಜನ ಮಾಡುವುದೆಂದು ಆತನ ಧೀರಸಂಕಲ್ಪ. ಹೀಗೆ ರಂತಿದೇವನು ಅನ್ನ ನೀರುಗಳನ್ನು ತೊರೆದು ನಲ್ವತ್ತೆಂಟು ದಿನಗಳನ್ನು ಕಳೆದನು. ಅಂದು ಎಲ್ಲಿಂದಲೂ ಆಹಾರವಿಲ್ಲದ ವರದಿ ಬಾರದ್ದರಿಂದ ಸಮಾಧಾನಗೊಂಡು ಆಹಾರವನ್ನು ಸ್ವೀಕರಿಸಲು ರಂತಿದೇವನು ಉಪಕ್ರಮಿಸಿದಾಗ ಹಸಿವೆಯಿಂದ ಬಳಲಿದ ವಿದ್ವಾಂಸನಾದ ಬ್ರಾಹ್ಮಣನೊಬ್ಬನು ಪ್ರತ್ಯಕ್ಷನಾದನು. ತಾನು ಸಿದ್ಧಪಡಿಸಿದ ಆಹಾರದ ಒಂದು ಭಾಗವನ್ನು ಅವನಿಗೆ ನೀಡಿ ಅವನನ್ನು ಸಂತುಷ್ಟಗೊಳಿಸಿ ಕಳುಹಿಸಿದನು. ನಂತರ ಕಾರ್ಮಿಕನಾದ ಶೂದ್ರನೊಬ್ಬನು ಅನ್ನಕ್ಕಾಗಿ ಹಾತೊರೆದು ರಾಜನ ಬಳಿಗೆ ಬಂದನು. ಅವನಿಗೂ ತನ್ನ ಆಹಾರವನ್ನು ಹಂಚಿದನು. ಮುಂದೆ ಹೊಲೆಯನೊಬ್ಬನು ನಾಯಿಗಳ ಜೊತೆಗೆ ರಾಜನ ಬಳಿಗೆ ಆಗಮಿಸಿ ತನ್ನ ಹಸಿವೆಯ ಸಂಕಷ್ಟವನ್ನು ಅವನಲ್ಲಿ ತೋಡಿಕೊಂಡನು. ರಾಜನು ತನ್ನ ಬಳಲಿಕೆಯನ್ನು ಪೂರ್ತಿಯಾಗಿ ಮರೆತು ಅವನನ್ನು ಬಹು ಮರ್ಯಾದೆಯಿಂದ ಪ್ರೀತಿಯಿಂದ ಆದರಿಸಿ ತನ್ನಲ್ಲಿ ಉಳಿದ ಆಹಾರವನ್ನೆಲ್ಲ ಹೊಲೆಯನಿಗೂ ಅವನ ಜೊತೆಗೆ ಬಂದ ನಾಯಿಗಳಿಗೂ ಹಂಚಿ ಅವರನ್ನೆಲ್ಲ ಸಂತೃಪ್ತಗೊಳಿಸಿದನು. ರಾಜನಿಗೆ ವಿದ್ವಾಂಸನಾದ ಬ್ರಾಹ್ಮಣರಲ್ಲೂ ಈ ಹೊಲೆಯನಲ್ಲೂ ಸರ್ವಪ್ರಾಣಿಗಳ ಅಂತರ್ಯಾಮಿಯಾದ ಭಗವಂತನ ದರ್ಶನವೇ ಆಗುತ್ತಿತ್ತು. ಆರ್ತರ ರೂಪದಲ್ಲಿ ಭಗವಂತನೇ ತನ್ನ ಸೇವೆಯನ್ನು ಸ್ವೀಕರಿಸಲು ದರ್ಶನ ನೀಡುವನೆಂಬ ಭಕ್ತಿ ಸಂಭ್ರಮಗಳಿಂದ ಕರುಣೆ ಅನುಕಂಪದಿಂದ ತನ್ನ ನಲ್ವತ್ತೆಂಟು ದಿನಗಳ ಉಪವಾಸದ ಆಯಾಸವನ್ನೂ ಮರೆತು ಪ್ರಜೆಗಳ ಸಂಕಷ್ಟದಲ್ಲಿ ಸಮರಸನಾಗಿ ಅವರ ಅಂತರಂಗದಲ್ಲಿರುವ ಭಗವಂತನನ್ನು ಪೂಜಿಸುವ ಹಿಗ್ಗಿನಲ್ಲಿ ತನ್ನಲ್ಲಿರುವ ಎಲ್ಲ ಆಹಾರವನ್ನು ಈ ರೀತಿಯಲ್ಲಿ ವಿತರಣೆ ಮಾಡಿದನು. ಕೊನೆಗೆ ಅವನಲ್ಲಿ ಉಳಿದದ್ದು ಒಬ್ಬನಿಗೆ ಕುಡಿಯಲು

ಬೇಕಾಗುವಷ್ಟು ನೀರು ಮಾತ್ರ. ಎಲ್ಲರನ್ನು ಕಳುಹಿಸಿ ಆ ನೀರನ್ನಷ್ಟು ಕುಡಿದು ತನ್ನ ಆಯಾಸವನ್ನು ಕಡಿಮೆ ಮಾಡಿಕೊಳ್ಳೋಣವೆಂದು ಆತನು ಉಪಕ್ರಮಿಸಿದಾಗ ಕಾಡಿನಲ್ಲಿ ವಾಸಿಸುವ ಬೇಡನೊಬ್ಬನು ದೈನ್ಯದಿಂದ ಅವನ ಮುಂದೆ ನಿಂತು ನೀರಿಗಾಗಿ ಅಂಗಲಾಚಿದನು. ನೀರಿಗಾಗಿ ಹಾತೊರೆಯುವ ಬೇಡನ ಆರ್ತನಾದವನ್ನು ಕೇಳಿ ಅವನ ದೀನ ದೆಶೆಯನ್ನು ಕಂಡು ರಾಜನು ಮರುಗಿದನು. ಜನರ ಈ ಕಷ್ಟ ಕಾರುಣ್ಯ ಸ್ಥಿತಿಯನ್ನು ಕಂಡು ವಿಹ್ವಲನಾದ ರಾಜನು ಹೀಗೆ ಉದ್ಗರಿಸುವನು.

**"ನ ಕಾಮಯೇಽಹಂ ಗತಿಮೀಶ್ವರಾಣಾಂ**
**ಮಹರ್ದ್ಧಿಯುಕ್ತಾಮಪುನರ್ಭವಂ ವಾ ।**
**ಆರ್ತಿಂ ಪ್ರಪದ್ಯೇಽಖಿಲದೇಹಭಾಜಾಂ**
**ಅಂತಃಸ್ಥಿತಾಂ ಯೇನ ಭವಂತ್ಯದುಃಖಾಃ" ॥**

ಭಾ. 9ನೇ ಸ್ಕಂಧ. 18ನೇ ಅಧ್ಯಾಯ. 13ನೇ ಶ್ಲೋಕ

ನಾನು ಸುಖ, ಸಂಪತ್‌ಸಮೃದ್ಧಿ, ಅಷ್ಟೈಶ್ವರ್ಯ ಇದು ಯಾವುದನ್ನೂ ಬಯಸುವುದಿಲ್ಲ. ಮೋಕ್ಷವೂ ನನಗೆ ಬೇಡ. ಎಲ್ಲರ ದುಃಖವೂ ತನಗೊಬ್ಬನಿಗೇ ದೊರೆತು ಅವರೆಲ್ಲರೂ ದುಃಖಮುಕ್ತರಾಗಲಿ. ಇದೇ ದೇವರಲ್ಲಿ ನನ್ನ ಪ್ರಾರ್ಥನೆ.

ರಂತಿದೇವನ ಈ ಪ್ರಾರ್ಥನೆಯನ್ನು ಕೇಳಿದಾಗ ನಮಗೆ ರೋಮಾಂಚನವಾಗದಿರದು. ರಾಜನಾಗಿ ಸಕಲ ವೈಭವವನ್ನು ಪಡೆದಿದ್ದರೂ ಜನತೆಯ ಕಷ್ಟದಲ್ಲಿ ಸಮಭಾಗಿಯಾಗಿ ಅದನ್ನೆಲ್ಲ ತೊರೆಯುವುದರ ಜೊತೆಗೆ ಎಲ್ಲ ಕ್ಲೇಶ ಸಂಕಷ್ಟಗಳನ್ನೂ ತನಗೊಬ್ಬನಿಗೇ ಆಹ್ವಾನಿಸುವ ಅವನ ಧೈರ್ಯ, ಸಾಹಸ, ತ್ಯಾಗಗಳು ಅನುಪಮವಾಗಿವೆ. ಯಾವ ದೇಶದ ಇತಿಹಾಸದಲ್ಲಿಯೂ ಇಂತಹ ಅಪೂರ್ವ ತ್ಯಾಗದ ನಿದರ್ಶನವನ್ನು ಕಾಣಲಾರೆವು. ಈ ಪ್ರಾರ್ಥನೆಯ ಜೊತೆಗೆ ಉಳಿದಿರುವ ನೀರನ್ನು ತಾನು ನೀರಿಲ್ಲದೆ ಸಾಯುತ್ತಿದ್ದರೂ ಅದನ್ನು ಪರಿಗಣಿಸದೆ ಆ ಬೇಡನಿಗೆ ನೀಡಿದನು. ಅವನ ಈ ತ್ಯಾಗಕ್ಕೆ ಬೆರಗಾದ ದೇವತೆಗಳೇ ಆಗ ರಂತಿದೇವನ ಮುಂದೆ ಪ್ರತ್ಯಕ್ಷರಾದರು. ನೆರೆ, ಭೂಕಂಪ, ಬರಗಾಲ, ಬಿರುಗಾಳಿಯಂತಹ ಜನತೆಯ

ಭೀಕರ ಅನಾಹುತ ಪ್ರಸಂಗದಲ್ಲಿ ರಂತಿದೇವನ ಈ ಪರಮೋದಾರ ಆದರ್ಶದಿಂದ ಸ್ಫೂರ್ತಿಗೊಂಡು ಆರ್ತಜನತೆಗೆ ಪ್ರೀತಿ ಅನುಕಂಪದಿಂದ ಸಾಧ್ಯವಿದ್ದ ನೆರವನ್ನು ನೀಡಲು ನಾವೂ ಮುಂದೆ ಬರಬೇಡವೇ?

* * *

## 3. ಭಕ್ತ ಧ್ರುವ

ಉತ್ತಾನಪಾದನಿಗೆ ಸುನೀತಿ, ಸುರುಚಿ ಇಬ್ಬರು ಪತ್ನಿಯರು. ರಾಜನಿಗೆ ಸುನೀತಿಯ ಬಗ್ಗೆ ಅನಾಸ್ಥೆ. ಸುರುಚಿಯಲ್ಲಿ ಅಭಿರುಚಿ. ಸುನೀತಿಯ ಸುತ ಧ್ರುವಕುಮಾರ.

ಅದೊಂದು ದಿನ ಉತ್ತಾನಪಾದ ಸಿಂಹಾಸನಸಮಾಸೀನ. ಎದುರಿಗೆ ಸುರುಚಿ, ಬಾಲಕ ಧ್ರುವ ಓಡಿಬಂದು ಅಪ್ಪನ ತೊಡೆಯೇರಿದ-ತಂದೆಯ ಮೇಲಿನ ಪ್ರೀತಿಯಿಂದ. ಕೂಡಲೆ ಸುರುಚಿಯಿಂದ ಗರ್ಜನೆ. ಬಿರುನುಡಿ- "ಅಪ್ಪನ ತೊಡೆಯೇರುವ ಭಾಗ್ಯಕ್ಕೆ ಸತ್ತು, ಮತ್ತೊಮ್ಮೆ ನನ್ನಲ್ಲಿ ಹುಟ್ಟಿ ಬಾ. ಇಳಿ ಕೆಳಗೆ" ಸತಿ ವ್ಯಾಮೋಹದಿಂದ ಕುರುಡನಾಗಿದ್ದ ರಾಜ ಸುರುಚಿಯನ್ನು ಗದರಿಸಲಿಲ್ಲ. ಬದಲಾಗಿ ಹೆದರಿ ಧ್ರುವನನ್ನು ಇಳಿಸಿದ. ಮುಗ್ಧ ಕಂದ ಬಿಕ್ಕಳಿಸುತ್ತ ಅಮ್ಮ ಸುನೀತಿಯಡೆಗೆ ಧಾವಿಸಿದ.

ನಾರೀಕುಲಶಿರೋಮಣಿಯಾದ ಸುನೀತಿ- "ವತ್ಸ ನಮ್ಮ ಪ್ರಾರಬ್ಧ ಕರ್ಮದಿಂದ ಇಂಥ ಅವಮಾನವಾಗಿದೆ. ಅಪ್ಪನನ್ನು ಇದಕ್ಕಾಗಿ ನಿಂದಿಸಬೇಡ. ಆ ಭಗವಂತನನ್ನು ಶರಣುಹೊಂದು. ಹೋಗು, ತಪಸ್ಸು ಮಾಡಿ ಭಗವಂತನನ್ನು ಪ್ರಸನ್ನೀಕರಿಸಿಕೋ. ನಿನ್ನ ಎಲ್ಲ ಬಯಕೆಗಳನ್ನು ಪೂರೈಸಬಲ್ಲವನು ಆತನೊಬ್ಬನೆ".

ಎಳೆ ವಯಸ್ಸಿನ ಧ್ರುವ ಅಂಜಲಿಲ್ಲ, ಅಳುಕಲಿಲ್ಲ, **'ಮಾತೃದೇವೋ ಭವ'** ಎಂದು ತಪಸ್ಸಿಗೆ ಹೊರಟ. ನಡುವೆ ದಾರಿಯಲ್ಲಿ ನಾರದರ ಉಪದೇಶ ದೊರೆತು ಭಗವಂತನನ್ನು ಮೆಚ್ಚಿಸಿ ಧ್ರುವ ಪದವಿಯನ್ನು ಹೊಂದಿ ಕೃತಾರ್ಥನಾದ. ನಾವೂ ಉತ್ತಾನಪಾದರಂತೆ, ನಮಗೂ ಸುನೀತಿಯಲ್ಲಿ ಅನಾಸ್ಥೆ, ಸುನೀತಿಯನ್ನು ಹೊರಗೆ ಹಾಕಿದ್ದೇವೆ. ಸುರುಚಿಯಲ್ಲಿ-ರುಚಿ ರುಚಿಯಾದ ಭೋಗಪದಾರ್ಥಗಳಲ್ಲಿ-ಇವುಗಳು ಸುರೂಚಿ ಅಲ್ಲ, ಕುರುಚಿ-

ಇದರಲ್ಲಿ ನಮಗೆ ಆಸಕ್ತಿ. ಸುನೀತಿಯಿಂದಾಗಿಯೇ ಧ್ರುವ-ಶಾಶ್ವತಸ್ಥಾನ ಪಡೆದ. ನಶ್ವರಕ್ಕೆ ಮಾರುಹೋಗಿ ಅದನ್ನು ಕಡೆಗಣಿಸಿದ್ದೇವೆ. ಸುನೀತಿಯನ್ನು ಆಶ್ರಯಿಸಿದರೆ ಭಗವಂತನ ಪ್ರಸಾದ ಸಿಗಲು ಸಾಧ್ಯ.

* * *

## 4. ನಾರೀಕುಲ ಶಿರೋಮಣಿ

ಕುರುಕ್ಷೇತ್ರದ ರಣಾಂಗಣದ ಒಂದು ಮೂಲೆಯಲ್ಲಿ ಜೀವನದ ಅಂತಿಮ ನಿಮಿಷಗಳ ಎಣಿಕೆಯಲ್ಲಿದ್ದಾನೆ ದುರ್ಯೋಧನ. "ಪಾಂಡವರ ಶಿರಸ್ಸುಗಳನ್ನು ಕತ್ತರಿಸಿ ತರುತ್ತೇನೆ"-ಕಲಿಯ ಋಣ ತೀರಿಸುವ ಅಶ್ವತ್ಥಾಮನ ಪ್ರತಿಜ್ಞೆ! ಎಲ್ಲರೂ ಮಲಗಿರುವಾಗ ಪಾಂಡವರ ಶಿಬಿರ ನುಗ್ಗಿ ದ್ರೌಪದಿಯ ಐವರು ಮಕ್ಕಳನ್ನು ಕೊಂದು ಅವರ ರುಂಡಗಳನ್ನು ತಂದು ತೋರಿಸಿದ್ದಾನೆ. ಅದನ್ನು ಕಂಡು ತೃಪ್ತಿಯಿಂದ ಅಸುನೀಗಿದ್ದಾನೆ-ದುರ್ಯೋಧನ!

ದ್ರೌಪದೀ ದುಃಖ ವ್ಯಕ್ತಪಡಿಸಿದ್ದಾಳೆ. ಅರ್ಜುನ ಅಶ್ವತ್ಥಾಮನನ್ನು ಹಿಂಬಾಲಿಸಿದ್ದಾನೆ. ಭೀಮನೂ ಓಡಿದ್ದಾನೆ. ಸ್ವರಕ್ಷಣೆಗೆಂದು, ಭೀತನಾದ ಅಶ್ವತ್ಥಾಮ ಬ್ರಹ್ಮಾಸ್ತ್ರ ಪ್ರಯೋಗಿಸಿದ್ದಾನೆ. ಪ್ರತಿಯಾಗಿ ಪಾರ್ಥನಿಂದ ಬ್ರಹ್ಮಾಸ್ತ್ರ. ವ್ಯಾಸರಿಂದ ಬ್ರಹ್ಮಾಸ್ತ್ರಗಳನ್ನು ಹಿಂದೆಗೆಯಲು ಆದೇಶ. ಅನೇಕ ಸತಿಯರ ಪತಿಯಾಗಿದ್ದರೂ ಬ್ರಹ್ಮಚಾರೀ ಪಾರ್ಥನಿಂದ ಬ್ರಹ್ಮಾಸ್ತ್ರ ಹಿಂದಕ್ಕೆ ಪಡೆಯಲಾಗಿದೆ. ಮದುವೆಯಾಗದ ಪ್ರತಿಜ್ಞಾ ಮಾತ್ರದಿಂದ ಬ್ರಹ್ಮಚರ್ಯ ಕಳೆದು ಕೊಂಡ ಅಶ್ವತ್ಥಾಮನಿಗೆ ಬ್ರಹ್ಮಾಸ್ತ್ರ ಹಿಂದೆ ಪಡೆಯಲು ಶಕ್ಯವಾಗಿಲ್ಲ. ನಾವೂ ಅಶ್ವತ್ಥಾಮನಂತೆ. ಭೌತಿಕ ವಿಷಯಗಳ ಮೇಲೆ ನಮ್ಮ ಇಂದ್ರಿಯಾಸ್ತ್ರಗಳನ್ನು ಬಿಡಲು ಗೊತ್ತಿದೆ. ಆದರೆ ಹಿಂದೆ ಪಡೆಯುವ ಶಕ್ತಿಯಿಲ್ಲ.

ಅಶ್ವತ್ಥಾಮನನ್ನು ಎಳೆದು ತಂದು ದ್ರೌಪದಿಯ ಮುಂದೆ ನಿಲ್ಲಿಸಿದ್ದಾರೆ. "ದ್ರೌಪದಿ! ನಿನ್ನೈವರು ಕುಮಾರರನ್ನು ಕೊಂದ ಈ ದುಷ್ಟನಿಗೆ ಯಾವ ಶಿಕ್ಷೆ ಕೊಡೋಣ? ಹೇಳು". ಭೀಮಾರ್ಜುನರು ಕೇಳಿದ್ದಾರೆ.

ದ್ರೌಪದಿಯು ಈ ಸಂದರ್ಭದಲ್ಲಿ ನಮ್ಮೆಲ್ಲರ ಊಹೆಗಳನ್ನು ಹುಸಿಗೊಳಿಸಿದ್ದಾಳೆ. **"ಮುಚ್ಯತಾಂ ಮುಚ್ಯತಾಮೇಷಃ"**-ಬಿಡಿರಿ, ಬಿಡಿರಿ

ಇವನನ್ನು "ಮಾ ರೋದೀದಸ್ಯ ಜನನೀ"–"ನನ್ನ ಮಕ್ಕಳನ್ನು ಕಳೆದುಕೊಂಡು ನಾನು ದುಃಖಪಡುತ್ತಿರುವುದೇ ಸಾಕು. ಇವನನ್ನು ಸಂಹರಿಸಿದರೆ ನನ್ನಂತೆಯೇ ಇವನ ತಾಯಿಗೂ ನೋವು ಉಂಟಾಗುವುದು. ಆಕೆ ನನ್ನಂತೆ ಪರಿತಪಿಸದಿರಲಿ".

ಈ ಕಲ್ಪನೆಯೂ ನಮ್ಮ ತಲೆಗೆ ಬರುವುದಿಲ್ಲ. ನಿಷ್ಕಾರಣವಾಗಿ ಮತ್ತೊಬ್ಬರಿಗೆ ದುಃಖ ಕೊಡುವ ನಾವೆಲ್ಲಿ? ತನಗೆ ದ್ರೋಹ ಬಗೆದಿದ್ದರೂ ಮತ್ತೊಬ್ಬರಿಗೆ ಕೇಡು ಬಯಸದ ದ್ರೌಪದಿಯೆಲ್ಲಿ? ನಾರೀಕುಲ ಶಿರೋಮಣಿ ಈ ದ್ರೌಪದಿಯು ನಮ್ಮ ಭಾರತೀಯ ನಾರೀಮಣಿಗಳ ಪರಂಪರೆಗೇ ಆದರ್ಶಳಾಗಿದ್ದಾಳೆ.

* * *

## 5. ಸಮುದ್ರಮಥನ – ಲಕ್ಷ್ಮೀ ಸ್ವಯಂವರ

ಇಂದ್ರನ ಅಹಂಕಾರಕ್ಕೆ ದೂರ್ವಾಸರ ಶಾಪ. ಬ್ರಹ್ಮನಲ್ಲಿ ಶರಣಾಗತಿ. ಸಮುದ್ರ ಮಥನದ ಆದೇಶ. ಅಮೃತ ಪ್ರಾಪ್ತಿಯ ಸಂದೇಶ. ಅಮೃತಕ್ಕಾಗಿ ದೈತ್ಯರೊಂದಿಗೆ ಸಂಧಾನ. ಮಂದರ ಪರ್ವತವೇ ಕಡಗೋಲು. ವಾಸುಕಿಯೇ ಪಾಶ. ಸಮುದ್ರದಲ್ಲಿ ಪರ್ವತ ಸ್ಥಾಪನೆ. ಪರ್ವತದ ಮುಳುಗಡೆ. ದೇವರಲ್ಲಿ ಮೊರೆ. ಕೂರ್ಮಾವತಾರಿಯ ಆಸರೆ. ಆರಂಭದಲ್ಲಿ ಹಾಲಾಹಲ. ಜನರಲ್ಲಿ ಕೋಲಾಹಲ. ಶಿವನಿಗೆ ಶರಣು. ಶ್ರೀಹರಿಯಿಂದ ವಾಯುವಿಗೆ ವಿಷಪಾನದ ಆದೇಶ, ವಾಯು ಶೇಷ ವಿಷಪಾನ ಶಿವನಿಂದ. ಅದರಿಂದ ಕಂಠದಲ್ಲಿ ನೀಲಶೇಷ. ಶಿವನಾದ ನೀಲಕಂಠ. ಇತರರಿಗೆ ವಿಷಕೊಟ್ಟು ಅಮೃತ ಕುಡಿಯುವ ನಾವೆಲ್ಲಿ? ಇತರರಿಗೆ ಅಮೃತ ದೊರೆಯಲು ವಿಷ ಕುಡಿದ ಶಿವನೆಲ್ಲಿ? ಮಥನ ಮುಂದುವರಿಕೆ. ಕೌಸ್ತುಭ, ಉಚ್ಚೈಶ್ರವಸ್ ಮುಂತಾದ ಅನರ್ಘ್ಯ ವಸ್ತುಗಳ ಲಾಭ. ಲಕ್ಷ್ಮೀ ಪ್ರಾದುರ್ಭಾವ. ಕೈಯಲ್ಲಿ ಮಾಲೆ. ದೈತ್ಯರ ಕೊರಳು ಮುಂದಕ್ಕೆ. ನಿರಪೇಕ್ಷ ಶ್ರೀಹರಿಯ ಕಂಠದಲ್ಲಿ ಮಾಲೆ. ಮಥನದ ಮುಂದುವರಿಕೆ. ಧನ್ವಂತರಿಯ ಆವಿರ್ಭಾವ. ಕರದಲ್ಲಿ ಅಮೃತಕಲಶ, ದೈತ್ಯರಿಂದ ಅಪಹಾರ. ಮೋಹಿನಿಯ ಅವತಾರ. ದೈತ್ಯರಿಗೆ ಮೋಹ. ಅಮೃತದ ಅಪಹಾರ. ದೇವತೆಗಳಿಗೆ ಅಮೃತ. ದೈತ್ಯರಿಗೆ ಶೂನ್ಯ. ಹಾವಿಗೆ ಹಾಲೆರೆದರೇನು? ವಿಷ ಹೆಚ್ಚು ಅಷ್ಟೆ.

ಶಾಸ್ತ್ರ ಸಮುದ್ರದ ಮಥನ. ಮನಸ್ಸು ಮಂದರ. ಪೂರ್ವಪಕ್ಷ-ಸಿದ್ಧಾಂತ. ದೈತ್ಯ-ದೇವತೆಗಳು. ಭ್ರಮೆಯ ಹಾಲಾಹಲ ಆದಿಯಲ್ಲಿ. ಕೌಸ್ತುಭಾದಿಗಳಂತೆ ಸ್ವರ್ಗಾದಿ ಪ್ರಾಪ್ತಿಯಾಗಬಹುದು. ಅಷ್ಟಕ್ಕೆ ತೃಪ್ತಿ ಪಡಬಾರದು. ಮಥನ ಮುಂದುವರಿಸಬೇಕು. ವಿದ್ಯೆ ಎಂಬ ಲಕ್ಷ್ಮೀ ಉದಯ ಅಪರೋಕ್ಷ ಜ್ಞಾನಾಮೃತ ಪ್ರಾಪ್ತಿ.

ಅಂತರಂಗ ಸಮುದ್ರದಲ್ಲಿ, ಜೀವನ ಸಮುದ್ರದಲ್ಲಿ ದೈವ-ಆಸುರೀ ಶಕ್ತಿಗಳ ಮಥನ ಆಗಬೇಕು- ಸ್ವರೂಪಾನಂದ ದೊರೆಯುವವರೆಗೆ. ಮೋಹಿನಿಗೆ ಬಲಿಯಾಗಿ ದೈತ್ಯರು ಅಮೃತ ಕಳೆದುಕೊಂಡಂತೆ ವಿಷಯ ವಾಸನೆಯೆಂಬ ಮೋಹಿನಿಗೆ ಬಲಿಯಾಗಿ ಮೋಕ್ಷ ಕಳೆದುಕೊಳ್ಳಬಾರದು.

ಸಮುದ್ರ ಮಥನದಂತೆ ಸಾಹಸ, ಪ್ರಯತ್ನಗಳಿಂದ ಜೀವನ ಸಾಗರ ಮಥನದಲ್ಲಿಯೂ ಸಂಪತ್ತು ಎಂಬ ಲಕ್ಷ್ಮೀ ಪ್ರಾಪ್ತಿಯಾಗುವುದು. ಲಕ್ಷ್ಮೀ ಆವಿರ್ಭಾವವಾದೊಡನೆ ದೈತ್ಯರು ಮುಂದೆ ಬಂದಂತೆ, ಕೈಗೆ ಸಂಪತ್ತು ಬಂದ ಕೂಡಲೆ ಕುಡಿತ, ಜೂಜು ಮುಂತಾದ ವ್ಯಸನಗಳು. ನಮ್ಮ ಸಂಪತ್ತನ್ನು ದೋಚಲು ಹೊಂಚು ಹಾಕಿ ಮುಂದೆ ಬರುತ್ತವೆ. ಆದರೆ ಸಂಪತ್ತನ್ನು ಶ್ರೀಮನ್ನಾರಾಯಣನಿಗಾಗಿ ಸದ್ವಿನಿಯೋಗಗೊಳಿಸಿದರೆ ಲಕ್ಷ್ಮೀಯನ್ನು ನಾರಾಯಣನಿಗೆ ಕೊಟ್ಟು ವಿವಾಹ ಮಾಡಿದ ಪುಣ್ಯ ನಮ್ಮದಾಗುವುದು.

* * *

## 6. ಕಪಿಲಾವತಾರ

ಸ್ವಾಯಂಭುವ ಮನು-ಶತರೂಪಾರ ಮಗಳು ದೇವಹೂತಿ, ಗಂಧರ್ವರೂ ಬಯಸಬಲ್ಲ ಚೆಲುವೆ- ದೇವಹೂತಿ. ಸೌಂದರ್ಯದ ಖನಿ. ಈ ಕನ್ಯಾಮಣಿ. ಕರ್ದಮರ ಬಳಿಗೆ ದೇವಹೂತಿಯನ್ನು ಮನು, ಶತರೂಪಾ ದಂಪತಿಗಳು ಕರೆದು ತಂದಿದ್ದಾರೆ. ಉತ್ತಮಶೀಲಸಂಪನ್ನನೂ, ಜ್ಞಾನಿಯೂ, ಸದ್ಗುಣ ಸಂಪನ್ನನೂ ಆದ ವರನ ಆಪೇಕ್ಷ-ದೇವಹೂತಿಗೆ. ಈಗಿನ ಕನ್ಯೆಯರಂತೆ ಉದ್ಯೋಗ, ಸಂಪತ್ತುಗಳನ್ನು ಆಕೆ ಬಯಸಲಿಲ್ಲ, ಆಕೆಯ ತಂದೆ ತಾಯಿಯರ ಸಂಪತ್ತು, ಅಂತಸ್ತುಗಳ ವ್ಯಾಮೋಹಕ್ಕೆ ಬಲಿಯಾಗಲಿಲ್ಲ. ಅರಮನೆಯ ಭೋಗ ಭಾಗ್ಯಗಳ ಸವಿಯುಂಡ ದೇವಹೂತಿ ತಪಸ್ವೀ

ಕರ್ದಮರ ಆಶ್ರಮಕ್ಕೆ ಬಂದಿದ್ದಾಳೆ. ಭಗವಂತನ ಸಂಕಲ್ಪ ಎಂದು ಕರ್ದಮರು ಆದರದಿಂದ ಸ್ವಾಗತಿಸಿದ್ದಾರೆ ದೇವಹೂತಿಯನ್ನು. ತೇಜಸ್ವಿನೀ ದೇವಹೂತಿ ತಪಸ್ವಿನಿಯಾಗಿ ಕರ್ದಮರ ಸೇವೆ ಮಾಡಿ ಯಶಸ್ವಿನೀ ಆಗಿದ್ದಾಳೆ. ಆರ್ಥಿಕವಾಗಿ ಬಡತನವಿದ್ದರೂ ಹಾರ್ದಿಕವಾಗಿ ಸಿರಿವಂತಿಕೆ ದೇವಹೂತಿ-ಕರ್ದಮರಲ್ಲಿದೆ. ಬಿಟ್ಟು ಬಂದ ಸಂಪತ್ತಿಗೆ ದೇವಹೂತಿ ಎಂದೂ ವ್ಯಥೆಪಟ್ಟಿಲ್ಲ. ಆಕೆಯ ಈ ವಿರಕ್ತಿ ಶ್ರದ್ಧೆಯ ಸೇವೆಗಳನ್ನು ಕಂಡು ಸಂತುಷ್ಟರಾದ ಕರ್ದಮರು-"ಏನು ಬೇಕಾದರೂ ಕೇಳು" ಎಂದರು ಒಮ್ಮೆ. ಇಲ್ಲಿಯವರೆಗೆ ಏನನ್ನೂ ಕೇಳದ ದೇವಹೂತಿ ಇಂದು ಪತಿರಾಯ ತಾನಾಗಿಯೇ ತನ್ನ ಬಯಕೆಗಳನ್ನು ಈಡೇರಿಸಲು ಬಂದಾಗ ಸಹಜ ಸುಖ ಸಂಪದಗಳನ್ನು ಬಯಸಿದಳು. ತಾಪಸ ಶಕ್ತಿಯಿಂದ ಕರ್ದಮರು ಎಲ್ಲವನ್ನು ಸೃಷ್ಟಿಗೈದಿದ್ದಾರೆ. ನೆರಳನ್ನು ಹಿಡಿಯಲು, ನಾವು ಎಷ್ಟೇ ವೇಗದಿಂದ ಧಾವಿಸಿದರೂ ಅದು ನಮ್ಮ ಕೈಗೆಟುಕದೆ ಆಯಾಸಪಡಿಸಿ ಮುಂದೆ ನಿಲ್ಲುತ್ತದೆ. ಅದನ್ನು ಹಿಡಿಯುವ ಸಾಹಸಬಿಟ್ಟು ಸೂರ್ಯನಿಗೆ ಅಭಿಮುಖವಾಗಿ ಓಡಿದಾಗ ಆ ನೆರಳು ತಾನಾಗಿಯೇ ನಮ್ಮ ಹಿಂದೆ ಓಡಿಬರುತ್ತದೆ. ಸಂಪತ್ತಿಗೆ ಬೆನ್ನು ಹಾಕಿ ಹೋದಾಗ ಅದು ತಾನಾಗಿಯೇ ನಮ್ಮ ಹಿಂದೆ ಬರುತ್ತದೆ. ಸಂಪತ್ತಿನ ಹಿಂದೆ ಓಡದೆ ಕರ್ದಮರೆಡೆಗೆ ಓಡಿ ಬಂದ ದೇವಹೂತಿಯ ಬೆನ್ನ ಹಿಂದೆ ಇಂದು ಸಂಪತ್ತು ತಾನಾಗಿ ಧಾವಿಸಿ ಬಂದಿದೆ.

ಈರ್ವರೂ ಸಂತಸದಿಂದ ವಿಹರಿಸಿದ್ದಾರೆ. ದೇವಹೂತಿ ಗರ್ಭಿಣಿಯಾಗಿ ಸೌಂದರ್ಯ ಇಮ್ಮಡಿಯಾಗಿದೆ, ಭಗವಂತನ ಸಂಕಲ್ಪ ನೆರವೇರಿದೆ. ಕರ್ದಮರು ಭೋಗವನ್ನು ಬಿಟ್ಟು ತ್ಯಾಗದೆಡೆಗೆ ಹೊರಟು ನಿಂತಿದ್ದಾರೆ.

"ಸ್ವಾಮಿನ್! ತತ್ವಜ್ಞಾನಿಗಳಾದ ತಮ್ಮಲ್ಲಿ ದಾಂಪತ್ಯವನ್ನು ಬೇಡಿದೆ ಆದರೆ ತತ್ವವನ್ನು ಕೇಳಲಿಲ್ಲ, ನೀವು ಹೀಗೆ ಹೋದರೆ ನನಗೆ ತತ್ವಜ್ಞಾನ ದೊರಕುವುದು ಹೇಗೆ? ನನ್ನ ಗತಿ?"

"ಸಾಕ್ಷಾತ್ ಶ್ರೀಹರಿಯೇ ನಿನ್ನಲ್ಲಿ ಅವತಾರ ಮಾಡುತ್ತಿದ್ದಾನೆ. ನಿನಗೆ ಬೇಕಾದುದೆಲ್ಲವನ್ನು ಆ ಭಗವಂತನಲ್ಲಿಯೇ ಕೇಳು, ಕೊಡುತ್ತಾನೆ." ಕರ್ದಮರು ಹೊರಟಿದ್ದಾರೆ.

ಪ್ರಾಪಂಚಿಕವಾದ ನಶ್ವರ ಐಶ್ವರ್ಯವನ್ನು ತ್ಯಾಗ ಮಾಡಿದ ದೇವಹೂತಿಗೆ ಷಡ್ಗುಣೈಶ್ವರ್ಯ ಸಂಪನ್ನನಾದ ಲಕ್ಷ್ಮೀಪತಿಯು ಕೈಕೂಸಾಗಿ ದೊರೆತಿದ್ದಾನೆ.

ಕಪಿಲರೂಪೀ ಪರಮಾತ್ಮನ ಅವತಾರ. ತತ್ತ್ವೋಪದೇಶ-ದೇವಹೂತಿಗೆ ಸಜ್ಜನೆತೆಗೆಲ್ಲ ಸಂತಸ.

ವೈರಾಗ್ಯಮೂರ್ತಿ ದೇವಹೂತಿ, ಭಕ್ತಿಮೂರ್ತಿ ಕರ್ದಮ. ಇವರೀರ್ವರ ಸಂಗಮದಿಂದ ಭಗವಂತನ ಅವತಾರ. ನಮ್ಮಲ್ಲಿಯ ಭಗವಂತನ ಅವತಾರವಾಗಲು ಈ ಭಕ್ತಿ ವೈರಾಗ್ಯಗಳ ಸಂಗಮವಾಗಿರಬೇಕು. **'ಗರ್ಭ ಇವ ಸುಭೃತೋ ಗರ್ಭಿಣೀಭಿಃ'** ಉದರದಲ್ಲಿಯ ಗರ್ಭವನ್ನು ತಾಯಂದಿರು ಜಾಗರೂಕವಾಗಿ ಸಂರಕ್ಷಿಸುವಂತೆ ನಾವೂ ಶಿಸ್ತಿನಿಂದಿದ್ದರೆ ಮಾತ್ರ ಭಗವಂತನು ಸ್ಥಿರವಾಗಿ ನಿಲ್ಲುತ್ತಾನೆ.

* * *

## 7. ಶ್ರೀಕೃಷ್ಣಾವತಾರ

ನಾರದರು ನೀಡಿದ ಮೃತ್ಯುಸೂಚನೆಯಿಂದ ಬೆದರಿದ ಕಂಸ ವಸುದೇವ ದೇವಕಿಯರನ್ನು ಕಾರಾಗೃಹದಲ್ಲಿ ಬಂಧಿಸಿದ. ಕಂಸಾರಿಯಾದ ಭಗವಾನ್ ಶ್ರೀಕೃಷ್ಣ ಅಲ್ಲಿಯೇ ಅವತರಿಸಿದ. ಮುಂದೆ ಕಂಸನನ್ನು ಸಂಹರಿಸಿ ಶ್ರೀಕೃಷ್ಣನು ವಸುದೇವ-ದೇವಕಿಯರನ್ನು ಬಿಡುಗಡೆಗೊಳಿಸಿದ.

ನಮ್ಮಲ್ಲಿಯೂ "ಜೀವ-ಬುದ್ಧಿ" ಎಂಬ ವಸುದೇವ-ದೇವಕಿಯರಿಗೆ ಆಸುರ ಶಕ್ತಿಗಳಿಂದ ಹೃದಯವೆಂಬ ಕಾರಾಗೃಹದಲ್ಲಿ ಬಂಧನವಾಗಿದೆ. ಅದರ ವಿಮೋಚನೆಗೆ ನಮ್ಮ ಹೃದಯ ಕಾರಾಗೃಹದಲ್ಲಿ ಶ್ರೀಕೃಷ್ಣನ ಅವತಾರ ಬೇಕು. ನಮ್ಮ ಪ್ರತಿ ಮನೆಯಲ್ಲಿಯೂ ಕಂಸಾದಿಗಳಿದ್ದಾರೆ. ಅವರ ಸಂಹಾರವಾಗಿ "ಜೀವ-ಬುದ್ಧಿ"ಗಳ ಬಿಡುಗಡೆಯಾಗಬೇಕಿದೆ- ಅಸುರ ಶಕ್ತಿಗಳ ಹಿಡಿತದಿಂದ.

* * *

## 8. ಗುಣತ್ರಯ ಮತ್ತು ರೈಲುಗಾಡಿ

ಭಗವಂತನು ಈ ವಿಶ್ವವನ್ನು ಸೃಷ್ಟಿಸುವಲ್ಲಿ ಗುಣತ್ರಯವನ್ನು ಬಳಸಿಕೊಳ್ಳುತ್ತಾನೆ. ಸತ್ವ, ರಜಸ್, ತಮಸ್-ಇವೇ ಆ ಮೂರು ಗುಣಗಳು, ಈ ದೇಹ ತಮೋಗುಣದ ಕಾರ್ಯ. ಇಂದ್ರಿಯಗಳ ವ್ಯಾಪಾರಗಳು ರಜೋಗುಣದ ಕಾರ್ಯ, ಅರಿವು-ಜ್ಞಾನಶಕ್ತಿ, ಸತ್ವಗುಣದ ಕಾರ್ಯ.

ತಮೋಗುಣ ರೈಲ್ವೆ ಬೋಗಿ ಇದ್ದಂತೆ. ಆ ರೈಲ್ವೆ ಬೋಗಿಗೆ ಸ್ವತಃ ಚಲನೆಯಿಲ್ಲ. ನಮ್ಮ ದೇಹ ಆ ಬೋಗಿಯಂತೆ. ಬೋಗಿಯ ಚಕ್ರಗಳಂತೆ ರಜೋಗುಣ. ರಜೋಗುಣದಿಂದ, ಇಂದ್ರಿಯ ಚಲನ. ಚಕ್ರ ತಿರುಗಿದರೆ ಬೋಗಿಯ ಚಲನೆ. ಇಂಜಿನ್‌ನಂತೆ ಸತ್ವಗುಣ, ಮುಂದಕ್ಕೆ ಹೋಗಲು ಇಂಜಿನ್ ಬೇಕು. ಜೀವನದಲ್ಲಿ ಪ್ರಗತಿ ಸಾಧಿಸಲು ಜ್ಞಾನ-ಅನುಭವ ಮುಖ್ಯ. ಅದು ಸತ್ವಗುಣದ ಕಾರ್ಯ. ಇದು ವಿದ್ಯುತ್‌ರೈಲು, ವಿದ್ಯುತ್ ನಿಂತರೆ ರೈಲು ಸ್ತಬ್ಧ, ಭಗವಂತನು ವಿದ್ಯುತ್ತಿನಂತೆ, ಭಗವಂತನು ತನ್ನ ಶಕ್ತಿಯನ್ನು ಹಿಂತೆಗೆದುಕೊಂಡರೆ ನಾವು ಸ್ತಬ್ಧ.

* * *

## 9. ಜ್ಞಾನ-ಭಕ್ತಿ-ವೈರಾಗ್ಯವನ್ನು ತೋರಿದ ಪ್ರಹ್ಲಾದರಾಜರು

ಜ್ಞಾನಸಂಪತ್ತನ್ನು ನೀಡಿ ಅನುಗ್ರಹಿಸುವ ನಮ್ಮ ಶ್ರೀವ್ಯಾಸರಾಜರು ಭಕ್ತಿ-ಜ್ಞಾನ-ವೈರಾಗ್ಯ ಮಾರ್ಗವನ್ನು ತಮ್ಮ ಅವತಾರಗಳಲ್ಲಿ ತೋರಿಸಿಕೊಟ್ಟಿದ್ದಾರೆ.

ಪ್ರಹ್ಲಾದನಾಗಿ ಭಕ್ತಿ. 'ಬೇಕಾದ ವರ ಕೊಡುತ್ತೇನೆ' ಎಂದು ಪರಮಾತ್ಮನು ಕೇಳಿದರೆ, 'ನಿನ್ನ ಜೊತೆ ವ್ಯಾಪಾರ ಮಾಡುವುದಿಲ್ಲ; ನಾನು ಯಾವ ವರವನ್ನೂ ಬೇಡುವುದಿಲ್ಲ; ನಿನ್ನ ಅನುಗ್ರಹ ಬೇಕು; ನಿನ್ನಲ್ಲಿ ಭಕ್ತಿ ಬೇಕು'- ಹೀಗೆ ಪ್ರಹ್ಲಾದರಾಜರು ಭಕ್ತಿಯನ್ನು ಮಾತ್ರ ಬೇಡಿದವರು.

ಇನ್ನು ಶ್ರೀವ್ಯಾಸರಾಜರಾಗಿ ವ್ಯಾಸತ್ರಯಾದಿ ಗ್ರಂಥಗಳನ್ನು ರಚಿಸಿ, ಜ್ಞಾನವನ್ನು ಕೊಟ್ಟಿದ್ದಾರೆ. ತರ್ಕತಾಂಡವ, ನ್ಯಾಯಾಮೃತ, ಚಂದ್ರಿಕಾ ಎಂಬ ಅವರ ವ್ಯಾಸತ್ರಯವು ನಮಗೆ ಆಯುಧವಿದ್ದಂತೆ. ಎಲ್ಲ ನಮ್ಮ ಸಂದೇಹಗಳು ಪರಿಹಾರವಾಗುತ್ತವೆ.

ಇನ್ನು ರಾಘವೇಂದ್ರಸ್ವಾಮಿಗಳಾಗಿ ವೈರಾಗ್ಯವನ್ನು ಎತ್ತಿ ತೋರಿಸಿದ್ದಾರೆ. ಅವರು ಪೂರ್ವಾಶ್ರಮದಲ್ಲಿ ಅಪೇಕ್ಷೆ ಪಟ್ಟಿದ್ದನ್ನು ಪಡೆಯಬಹುದಾದ ಪಾಂಡಿತ್ಯ, ತಪಃಶಕ್ತಿ ಎಲ್ಲ ಇದ್ದವು. ಅವರು ಕೇಳಿದ್ದರೆ, ಯಾರೂ 'ಇಲ್ಲ' ಎನ್ನುತ್ತಿರಲಿಲ್ಲ. ಆದರೂ ಯಾರನ್ನೂ ಕೇಳಲಿಲ್ಲ. ಅತ್ಯಂತ ಬಡತನದ ಜೀವನವನ್ನು ನಡೆಸಿದವರು ಶ್ರೀರಾಘವೇಂದ್ರಸ್ವಾಮಿಗಳು. ಅತ್ಯಂತ

ವಿರಕ್ತಜೀವನ ನಡೆಸಿದವರು. ಇಂದು ಅವರ ಹೆಸರನ್ನು ಹೇಳಿಕೊಂಡು ತೀರ್ಥಪ್ರಸಾದ ಸ್ವೀಕಾರ ಮಾಡುತ್ತಿದ್ದಾರೆ.

ಜ್ಞಾನ-ಭಕ್ತಿ-ವೈರಾಗ್ಯಗಳು ಈ ಮೂರೂ ಅವತಾರದಲ್ಲಿ ಉಂಟು; ಅದರೂ ಒಂದೊಂದು ಅವತಾರದಲ್ಲಿ ಒಂದೊಂದರ ಮಹಿಮೆಯನ್ನು ತೋರಿಸಿಕೊಟ್ಟಿರುವರು. ಇದು ಭಾಗವತದಲ್ಲಿ ಬಂದ ಭಾಗವತರ ಮಹಿಮೆ. ಭಗವದ್ಭಕ್ತರ ಮಹಿಮೆ.

ಭಾಗವತದ ಅಧ್ಯಯನವು ಈ ಮೂರನ್ನು ನಮಗೆ ಕೊಡುತ್ತದೆ.

* * * *

# ಹರಿವಂಶ ಸಂದೇಶ



ಪದ್ಮ-ಶಂಖ-ಚಕ್ರ-ಗದಾಧಾರಿಯಾದ 'ಪದ್ಮಿನೀ'ಪತಿ 'ವಿಷ್ಣು'



## ಊರೂರಲ್ಲಿ ರಾಮ-ಕೃಷ್ಣರು

ಹಿಂದಿನ ಕಾಲದಲ್ಲಿ ರಾವಣನಂಥ ದುಷ್ಟಮನುಷ್ಯ ಒಬ್ಬನೇ ಇದ್ದ. ರಾಮನು ಅವತಾರ ಮಾಡಿ ಅವನನ್ನು ಸಂಹಾರ ಮಾಡಿದ. ಆದರೆ ಇಂದು ಪರಸ್ತ್ರೀ-ಅಪಹಾರ, ಸಜ್ಜನ ದ್ರೋಹ, ಕಪಟ, ಸ್ವಾರ್ಥ, ಹಿಂಸಾ ಮುಂತಾದ ದುರ್ಗುಣಗಳಿಂದ ತುಂಬಿದ ದುಷ್ಟ ರಾವಣರು ಊರೂರಿಗೆ ತಲೆಯೆತ್ತುತ್ತಿದ್ದಾರೆ. ಅವರ ನಿಗ್ರಹಕ್ಕಾಗಿಯೇ ಊರೂರಿಗೆ ರಾಮ-ಕೃಷ್ಣರ ಮೂರ್ತಿಗಳನ್ನು ನಮ್ಮ ಹಿರಿಯರು ಸ್ಥಾಪಿಸಿ, ಗುಡಿಗಳನ್ನು ಕಟ್ಟಿ ಆ ದಿವ್ಯ ಶಕ್ತಿಯನ್ನು ಆವಾಹನೆ ಮಾಡಿದ್ದಾರೆ.

**- ಶ್ರೀ ವಿಶ್ವೇಶತೀರ್ಥಶ್ರೀಪಾದರು**

## 1. ಶ್ರೀಕೃಷ್ಣ – ಜರಾಸಂಧರ ಹೋರಾಟ

ಶ್ರೀಕೃಷ್ಣನನ್ನು ಮುಗಿಸಬೇಕೆಂದು ಜರಾಸಂಧನ ಸಂಚು. ಆಕ್ರಮಣಕ್ಕೆ ಬಂದಾಗಲೆಲ್ಲ ಶ್ರೀಕೃಷ್ಣನಿಂದ ಪರಾಭವ. ಪ್ರತಿಬಾರಿಯೂ ದುಷ್ಟ ಸೈನಿಕರ ಸಂಗ್ರಹ. ಕೃಷ್ಣನಿಂದ ಪರಾಜಯ. ಜರಾಸಂಧನ ಪಲಾಯನ. ಪುನರಾಗಮನ. ಪುನಃ ಸುದರ್ಶನದಿಂದ ಪರಿಹಾರ. ಭೂಭಾರಹರಣಾರ್ಥವಾಗಿ ಅವತರಿಸಿದ ಶ್ರೀಕೃಷ್ಣನಿಗೆ, ಇದ್ದಲ್ಲಿಯೇ ಜರಾಸಂಧನಿಂದ ದುಷ್ಟರ ಸಂಗ್ರಹ. ಶ್ರೀಕೃಷ್ಣನಿಂದ ಸಂಹಾರ. ಜರಾಸಂಧನ ಸಹಕಾರ! ಭೀಮನಿಂದಲೇ ಜರಾಸಂಧನ ಸಂಹಾರ–ಶ್ರೀಕೃಷ್ಣನ ಸಂಕಲ್ಪ.

ಜರಾಸಂಧನಿಗೆ ಇಬ್ಬರು ಪುತ್ರಿಯರು–ಅಸ್ತಿ, ಪ್ರಾಸ್ತಿ. ನಮ್ಮಲ್ಲಿಯೂ ಇದ್ದಾರೆ–ಈ ಜರಾಸಂಧ, ಅಸ್ತಿ, ಪ್ರಾಸ್ತಿ, ಅಸ್ತಿ–ಸಂಶಯ–ದೇವರಿದ್ದಾನೆಯೋ ಇಲ್ಲವೋ? ಪ್ರಾಸ್ತಿ–ವಿಪರೀತ ಜ್ಞಾನ–ದೇವರಿಲ್ಲವೇ ಇಲ್ಲ. ಜರಾಸಂಧ–ದುಷ್ಟದರ್ಶನನಿಷ್ಠೆ, ಜರಾ–ಆಯುಷ್ಯ ಹರಣದಲ್ಲೇ ಸಾರ್ಥಕವಾದ ಕೆಟ್ಟ ಶಾಸ್ತ್ರಗಳು. ಅದರಲ್ಲಿ ಸಂಧ–ಆಗ್ರಹ. ಅಸ್ತಿ, ಪ್ರಾಸ್ತಿಗಳ–ಗಂಡ–ಕಂಸ. ಸಂಶಯ, ವಿಪರೀತ ಜ್ಞಾನಗಳ ಗಂಡ–ಕಂಸ–ಅಧರ್ಮ, ಶ್ರೀಕೃಷ್ಣನಿಂದ–ಧರ್ಮದಿಂದ ಕಂಸನ–ಅಧರ್ಮದ ಸಂಹಾರ. ಶ್ರೀಕೃಷ್ಣ ಕಂಸನನ್ನು ಸಂಹಾರ ಮಾಡಿದರೆ ಜರಾಸಂಧನಿಗೆ ಅತಂಕ–ತನ್ನ ಭದ್ರಕೋಟೆ ಛಿದ್ರವಾಯಿತಲ್ಲ! ಅಧರ್ಮವು ಧರ್ಮದಿಂದ ನಾಶವಾದರೆ ಆ ಧರ್ಮವನ್ನು ನಾಶಪಡಿಸಲು ದುಷ್ಟದರ್ಶನಗಳಲ್ಲಿನ ದುರಾಗ್ರಹದ ಹವಣಿಕೆ.

ಶ್ರೀಕೃಷ್ಣನ ಸುದರ್ಶನದಿಂದ ಜರಾಸಂಧನ ಪರಿಹಾರ. ಶ್ರೀಕೃಷ್ಣನಿಂದ ಆಜ್ಞಪ್ತರಾದ ಆಚಾರ್ಯ ಮಧ್ವರ ಸುದರ್ಶನದಿಂದ ಶೋಭನ ಶಾಸ್ತ್ರಗಳಿಂದ ದುಷ್ಟದರ್ಶನಗಳ, ಅದರಲ್ಲಿ ನಮಗಿರುವ ದುರಾಗ್ರಹದ ನಾಶ. ಸಂಶಯ, ವಿಪರೀತ ಜ್ಞಾನಗಳ ಪರಿಹಾರ. ಶ್ರೀಕೃಷ್ಣ–ಜರಾಸಂಧರ ಹೋರಾಟ ಜ್ಞಾನಗಳ ಹೋರಾಟ, ಶ್ರೀಕೃಷ್ಣನಿಗೆ ಜಯ, ತತ್ವಜ್ಞಾನಕ್ಕೆ ಜಯ.

ದುಷ್ಟರು ರಾಕ್ಷಸರಾಗಿ ಬಂದಾಗ ಹನುಮಂತನಾಗಿ ಅವರ ಸಂಹಾರ. ಶ್ರೀರಾಮನ ಭೂಭಾರಹರಣ ಕಾರ್ಯದಲ್ಲಿ ಸಹಕಾರ. ಅದೇ ರಾಕ್ಷಸರು ಕ್ಷತ್ರಿಯ ರಾಜರಾಗಿ ಬಂದು ಸಜ್ಜನರಿಗೆ ತೊಂದರೆ ಕೊಟ್ಟಾಗ ತಾನೂ ಕ್ಷತ್ರಿಯನಾಗಿ–ಭೀಮನಾಗಿ ಆ ದುರುಳರ ಸಂಹಾರ, ಶ್ರೀಕೃಷ್ಣನಿಗೆ ಸಹಕಾರ.

ಆ ದುಷ್ಟರು ಕಲಿಯುಗದಲ್ಲಿ ಸಂಶಯ, ವಿಪರೀತಜ್ಞಾನಗಳ ರೂಪವಾಗಿ ಸಜ್ಜನರ ಮನವನ್ನು ಪ್ರವೇಶಿಸಿದರೆ ಆಚಾರ್ಯ ಮಧ್ವರಾಗಿ ಅವತರಿಸಿ ಪ್ರಮಾಣಗಳೆಂಬ ಅಸ್ತ್ರಗಳನ್ನು ಪ್ರಯೋಗಿಸಿ ತತ್ವಜ್ಞಾನ ನೀಡುವ ಸಚ್ಛಾಸ್ತ್ರಗಳ ಮೂಲಕ ಸಂಶಯ ವಿಪರೀತ ಜ್ಞಾನಗಳ ಪರಿಹಾರ. ವೇದವ್ಯಾಸರಿಗೆ ಸಹಕಾರ. ಭಗವಂತನ ಆಜ್ಞಾನುಸಾರವಾಗಿ ಅವತರಿಸಿ ದುಷ್ಟರ ಸಂಹಾರದ ಮೂಲಕ ಭಗವಂತನ ಆರಾಧನೆ.

* * *

## 2. ಗೋವರ್ಧನೋದ್ಧರಣ

ಅಂದು ನಂದಗೋಕುಲದಲ್ಲಿ ಎಲ್ಲೆಡೆ ಸಂಭ್ರಮ; ಸಡಗರ. ಅದಾವುದೋ ಉತ್ಸವದ ಸಿದ್ಧತೆಗಳು. ಸರ್ವಜ್ಞನಾದ ಶ್ರೀಕೃಷ್ಣ ಒಬ್ಬ ವೃದ್ಧ ಗೋಪನಲ್ಲಿ ವಿಚಾರಿಸಿದ "ಏನಿದು ಈ ಸಂಭ್ರಮ!" "ಇದು ನಮ್ಮೂರಿನ ವಾರ್ಷಿಕ ಮಹೋತ್ಸವ. ಪ್ರತಿವರ್ಷವೂ ಮಳೆಗಾಲದಲ್ಲಿ ಇಂದ್ರಯಜ್ಞವನ್ನು ನಾವೆಲ್ಲ ಸೇರಿ ವಿಜೃಂಭಣೆಯಿಂದ ನಡೆಸುತ್ತೇವೆ. ದೇವತೆಗಳಿಗೊಡೆಯನಾದ ಇಂದ್ರನಿಂದಲೇ ಗೋಕುಲದ ಗೋವುಗಳು, ಗೋಪಾಲಕರು, ಕಾಡುಮೇಡುಗಳು ಸಮೃದ್ಧವಾಗುವುವು. ಮಳೆಗರೆದು ಸಂತಸ ನೀಡುವ, ಸಂಪದ ನೀಡುವ, ಆ ಇಂದ್ರನೇ ನಮ್ಮ ದೈವ. ಅವನನ್ನು ಕುರಿತು ಮಾಡುವ ಆರಾಧನೆಯೇ ಈ ಉತ್ಸವ" ಗೋಪ ವಿವರಿಸಿದ.

"ಪ್ರೀತಿಯ ಗೋಪಾಲಕರೆ! ನಾವೆಲ್ಲ ಗೋ ಪಾಲನೆ ಮಾಡುವವರು. ನಮ್ಮ ಗೋವುಗಳೇ ದೈವತವು. ಗೋವುಗಳು ಈ ಪರ್ವತದಲ್ಲಿ ಮೇಯುತ್ತವೆ. ಈ ಪರ್ವತಗಳಿಂದ ನೀರು ಹರಿದು ಬರುತ್ತದೆ. ಇದರಿಂದ ಸಸ್ಯ ಸಮೃದ್ಧಿ. ಆದುದರಿಂದ ಈ ಗಿರಿಯನ್ನೇ ನಾವು ಪೂಜಿಸೋಣ. ಇಂದ್ರನ ಪೂಜೆ ಬೇಡ. ಆ ಗಿರಿಯ ಅಂತರ್ಯಾಮಿಯಾದ ನಾನೇ ನಿಮ್ಮೆಲ್ಲರ ದೇವ. ನಿಮ್ಮೆಲ್ಲ ಕಷ್ಟ ಕಾರ್ಪಣ್ಯಗಳನ್ನು ಪರಿಹರಿಸಿದವನು, ಪರಿಹರಿಸುವವನು ನಾನೇ" ಎಂದು ಶ್ರೀಕೃಷ್ಣ ಗೋಪರಿಗೆ ತಿಳಿಹೇಳಿದನು.

ಕೃಷ್ಣನಿಂದ ಹೆಜ್ಜೆ ಹೆಜ್ಜೆಗೆ ಉಪಕೃತರಾದ ಆ ಗೋಪಾಲಕರು ಕೃಷ್ಣನ ಮಾತಿಗೆ ಒಪ್ಪಿಗೆಯಿತ್ತರು. ಇಂದ್ರಯಜ್ಞವನ್ನು ಬಿಟ್ಟು ಗಿರಿಯಜ್ಞವನ್ನು

ಆರಂಭಿಸಿದರು. ಎಲ್ಲ ಗೋವುಗಳು ಹಾಲುಗರೆದವು. ಹಾಲು, ಬೆಣ್ಣೆ, ಪಾನಾದಿಗಳಿಂದ ಎಲ್ಲ ಗೋಪರೂ ಆನಂದದಿಂದ ಆರಾಧಿಸಿದರು. ಶ್ರೀಕೃಷ್ಣನೇ ಬೃಹದಾಕಾರವನ್ನು ತಳೆದು, ಪರ್ವತದ ಅಂತರ್ಯಾಮಿಯಾಗಿ ನಿಮಗೆಲ್ಲ ಸೌಖ್ಯವನ್ನುಂಟು ಮಾಡುವವನು ತಾನೇ ಎಂದು ತಿಳಿಸುತ್ತ ಭಕ್ತಿಯ ಪೂಜೆಯನ್ನು ಸ್ವೀಕರಿಸಿದನು. ಎಲ್ಲ ಗೋಪಾಲಕರಿಗೆ ಸಂತಸವೋ ಸಂತಸ.

ಬಾಲಗೋಪಾಲನನ್ನು ಕಂಡು ಚಕ್ರಧಾರಿಯ ಅವತಾರವೇ ಇವನೆಂಬುದನ್ನು ಮರೆತು ಕುಪಿತನಾದ ಇಂದ್ರನು ಮೋಡಗಳಿಗೆ ಆಜ್ಞೆ ಮಾಡಿ ಸಪ್ತರಾತ್ರಗಳ ನಿರಂತರವಾಗಿ ಧಾರಾಕಾರವಾದ ಮಳೆ ಸುರಿಸಿದನು. ಎಲ್ಲೆಲ್ಲಿಯೂ ನೀರು! ಜಲ ಪ್ರಳಯ! ಗೋವುಗಳು, ಗೋಪಾಲಕರು ಹೆದರಿ ಕಂಗೆಟ್ಟವು, ಆದರೆ ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ತನ್ನ ಕಿರುಬೆರಳಿನಿಂದ ಹಿಡಿದೆತ್ತಿದ್ದ. ಆ ಪರ್ವತದ ಕೆಳಗೆ ಎಲ್ಲರೂ ವಿಶ್ರಾಂತಿ ಪಡೆದರು. ಶ್ರೀಕೃಷ್ಣನ ಅಚಿಂತ್ಯಶಕ್ತಿಯನ್ನು ಕಂಡು ಬೆಕ್ಕಸಬೆರಗಾದರು. ತನ್ನ ಪ್ರಯತ್ನ ವಿಫಲವಾದ ಬಳಿಕ ಇಂದ್ರನು ಬಂದು ಭಗವಂತನ ಪರಾಕ್ರಮವನ್ನು ಬಣ್ಣಿಸಿ ಶಿರಬಾಗಿದನು. ನಮಗೂ ಯಾರನ್ನು ಪೂಜಿಸಬೇಕೆಂದು ತಿಳಿದಿಲ್ಲ. ದೇವರನ್ನು ಬಿಟ್ಟು ಇನ್ನಾರೋ ನಮ್ಮ ರಕ್ಷಕರೆಂದು ಭ್ರಮಿಸಿ ಆರಾಧಿಸುತ್ತೇವೆ. ಅದು ತಪ್ಪು. ಶ್ರೀಕೃಷ್ಣನು ತಿಳಿಸಿರುವಂತೆ ಸರ್ವಾಂತರ್ಯಾಮಿಯಾದ ಶ್ರೀಕೃಷ್ಣನನ್ನೇ ಪೂಜಿಸಬೇಕು. ಆಗ ಭಗವಂತ, ಗೋವರ್ಧನ ಪರ್ವತವನ್ನೆತ್ತಿ ರಕ್ಷಿಸುತ್ತಾನೆ. ಆ ಗೋವರ್ಧನ ಪರ್ವತದ ಬುಡದಲ್ಲಿ ನಿಂತು ಆ ಗೋವುಗಳು, ಗೋಪಾಲಕರು ವಿಶ್ರಾಂತಿ ಪಡೆದರು. ಭಯವನ್ನು ನೀಗಿಕೊಂಡರು. ಅಂತೆಯೇ ಆಚಾರ್ಯರ ಶಾಸ್ತ್ರ ಎಂಬ ಗೋವರ್ಧನ ಪರ್ವತದ ಅಡಿಯಲ್ಲಿ ನಾವು ನಿಲ್ಲಬೇಕು. ಆಗ ನೆಮ್ಮದಿ ಸಿಗಲು ಸಾಧ್ಯ. ಅದಕ್ಕಾಗಿ ಶ್ರೀಕೃಷ್ಣನಲ್ಲಿ ಮೊರೆ ಹೊಂದೋಣ.

* * *

## 3. ಶ್ರೀ ಕೃಷ್ಣನು ಮಧುರೆಗೆ ಬಂದನು

ಕಂಸನ ಅಣತಿಯಂತೆ ಅಕ್ರೂರ ಶ್ರೀಕೃಷ್ಣ ಬಲರಾಮರನ್ನು ಕರೆತರಲು ಹೋಗಿದ್ದಾನೆ. ಕಂಸನ ಆಹ್ವಾನದ ಹಿನ್ನೆಲೆ ಅಕ್ರೂರನಿಗೆ ಗೊತ್ತಿದೆ. ಕೃಷನಿಗೆ ಕೂಡ ಗೊತ್ತಿದೆ. ಈ ನೆಪದಲ್ಲಿಯಾದರೂ ಶ್ರೀಕೃಷ್ಣನನ್ನು ಸಮೀಪಿಸುವ ಭಾಗ್ಯ

ದೊರೆತುದಕ್ಕೆ ಅಕ್ರೂರ, 'ಧನ್ಯ' ಎಂದು ಭಾವಿಸಿದ್ದಾನೆ. ರಥದಲ್ಲಿ ಶ್ರೀಕೃಷ್ಣ, ಯಮುನಾ ನದಿಯ ಒಳಗೆ ಶ್ರೀಕೃಷ್ಣ, ಮಾರ್ಗಮಧ್ಯೆ ಕಂಡ ಈ ದೃಶ್ಯ ಅಕ್ರೂರನನ್ನು ರೋಮಾಂಚಗೊಳಿಸಿದೆ. ಕೃಷ್ಣನು ಒಲಿಯಲು ನಾವೂ ಅಕ್ರೂರರಾಗಬೇಕು. ನಮ್ಮಲ್ಲಿರುವ ಕ್ರೌರ್ಯ ಹೋಗಬೇಕು. ಆಗ ಹೊರಗೆ ಒಳಗೆ ಕೃಷ್ಣನನ್ನು ನೋಡಲು ಸಾಧ್ಯ. ಕೃಷ್ಣನನ್ನು ನೋಡಬೇಕೆಂಬ ಆಸೆಯಿದ್ದರೂ ಹೋಗಿ ನೋಡುವ ಧೈರ್ಯ ಈವರೆಗೆ ಮಧುರೆಯ ಮಂದಿಗೆ ಇರಲಿಲ್ಲ. ಮಧುರೆಗೇ ಶ್ರೀಕೃಷ್ಣ ಬಂದಾಗ ಎಲ್ಲರೂ ನಿರ್ಭಯವಾಗಿ ಸಂತಸದಿಂದ ನೋಡಿದರು.

ಕಂಸನೆಡೆಗೆ ಹೋಗುವಾಗ ದಾರಿಯಲ್ಲಿ ಕಂಸನ ವಸ್ತ್ರಗಳನ್ನು ಮಡಿಮಾಡುವ ಮಡಿವಾಳ ಸಿಕ್ಕಿದ. ಕೃಷ್ಣನು ಬಟ್ಟೆ ಕೇಳಿದಾಗ ಹಗುರವಾಗಿ ಮಾತನಾಡಿದನು. ಅವನು ಬಟ್ಟೆಗಳನ್ನು ಮಡಿ ಮಾಡುತ್ತಿದ್ದಾನೆ ಹೊರತು ಮನಸ್ಸನ್ನು ಮಡಿ ಮಾಡಿರಲಿಲ್ಲ. ನಾವೂ ಅ ಮಡಿವಾಳನಂತೆ. ನಮಗೆ ಬಟ್ಟೆ ಮಡಿಮಾಡಲು ಗೊತ್ತಿದೆ. ಮನ ಮಡಿಮಾಡಲು ಗೊತ್ತಿಲ್ಲ. ಆದ್ದರಿಂದಲೇ ಸಮರ್ಪಣ ಭಾವ ನಮ್ಮಲ್ಲಿಲ್ಲ. ಮುಂದೆ ತ್ರಿವಕ್ರೆ ಎದುರಾದಳು. ಬಿಲ್ಲು ಹಬ್ಬಕ್ಕೆ ಶ್ರೀಕೃಷ್ಣನನ್ನು ಸ್ವಾಗತಿಸಲು ಬಿಲ್ಲೇ ಬಂದಿದೆಯೋ ಎಂಬಂತೆ ಇತ್ತೆಂದು ವಾದಿರಾಜರ ವರ್ಣನೆ. ಅವಳ ದೇಹ ಮಾತ್ರ ವಕ್ರ, ಮನಸ್ಸು ನೇರ. ನಮ್ಮ ಮನಸ್ಸು ವಕ್ರ, ದೇಹ ಮಾತ್ರ ನೇರ, ಅವಳು ನೀಡಿದ ಗಂಧ ಸ್ವೀಕರಿಸಿ ಅವಳನ್ನು ಸುಂದರಿಯಾಗಿಸಿದ. 'ಷೋಡಶೋಪಚಾರಗಳಲ್ಲಿ ಒಂದಾದ ಗಂಧೋಪಚಾರದಿಂದಲೇ ಶ್ರೀಕೃಷ್ಣ ಆಕೆಯನ್ನು ಇಷ್ಟು ಅನುಗ್ರಹಿಸಿದ, ಇನ್ನು ... ಷೋಡಶೋಪಚಾರಗಳನ್ನೂ ಮಾಡಿದರೆ?' ವಾದಿರಾಜರ ವರ್ಣನೆ.

ಬಿಲ್ಲು ಮುರಿದು ಕುವಲಯಾಪೀಡ ಆನೆಯನ್ನು ಮರ್ದಿಸಿದ್ದಾನೆ. ಮುಂದೆ ಚಾಣೂರ-ಮುಷ್ಟಿಕರೊಡನೆ ಮಲ್ಲ ಯುದ್ಧ ಮಾಡಿ ಸಂಹರಿಸಿದ್ದಾರೆ- ಶ್ರೀಕೃಷ್ಣ ಬಲರಾಮರು. ಅನಂತರ ಕಂಸನ ಕೂದಲು ಹಿಡಿದು ನೆಲಕ್ಕೆ ಜಗ್ಗಿ ಎಳೆದು ಸಂಹಾರ ಮಾಡಿದ್ದಾನೆ. **'ಜಾತಃ ಕಂಸವಧಾರ್ಥಾಯ'** ನಮ್ಮ ಹೃದಯವೂ ಒಂದು ಮಧುರಾನಗರ. ಇಲ್ಲಿಯೂ

ಮದವೆಂಬ ಆನೆ ಇದೆ, ಚಾಣೂರ ಮುಷ್ಟಿಕರಿದ್ದಾರೆ. ಶ್ರೀಕೃಷ್ಣನು ಇವರನ್ನೆಲ್ಲ ಸಂಹರಿಸಿ ಒಳಗಿರುವ ಕಂಸನನ್ನು-ಭಗವದ್‌ದ್ವೇಷವನ್ನು ನಿಗ್ರಹಿಸಬೇಕು.

* * *

## 4. ಪಾರಿಜಾತ-ಅಪಹರಣ

"ಶ್ರೀಕೃಷ್ಣ! ದೇವಲೋಕದಿಂದ ತಂದ ಈ ಪಾರಿಜಾತ ಕುಸುಮವನ್ನು ರುಗ್ಮಿಣೀದೇವಿಗೆ ಕೊಡು. ನಾರದರ ಮಾತಿನಂತೆ ಶ್ರೀಕೃಷ್ಣನು ಅವರಿತ್ತ ಕುಸುಮವನ್ನು ರುಗ್ಮಿಣಿಗೆ ಕೊಟ್ಟನು. ಅಂತಃಪುರದ ಎಲ್ಲೆಡೆಯಲ್ಲಿಯೂ ಸುಮಸೌರಭ ಪಸರಿಸಿತು. "ಶ್ರೀಕೃಷ್ಣನಿಗೆ ರುಗ್ಮಿಣಿಯಲ್ಲಿ ಎಂಥ ಪ್ರೇಮ. ಆ ಸುರಲೋಕದ ಸುಮವನ್ನು ಮುಡಿಸಿದ್ದಾನೆ" - ಅಂತಃಪುರದ ಲಲನೆಯರ ಸಂತಸದ ನುಡಿ, ಸತ್ಯಭಾಮೆಯ ಸಖಿಯರಿಗೂ ವಿಷಯ ಮುಟ್ಟಿತು. ಸತ್ಯಭಾಮೆಗೆ ತಿಳಿಯಿತು. ಅಸಹನೆ, ಕೋಪ. "ನಾರದರು ಹೂವಿತ್ತಾಗ ಕಷ್ಣನಿಗೆ ಈ ಸತ್ಯಭಾಮೆಯ ನೆನಪೇ ಬರಲಿಲ್ಲವೇ? ರುಗ್ಮಿಣಿಯೇ ಹೆಚ್ಚಾದಳು!" ಸತ್ಯಭಾಮೆಯ ಗೊಣಗು, ರುಗ್ಮಿಣೀ ಬೇರೆಯಲ್ಲ. ಸತ್ಯಭಾಮೆ ಬೇರೆಯಲ್ಲ. ಲಕ್ಷ್ಮಿಯದೇ ಎರಡುರೂಪ. ಆದರೂ ಲೋಕದ ಸ್ತ್ರೀಯರ ಪ್ರವೃತ್ತಿಯ ವಿಡಂಬನೆ.

"ಇದೇನು ಭಾಮೆ! ಕೋಪವೇಕೆ! ರೂಪಲಾವಣ್ಯಗಳಲ್ಲಿ ನಿನಗಾರು ಸಾಟಿ? ನಾರೀಕುಲ ಶಿರೋಮಣಿ ನೀನು, ನನ್ನ ಹೃದಯದ ಅರಗಿಣಿ ನೀನು, ನೀನು ಬಯಸಿದರೆ ಪಾರಿಜಾತದ ಒಂದು ಕುಸುಮವೇನು? ಆ ಸ್ವರ್ಗದ ಪಾರಿಜಾತ ವೃಕ್ಷವನ್ನೇ ನಿನ್ನ ಅಂಗಳಕ್ಕೆ ತರಿಸುವೆನು."

ಶ್ರೀಕೃಷ್ಣನು ಹೀಗೆ ಸಾನುನಯ ಪ್ರತಿಜ್ಞೆ ಮಾಡುತ್ತಿರುವಂತೆಯೇ ಸತ್ಯಭಾಮೆ ಶಾಂತ. "ನಾರದರೇ! ಇಂದ್ರನ ಬಳಿಹೋಗಿ, ವಾಮನಾವತಾರದ, ನಿನ್ನ ತಮ್ಮ ಉಪೇಂದ್ರನು ದೇವಲೋಕದ ಪಾರಿಜಾತ ತರುವನ್ನು ಬಯಸಿರುವನು, ತಡ ಮಾಡದೆ ಕಳುಹಿಸುವುದು, ತಮ್ಮನ ಮೇಲೆ ಪ್ರೀತಿಯಿಂದ ಕಳುಹಿಸಬೇಕು, ನೀನಾಗಿಯೇ ಕೊಡದಿದ್ದರೆ ನಾನೇ ಬಂದು ತೆಗೆದುಕೊಂಡು ಹೋಗದೆ ಬಿಡಲಾರೆ" ಎಂದು ತಿಳಿಸಿರಿ,

“ದೇವೇಂದ್ರ! ಈ ಸ್ವರ್ಗಲೋಕದ ಪಾರಿಜಾತ ತರು ಸತ್ಯಭಾಮೆಯ ವ್ರತಕ್ಕಾಗಿ ಉಪೇಂದ್ರನಿಗೆ ಬೇಕಂತೆ. ತಮ್ಮನಾಗಿ ಕೇಳುತ್ತಿದ್ದಾನೆ. ಕೊಡಬೇಕಂತೆ, ಕೊಡದಿದ್ದರೆ ಅವನೇ ಬಂದು ತೆಗೆದುಕೊಂಡು ಹೋಗುವನಂತೆ”.

ಏನು ನಾರದರೆ! ಅಣ್ಣ ತಮ್ಮಂದಿರ ಮಧ್ಯೆ ವ್ಯಾಜ್ಯ ಬರುವುದು ತರವಲ್ಲ. ಈ ದೇವಲೋಕದ ಪಾರಿಜಾತ ಆ ಮಾನವ ಲೋಕಕ್ಕೆ ಕೊಡಲು ಸಾಧ್ಯವಿಲ್ಲ. ಇಂಥ ಬಯಕೆ ಕೃಷ್ಣನಿಗೇಕೇ ಬಂತು? ತಮ್ಮನಾದ ಮಾತ್ರಕ್ಕೆ ಸ್ವರ್ಗಲೋಕದ ವಸ್ತುವನ್ನು ಮರ್ತ್ಯಲೋಕಕ್ಕೆ ಕೊಡಲಾದೀತೇ? ಸಾಧ್ಯವಿಲ್ಲ ಎಂದು ಹೇಳಿ.

ಶ್ರೀಕೃಷ್ಣನು ವಾಮನಾವತಾರವನ್ನು ತಾಳಿ ಬಲಿಯಿಂದ ಇಂದ್ರನಿಗೆ ರಾಜ್ಯ ಕೊಡಿಸಿದನು. ಯಾವ ಶ್ರೀಹರಿಯಿಂದಲೇ ಸಮಸ್ತೈಶ್ವರವನ್ನು ಪಡೆದಿರುವನೋ ಆ ಹರಿಗೆ, ಅವನ ಅಧೀನವಾದ ವಸ್ತುವನ್ನು ಕೊಡಲು ಇಂದ್ರನಿಗೆ ಅಹಂಕಾರ! ಎಲ್ಲಾ ತನ್ನದೆಂಬ ಭ್ರಮೆ! ಉಪೇಂದ್ರ ಸ್ವರ್ಗಕ್ಕೆ ಲಗ್ಗೆ ಹಾಕಿ ಇಂದ್ರನ ಗರ್ವಕ್ಕೆ ಅಂಕುಶ ಹಾಕಿದನು. ಭ್ರಮೆ ಹೋಗಿ ಇಂದ್ರ ಶರಣಾದ. ಪಾರಿಜಾತ ತರು ಧರೆಗೆ ಬಂತು.

ನಾವು ಈ ಇಂದ್ರನಂತೆ ಭಗವಂತನ ಅಧೀನವಾದ ಪದಾರ್ಥಗಳನ್ನು ಭಗವಂತನಿಗೇ ಅರ್ಪಿಸಲು ಮನಸ್ಸು ಮಾಡುವುದಿಲ್ಲ. “ನಾನು ಅಣ್ಣ, ಮೊದಲು ನಾನು ಈ ಪಾರಿಜಾತವನ್ನು ಉಪಯೋಗಿಸುತ್ತೇನೆ. ಕೃಷ್ಣ ಎಷ್ಟಾದರೂ ನನ್ನ ತಮ್ಮ ಅವನಿಗೇಕೆ?” ಎಂದು ಇಂದ್ರ ನುಡಿದಂತೆ ನಮಗಾದ ಮೇಲೆ, ಉಳಿದರೆ ದೇವರಿಗೆ ಎನ್ನುವ ವರ್ತನೆ. ದೇವರನ್ನೇ ಅನುಗ್ರಹಿಸುವಂಥ ಧೋರಣೆ!

ಶ್ರೀರಾಮ ಸಮಸ್ತ ರಾಜ್ಯವನ್ನು ಭರತನಿಗೆ ಕೊಟ್ಟು ಕಾನನಕ್ಕೆ ತೆರಳಿದ. ಆದರೆ ಭರತ ಸುಖವಾಗಿ ರಾಜನಾಗಿರದೆ ಸಿಂಹಾಸನದಲ್ಲಿ ಶ್ರೀರಾಮನ ಪಾದುಕೆ ಇಟ್ಟ, ‘ಇದು ರಾಮನ ರಾಜ್ಯ ನನ್ನದಲ್ಲ’ ಎಂಬ ನಿರಹಂಕಾರ ಭಾವನೆಯಿಂದ, ಸರ್ವಸಮರ್ಪಣ ಭಾವದಿಂದ ರಾಜ್ಯವಾಳಿ ರಾಮನಿಗೆ ಹಿಂತಿರುಗಿಸಿದ. ಭರತನಂತಿರಬೇಕು, ಎಲ್ಲವೂ ಭಗವಂತನದ್ದು ಎನ್ನುವ ಭಾವವಿರಬೇಕು. ಹೃದಯ ಸಿಂಹಾಸನದಲ್ಲಿ ಶ್ರೀರಾಮ ಪಾದವಿರಿಸಿ ಅವನ

ಪ್ರತಿನಿಧಿಯಾಗಿ ಬಾಳಬೇಕು. **'ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್'** ಎನ್ನುವ ಸರ್ವಸಮರ್ಪಣಭಾವದಿಂದಿರಬೇಕು. ಎಲ್ಲವೂ ನನ್ನದೆಂಬ ಅಧಿಕಾರಪ್ರಜ್ಞೆ ಇರಬಾರದು.

ಇಂದ್ರನೇ ಅಹಂಕಾರ ಪಟ್ಟಿದ್ದಾನೆ ಅಂದ ಮೇಲೆ ನಾವು ಅಹಂಕಾರಪಟ್ಟರೆ ಪರವಾಗಿಲ್ಲ, ಎಂದು ಭಾವಿಸಬಾರದು. ದೇವತೆಗಳಿಂದ, ಅಸುರಾವೇಶದಿಂದ ಮಾಡಿಸಿ ಭಗವಂತನು ನಮಗೆ ಎಚ್ಚರ ಕೊಡಲು ಹೀಗೆ ಮಾಡಿದ್ದಾನೆ.

* * *

## 5. ಯಜ್ಞವರಾಹ

ಹಿಂದೆ ಹಿರಣ್ಯಾಕ್ಷನು ಈ ಭೂಮಿಯನ್ನೇ ನೀರಿನಲ್ಲಿ ಮುಳುಗಿಸಿದ, ಕದ್ದೊಯ್ದ. ಆಗ ಕರುಣಾಳುವಾದ ಭಗವಂತನು ಯಜ್ಞವರಾಹನಾಗಿ ಅವತಾರ ಮಾಡಿ ಆ ಹಿರಣ್ಯಾಕ್ಷನನ್ನು ಸಂಹರಿಸಿ ಭೂಮಿಯನ್ನು ತನ್ನ ದಂಷ್ಟ್ರಗಳಿಂದ ಮೇಲೆತ್ತಿದನು.

ಇಂದು ನಾವೆಲ್ಲ ಹಿರಣ್ಯಾಕ್ಷರಾಗಿದ್ದೇವೆ. ಹಿರಣ್ಯ ಎಂದರೆ ಬಂಗಾರ. ಆ ಬಂಗಾರದಲ್ಲಿಯೇ ಅಕ್ಷ-ಕಣ್ಣು ಇಟ್ಟವರು. ಅರ್ಥಾತ್ ಬಂಗಾರ, ಸಂಪತ್ತಿಗಾಗಿ ಆಸೆಪಡುವ, ಅದಕ್ಕಾಗಿ ಮಾಡಬಾರದುದನ್ನೆಲ್ಲ ಮಾಡಲು ಹೇಸದ ನಾವೂ ಹಿರಣ್ಯಾಕ್ಷರಂತೆ. ಸಂಪತ್ತಿಗಾಗಿ ನಾನಾ ವಿಧಗಳಾದ ಅಕೃತ್ಯಗಳನ್ನೆಸಗಿ ಪ್ರಪಂಚವನ್ನೇ ಮುಳುಗಿಸುತ್ತಿದ್ದೇವೆ. ಈ ಪ್ರಪಂಚ ಮುಳುಗದೆ, ಉಳಿಯಬೇಕಾದರೆ ಯಜ್ಞವರಾಹನ ಅವತಾರ ಆಗಬೇಕು. ಯಜ್ಞ ಎಂದರೆ ಸತ್ಕರ್ಮಗಳು. ಸತ್ಕರ್ಮಗಳು ಹೆಚ್ಚಿನ ರೀತಿಯಲ್ಲಿ ನಡೆಯುತ್ತಿದ್ದರೆ ಪ್ರಪಂಚ ಮುಳುಗುವುದಿಲ್ಲ.

* * *

## 6. ಪೌಂಡ್ರಕ ಸಂಹಾರ

"ರಾಜರೇ! ಕೃಷ್ಣನು ನನ್ನನ್ನು ಧಿಕ್ಕರಿಸಿ ತಲೆ ಎತ್ತಿ ನಿಂತಿದ್ದಾನೆ". ತಾನೇ ವಾಸುದೇವ. 'ತಾನೇ ಚಕ್ರೀ, ಶಂಖಿ......' ಎಂದು ಮದವೇರಿದ ಆ ಕೃಷ್ಣನಿಗೆ ಇದೋ! ನನ್ನಲ್ಲಿಯೂ ಶಂಖ, ಚಕ್ರ...... ಧನುಸ್ಸು ಎಲ್ಲವೂ ಇದೆ. ನೋಡಿ

ನನ್ನ ವಕ್ಷಸ್ಥಳದಲ್ಲಿಯೂ ಶ್ರೀವತ್ಸವಿದೆ. ನಾನೇ ಚಕ್ರೀ, ಶಂಖಿ...... ನಾನೇ ವಾಸುದೇವ. ಆ ಕೃಷ್ಣನನ್ನು ನಾನು ಸಂಹರಿಸುತ್ತೇನೆ. ಇದು ಮದಾಂಧ ಪೌಂಡ್ರಕ ವಾಸುದೇವನ ಉದ್ಧಟತದ ಉದ್ಗಾರ, ಬೆಂಕಿಯಿಂದ ಮೈಸುಟ್ಟುಕೊಂಡು ನಾನೇ ವಾಸುದೇವ ಎಂಬ ಅಹಂಕಾರ! ಪೌಂಡ್ರಕನು ಶ್ರೀಕೃಷ್ಣನೊಂದಿಗೆ ಭೀಕರವಾಗಿ ಕಾದಾಡಿ ಮೃತಪಟ್ಟ. 'ನೀನು ವಾಸುದೇವನಲ್ಲ. ನನಗೆ ಸಮರಾಗಲೀ, ಅಧಿಕರಾಗಲೀ ಇಲ್ಲ' ಎಂದು ಶ್ರೀಕೃಷ್ಣ ತಿಳಿಸಿದ.

ನಮ್ಮ ಮನಸ್ಸನ್ನು ಇಣಿಕಿದರೆ ಪೌಂಡ್ರಕನ ಆವೇಶ ನಮ್ಮಲ್ಲಿಯೂ ಇದೆಯೇನೋ ಎನ್ನಿಸಬಹುದು. ಅವನಂತೆ ನಾವು ಭಗವಂತನ ಧರ್ಮಗಳನ್ನು ನಮ್ಮಲ್ಲಿ ಆರೋಪಿಸಿಕೊಳ್ಳುತ್ತೇವೆ. ನಾನೇ ಭಗವಂತ ಎಂಬ ಭಾವನೆಯಿಂದ ವರ್ತಿಸುತ್ತೇವೆ.

ಆ ಪೌಂಡ್ರಕನ ಸಭೆಯಲ್ಲಿ ಕೆಲವು ರಾಜರು ಅವನ ಉದ್ಗಾರಗಳಿಗೆಲ್ಲ ಗೋಣು ಹಾಕಿದ ಹೌದಪ್ಪಗಳು, ಅಂಥ ಅವಿವೇಕಿಗಳ ಬೆಂಬಲ ನಮಗೂ ದೊರೆತು ಅಹಂಕಾರ ಬೆಳೆಯುತ್ತದೆ. ನಾವು ದ್ವೈತಿಗಳು. ಆದರೆ ನಮ್ಮ ಪ್ರವೃತ್ತಿಯ ಹಿಂದೆ ಪೌಂಡ್ರಕನಾಗಿದ್ದಂತೆ ಅದ್ವೈತಭಾವ. ನಮ್ಮ ಕರ್ತೃತ್ವ ಭಗವಂತನ ಅಧೀನವನ್ನು ಮರೆತು ಮೆರೆಯುತ್ತೇವೆ. ಸುದರ್ಶನ ಚಕ್ರದಿಂದ ಪೌಂಡ್ರಕನ ಸಂಹಾರವಾದಂತೆ-ಸುದರ್ಶನದಿಂದ ಉತ್ತಮಶಾಸ್ತ್ರಗಳಿಂದ ನಮ್ಮಲ್ಲಿಯ ಪೌಂಡ್ರಕನ-ಅದ್ವೈತ ಭಾವದ ಪರಿಹಾರ. **'ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ'**- ಎಂಬ ಶಾಸ್ತ್ರದ ಸಂದೇಶವನ್ನು ಅರಿತು ಅಹಂಕಾರವನ್ನು ಬಿಡಬೇಕು.

* * *

## 7. ಕಂಸ ವಧೆ

ಕಂಸನು ಕ್ಷತ್ರಿಯನಾದರೂ ಮಹಾಕ್ರೂರಿ, ಪರಮ ದುಷ್ಟ, ಕಾಮನ (ದುಷ್ಟ) ಅವತಾರವಾದ ಕಾಲನೇಮಿಯು ಶ್ರೀಹರಿಯಿಂದ ಹತನಾಗಿ ಮತ್ತೆ ಕಂಸನಾಗಿ ಜನಿಸಿದನು. ಸ್ವಾರ್ಥ ಸಾಧಕನಾಗಿ ಶಿಷ್ಟ ಮರ್ದನದಲ್ಲಿ ನಿರತನಾದನು, ವಸುದೇವ-ದೇವಕಿಯರ ಎಂಟನೇ ಪುತ್ರನಿಂದ ತನಗೆ

ಮರಣವೆಂಬುದನ್ನು ಪೂರ್ವಭಾವಿಯಾಗಿಯೇ ತಿಳಿದ ನೀಚ ಕಂಸನು ಅಸಂಖ್ಯಾತ ಶಿಶುಹತ್ಯೆ ಮಾಡುವುದಕ್ಕೂ ಹಿಂಜರಿಯಲಿಲ್ಲ. ಆಪದ್ಧರ್ಮವನ್ನನುಸರಿಸಿ ವಸುದೇವನು, ಪರಮಾತ್ಮನ ಆಜ್ಞಾ ಪ್ರಕಾರ, ಶ್ರೀಕೃಷ್ಣನನ್ನು ನಂದ ಗೋಕುಲಕ್ಕೊಯ್ದು ಆಗತಾನೆ ಜನಿಸಿದ ಯಶೋದಾ ದೇವಿಯ ಹೆಣ್ಣು ಶಿಶುವನ್ನು ಗೋಪ್ಯವಾಗಿ ಮಧುರಾ ನಗರಕ್ಕೆ ತಂದು ಸೆರೆಮನೆಯನ್ನು ಹೊಕ್ಕನು. ಈ ರಹಸ್ಯವನ್ನರಿತ ಕಂಸನು ವಸುದೇವ-ದೇವಕಿಯರಿಗೆ ಸಂಕಲೆಗಳನ್ನು ತೊಡಿಸಿ ನಿರ್ಬಂಧದಲ್ಲಿಟ್ಟನು. ಅನೇಕ ಮಂದಿ ರಾಕ್ಷಸರನ್ನು ನಿಯೋಜಿಸಿ ಅವರ ಮುಖೇನ ಶ್ರೀಕೃಷ್ಣನ ವಧೆ ಮಾಡಿಸಿ, ತಾನು ಮೃತ್ಯುವನ್ನು ಗೆಲ್ಲುವೆನೆಂದು ಕಂಸನು ಬಗೆದನು. ಆದರೆ ವಿಧಿಯ ಅವನಿಗೆ ಪ್ರತಿಕೂಲವಾಗಿ ಧರ್ಮದ ಪಕ್ಷವನ್ನು ಎತ್ತಿ ಪರಮಾತ್ಮನ ಅಂತರಂಗ ಭಕ್ತನಾದ ಅಕ್ರೂರನನ್ನು ಮಧುರಾನಗರಕ್ಕೆ ಬರಮಾಡಿಕೊಂಡು, ಅವರ ಹತ್ಯೆ ಮಾಡಬೇಕೆಂದು ಹವಣಿಸಿದನು. ಹರಿಭಕ್ತ ಪರಾಯಣನೂ, ಧರ್ಮಾತ್ಮನೂ ಆದ ಅಕ್ರೂರನು ಕರೆದರೆ ಮಾತ್ರ ಕೃಷ್ಣ ಬಲರಾಮರು ಬರುವರು. ಇತರ ದೂತರನ್ನು ಕಳುಹಿದರೆ ಕೇಶಿ ಮೊದಲಾದವರ ಗತಿಯೇ ಅವರಿಗೆ ಆಗುವುದೆಂದು ತಿಳಿದು ಅಕ್ರೂರನನ್ನು ಈ ಕಾರ್ಯಕ್ಕೆ ನಿಯೋಜಿಸಿದನು. ಶ್ರೀಕೃಷ್ಣನ ಅಪಾರ ಮಹಿಮೆಯನ್ನೂ ಅಗಾಧ ಪರಾಕ್ರಮವನ್ನೂ ಬಲ್ಲ ಅಕ್ರೂರನು ಕಂಸನ ನಾಶ ಸನ್ನಿಹಿತವಾಯಿತೆಂದರಿತು ಪರಮಾತ್ಮನು ತನ್ನ ಆಗಮನದಿಂದ ಸಂತುಷ್ಟನಾಗಿ ತನಗೆ ಅನುಗ್ರಹವನ್ನು ಮಾಡುವನೆಂಬ ನಿಶ್ಚಿತ ಮನೋಭಾವದಿಂದ ನಂದಗೋಕುಲಕ್ಕೆ ಪ್ರಯಾಣ ಮಾಡಿ ಶ್ರೀಕೃಷ್ಣನಿಗೆ ಕಂಸನ ಕುಟಿಲ ಮನೋವೃತ್ತಿಯನ್ನು ತಿಳಿಸಿದನು. ಶ್ರೀಹರಿಯು ಅಕ್ರೂರನನ್ನು ಮನ್ನಿಸಿ ಮಧುರಾ ಪ್ರಯಾಣವನ್ನು ಕೈಕೊಂಡನು.

ಮಧುರಾನಗರದಲ್ಲಿ ದುಷ್ಟನಾದ ರಜಕನನ್ನೂ, ಕುವಲಯಾಪೀಡ ಮದಗಜವನ್ನೂ, ಚಾಣೂರ ಮುಷ್ಟಿಕ ಮಲ್ಲರನ್ನೂ ಶ್ರೀಕೃಷ್ಣನು ಸಂಹರಿಸಿ; ಅದೇ ರಂಗದಲ್ಲಿ ಕಂಸನನ್ನು ವಧಿಸಿ ಮೂರು ಲೋಕಗಳಿಗೂ ಆನಂದವನ್ನುಂಟುಮಾಡಿದನು. ವಸುದೇವ-ದೇವಕಿಯರನ್ನು ಬಂಧಮುಕ್ತ-ರನ್ನಾಗಿ ಮಾಡಿ ಸಂತೋಷಪಡಿಸಿದನು. ಉಗ್ರಸೇನನಿಗೆ ಮಧುರಾರಾಜ್ಯ ಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡಿದನು.

ಕಾಲನೇಮಿಯೇ ದುಷ್ಟ ಕಾಮನೆಗಳು, ಅಂಥಾ ಕಾಮನೇ ಕಂಸನಾಮಕನಾಗಿ ಶ್ರೀಹರಿಯ ಮೇಲೆ ಸೇಡು ತೀರಿಸಿಕೊಳ್ಳಲು ಕಂಕಣ ಬದ್ಧನಾದನು. ಈ ದುಷ್ಟ ಕಾಮನಿಂದ ಜಿತರಾದ ವಸುದೇವ-ದೇವಕಿಯರೆಂಬ ಜೀವಾತ್ಮ ಮತ್ತು ಮನಸ್ಸು ಇವುಗಳ ಬಂಧನವಾಯಿತು. ಪರಮಾತ್ಮನಿಂದ ಹೊರತು ಈ ಕಾಮನೆ ಮರ್ದನವಾಗುವಂತಿಲ್ಲ. ಘೋರ ಶಕ್ತಿಯುತವಾದ ಈ ಕಾಮನು ಪರಮಾತ್ಮನನ್ನು ನೇರವಾಗಿ ಇದಿರಿಸಲು ಶಕ್ಯವಾಗದೆ ಇತರ ಶಕ್ತಿಗಳಿಂದ ಭಗವಂತನ ನಾಶಕ್ಕೆ ಪ್ರಯತ್ನಿಸಿ ವಿಫಲನಾದನು. ದುಷ್ಟ ಕಾಮಕ್ಕೂ ಜ್ಞಾನಮಾರ್ಗಕ್ಕೂ ಪೂರ್ವ ಪಶ್ಚಿಮಗಳಷ್ಟು ದೂರ. ಕಾಮನ ದುಷ್ಟ ಬಲಗಳೆಲ್ಲ ನಾಶವಾದವು, ದೇಹವೆಂಬ ಮಧುರಾ ನಗರಕ್ಕೆ ಪರಮಾತ್ಮನನ್ನು ಬರಮಾಡಿಕೊಂಡು, ಅಹಂಕಾರರೂಪವಾದ ಕುವಲಯಾಪೀಡವೆಂಬ ಗಜದಿಂದ ತುಳಿಸಿ ಕೊಲ್ಲಲು ಕಂಸನ (ಕಾಮನ) ಪ್ರಯತ್ನ ನಡೆಯಿತು. ಪರಮಾತ್ಮ ದೇಹವನ್ನು ಹೊಕ್ಕು ಬೆಳಗಬೇಕಾದರೆ ಅತಿಶಯ ಭಕ್ತಿಯಿರಬೇಕಲ್ಲವೆ! ಈ ಭಕ್ತಿಯೇ ಅಕ್ರೂರ ಆ ಭಕ್ತಿಯನ್ನೇ (ಅಕ್ರೂರ) ತನ್ನ ದೂತನನ್ನಾಗಿ ಕಳುಹಿಸಿ, ಕೃಷ್ಣ ಬಲರಾಮರನ್ನು ಕರೆ ತರಿಸಿದನು. ಭಕ್ತಿ ಪ್ರೇಮಗಳಿಗೆ ಒಲಿದ ಭಗವಂತನು ಸಂತುಷ್ಟನಾಗಿ ದೇಹವೆಂಬ ಮಧುರೆಗೆ ಆಗಮಿಸಿ, ಕುವಲಯಾಪೀಡವೆಂಬ ಅಹಂಕಾರವನ್ನು ಮರ್ದನಮಾಡಿದನು. ದುರ್ಮದಗಳೇ ಚಾಣೂರ ಮುಷ್ಟಿಕರು ಮತ್ತು ಅವರ ಅನುಯಾಯಿಗಳು. ಶ್ರೀಕೃಷ್ಣ ಬಲರಾಮರು ಈ ದುರ್ಮದಗಳ ನಾಶ ಮಾಡಿದ ನಂತರ ಕಾಮನ (ಕಂಸನ) ಸಂಹಾರವನ್ನು ಕೃಷ್ಣನು ಮಾಡಿದನು. ಮಧುರಾ (ದೇಹ) ನಗರವು ನಿಷ್ಕಂಟಕವಾಯಿತು. (ಕಾಮನ ಉಪಟಳದಿಂದ ನಗರದಿಂದ ಪರಊರುಗಳಿಗೆ ಓಡಿಹೋಗಿದ್ದ) ಶಿಷ್ಯ ಜನರಾದ ಯಾದವರು (ಶಿಷ್ಯಗಣ ಸಮುದಾಯ ಮತ್ತೆ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರರಾಗಿ ಸ್ವಸ್ಥಳವನ್ನು ಸೇರಿದರು. ದ್ವಾಪರಯುಗದಲ್ಲಿ ಒಬ್ಬ ಕಂಸವಧೆಗೆ ಒಬ್ಬ ಕೃಷ್ಣನ ಅವತಾರವಾದರೆ ಈಗ ಪ್ರತಿಯೊಬ್ಬ ಮಾನವನ ದೇಹದಲ್ಲೂ ಒಬ್ಬೊಬ್ಬ ಕಂಸಾಸುರನಿದ್ದಾನೆ. ಈ ಕಂಸನ ನಾಶಕ್ಕಾಗಿ ಅನಂತರೂಪನಾದ ಪರಮಾತ್ಮನು ಹಲವು ಕೃಷ್ಣರಾಗಿ ಅವತರಿಸಿ ಅವರ ಅಹಂಕಾರ, ದುರ್ಮದ, ದುಷ್ಟ ಕಾಮ ಇವರ ನಾಶ ಮಾಡಬೇಕಾಗುವುದು. ಆದಕಾರಣ ಪವಿತ್ರವಾದ

ಮಾನವ ದೇಹವನ್ನು ಪಡೆದಿರುವ ನಾವು ಈ ದುಷ್ಟ ಶಕ್ತಿಗಳನ್ನು ದೂರ ಮಾಡಿ ಪರಮಾತ್ಮನನ್ನು ನಮ್ಮ ಹೃದಯಮಂಟಪದಲ್ಲಿ ನೆಲೆಗೊಳಿಸಿ ನಮ್ಮ ಜೀವನವನ್ನು ಆನಂದಮಯವನ್ನಾಗಿ ಮಾಡಿಕೊಳ್ಳಬೇಕಾದುದು ಪ್ರತಿಯೊಬ್ಬ ಮಾನವನ ಕರ್ತವ್ಯ.

* * *

## 8. ಜರಾಸಂಧ ವಧೆ

ಅಜ್ಞಾನವೇ ಜರಾಸಂಧ. ಈ ಅಜ್ಞಾನವು ಬಹು ಬಲವತ್ತರವಾದದು. ಪರಮಾತ್ಮ ವಿಮುಖವಾದ ದುಷ್ಟ ಗುಣಗಳೆಲ್ಲವೂ (ದುಷ್ಟ ರಾಜರು) ಅಜ್ಞಾನದ ವಶವರ್ತಿಗಳು. ಅಜ್ಞಾನಕ್ಕೆ ಕಾನೂನು (ಕಂಸ) ಅಳಿಯ. ಜರಾಸಂಧನ ಮಕ್ಕಳೂ ಕಂಸಪತ್ನಿಯರೂ ಆದ ಅಸ್ತಿ ಪ್ರಾಸ್ತಿಯರು ವಿಪರೀತ ಜ್ಞಾನ. ಕಾಮನ ನಾಶದಿಂದ ವಿಪರೀತ ಜ್ಞಾನಕ್ಕೆ ನೆಲೆಯಿಲ್ಲವಾಯಿತು. ಈ ಅಸ್ತಿ–ಪ್ರಾಸ್ತಿಯರು ಅಜ್ಞಾನರೂಪವಾದ ಜರಾಸಂಧನಲ್ಲಿ ಮೊರೆಯಿಟ್ಟರು. ಇದರಿಂದ ಪರಮಾತ್ಮನ ಭೂಭಾರಹರಣ ಕಾರ್ಯಕ್ಕೆ ಅನುಕೂಲವಾಯಿತು. ಕಾಲಕಾಲಕ್ಕೆ ದಂಡಯಾತ್ರೆ ನಡೆಸಿದ ಜರಾಸಂಧನ ಸೇನೆ ನಿರ್ನಾಮವಾಯಿತು. ದೇಹವೆಂಬ ಮಧುರಾ ನಗರವನ್ನು ಪ್ರವೇಶಿಸಿ ಪರಮಾತ್ಮವಸ್ತುವನ್ನು ನಾಶಮಾಡುವ ಕಾರ್ಯದಲ್ಲಿ ಅಜ್ಞಾನ ನಾಶವಾಗುವ ಹೊತ್ತು ಬಂತು. ಆದರೆ ಈ ಅಜ್ಞಾನ ನಾಶ ಕಾರ್ಯ ವಾಯುದೇವರಿಂದಲೇ ಆಗಬೇಕೆಂಬುದು ಭಗವಂತನ ಸಂಕಲ್ಪ. ಈ ಅಜ್ಞಾನದ ದಾಳಿಗಳು ಹಲವು ನಡೆದರೂ ಹೃದಯಸ್ಥಾನದಲ್ಲಿ ದೇವನಿರುವ ಕಾರಣ ಆ ಶಕ್ತಿಗಳೆಲ್ಲ ನಾಶವಾದವು.

**ಕಾಲಯವನ** : ಮುಂದೆ ಪರಕೀಯ ಸಹಾಯದಿಂದ (Foreign aid) ಜರಾಸಂಧನು ಮತ್ತೆ ದಾಳಿಯಿಟ್ಟನು. ಮ್ಲೇಂಛನಾದ ಕಾಲಯವನ ಕೋಟ್ಯಂತರ ಬಲದೊಡನೆ ಮಧುರೆಯನ್ನು ಮುತ್ತಿದನು. ಈ ಕಾಲಯವನನೇ ಮೃತ್ಯು. ಬಲಶಾಲಿಯಾದ ಶತ್ರುವು ಮುತ್ತಿಗೆ ಹಾಕಿದಾಗ ರಾಜಧಾನಿಯನ್ನು ಸುರತವಾದ ದೂರ ಪ್ರದೇಶಕ್ಕೆ ಬದಲಾಯಿಸುವುದು ರಾಜತಂತ್ರದ ಅಂಗವಾಗಿದೆ. ಇಂದಿಗೂ ಈ ಕಾರ್ಯ ನಡೆಯುವುದು ಕಂಡು

ಬಂದಿದೆ. ಅದರಂತೆ ಮೃತ್ಯು ಪ್ರಾಪ್ತವಾದಾಗ ದೇಹ ಬದಲಾವಣೆ ಅತ್ಯವಶ್ಯ. ಪರಮಾತ್ಮನ ಅನುಗ್ರಹದಿಂದ ಪರಮೋತ್ಕೃಷ್ಟವಾದ ದೇಹವನ್ನು (ದ್ವಾರಕಾ) ದೇಹವನ್ನು ಜೀವನು ಪಡೆಯುವನು, ಅಲ್ಲಿ ಪರಮಾತ್ಮನ ನಿತ್ಯ ಸನ್ನಿಧಾನ. ಉತ್ತಮ ಜೀವನ ಸೌಕರ್ಯವುಂಟು. ಸಮುದ್ರ ಮಧ್ಯದಲ್ಲಿ ವೈಕುಂಠ ಸದೃಶವಾದ ದ್ವಾರಕಾನಗರ ಕ್ಷಣ ಮಾತ್ರದಲ್ಲಿ ನಿರ್ಮಾಣವಾಗಿ, ಮಧುರೆಯ ಸಮಸ್ತ ಪ್ರಜೆಗಳೂ ಶ್ರೀಕೃಷ್ಣನ ಯೋಗ ಶಕ್ತಿಯಿಂದ ದ್ವಾರಕಾನಗರವನ್ನು ಸೇರಿದರು. ಮಧುರಾನಗರವು ಜೀವನಿಲ್ಲದ ಕಳೇವರದಂತೆ ಬರಿದಾಯಿತು.

## ಮುಚುಕುಂದವರದ

ಮುಚುಕುಂದರಾಯನು ಭಗವದ್ಭಕ್ತನು. ಪರಾಕ್ರಮಿಯು. ದೇವತೆಗಳ ಸಹಾಯಾರ್ಥವಾಗಿ ದೇವಲೋಕಕ್ಕೆ ತೆರಳಿ ದಾನವರೊಡನೆ ಯುದ್ಧ ಮಾಡಿದನು. ಜಯಶೀಲನಾದ ರಾಯನು ಜಯಿಸಿದ ದೇವಲೋಕವನ್ನು ದೇವೇಂದ್ರನಿಗೊಪ್ಪಿಸಿದಾಗ ಅವನಿಂದ ವರರೂಪವಾಗಿ ನಿದ್ರೆಯನ್ನು ಬೇಡಿದನು. ಜೀವನು ಭೌತಿಕ ಕಾರ್ಯ ನಿರತನಾಗಿ ಭಗವಂತನ ಜ್ಞಾನವನ್ನು ಮರೆತು ದೀರ್ಘ ತಮಸ್ಸಿನಲ್ಲಿ ಮುಳುಗುವ ರೀತಿ ಇದು. ಮುಚುಕುಂದನು ಯುದ್ಧ ಮಾಡುತ್ತಿರುವಾಗ ಭೂಲೋಕದಲ್ಲಿ ಬಹುಕಾಲ ಉರುಳಿ ಹೋಯಿತು. ಆ ರಾಯನ ಕಾಲದವರಾರೂ ಭೂಮಿಯಲ್ಲಿರಲಿಲ್ಲ. ಆಗಿನ ಧರ್ಮವೂ ನಶಿಸಿತ್ತು. ಆದಕಾರಣ ಮುಚುಕುಂದರಾಯನು ಮತ್ತೆ ರಾಜ್ಯದಲ್ಲಿ ನಿಲ್ಲಲು ಇಚ್ಛಿಸಲಿಲ್ಲ. ಆದರೆ ಅಜ್ಞಾನವಶದಿಂದ ನಿದ್ರೆಯನ್ನು ಬಯಸಿ ದೇವೇಂದ್ರನಿಂದ ಆ ವರವನ್ನು ಪಡೆದನು. ತನ್ನ ಭಕ್ತನ ಆಯುಷ್ಯವೆಲ್ಲ ರಾಜ್ಯಭಾರ, ಯುದ್ಧ, ನಿದ್ರೆಗಳಲ್ಲಿ ನಶಿಸುತ್ತಿರುವುದನ್ನು ಕಂಡು, ಕರುಣಾ ಸಮುದ್ರನಾದ ಶ್ರೀಕೃಷ್ಣನು ಅವನನ್ನು ಅನುಗ್ರಹಿಸಬೇಕೆಂದು, ಮನಗಂಡು ಆ ರಾಯನು ನಿದ್ರಿಸುತಿದ್ದ ಗುಹೆಯನ್ನು ಪ್ರವೇಶಿಸಿದನು, ಏಕಾಂಗಿಯಾಗಿ, ನಿರಾಯುಧನಾಗಿ ಓಡುತ್ತಿರುವ ಶ್ರೀಕೃಷ್ಣನನ್ನು ಕಾಲಯವನನು ಕಂಡು ತನಗೆ ಹೆದರಿ ಭಯದಿಂದ ಓಡುತ್ತಿರುವನೆಂದು ಭಾವಿಸಿ ತಾನೂ ಪರಮಾತ್ಮನನ್ನು ಅನುಸರಿಸಿ ಆ ಗುಹೆಯನ್ನು ಹೊಕ್ಕನು. ಆ ಮುಸುಕು ಹಾಕಿ ಮಲಗಿರುವ ಮುಚುಕುಂದರಾಯನನ್ನೇ ಕೃಷ್ಣನೆಂದು ಭಾವಿಸಿ ಅವನನ್ನು ಕಾಲಿನಿಂದ ಒದ್ದನು. ಎಚ್ಚೆತ್ತ ಮುಚುಕುಂದನು ಎದ್ದು ಕೋಪದಿಂದ ಆ ಯವನನನ್ನು

ನೋಡುತ್ತಿರಲು, ಕಾಲಯವನನು ಸುಟ್ಟು ಬೂದಿಯಾದನು. ಭಗವಂತನ ಸಂಕಲ್ಪದಂತೆ ದುಷ್ಟ ಮರ್ದನವಾಯಿತು. ಶ್ರೀಕೃಷ್ಣನು ಪ್ರತ್ಯಕ್ಷನಾಗಿ ಮುಚುಕುಂದನನ್ನು ಅನುಗ್ರಹಿಸಿದನು. ಹೀಗೆ ಆ ಮುಚುಕುಂದರಾಯನಂತೆ ಜೀವನು ವಿಷಯ ಸುಖಗಳಲ್ಲಿ ಮುಳುಗಿ ದೀರ್ಘತಮಸ್ಸಿನಲ್ಲಿ ಮುಳುಗಿರುವನು. ಸುಜೀವಿಯಾಗಿ ತನ್ನ ಭಕ್ತನು ಈ ಪ್ರಕಾರ ತಮಸ್ಸಿನಲ್ಲಿ ಸಿಕ್ಕಿ ಬಳಲುತ್ತಿರುವಾಗ ಭಗವಂತನು ತಾನಾಗಿಯೇ ಬಂದು, ಅವನನ್ನು ಎಚ್ಚರಿಸಿ ಮುಕ್ತಿ ಮಾರ್ಗವನ್ನು ತೋರಿಸಿ ಸತ್ಪಥಕ್ಕೆಳೆಯುವನು.

* * * *

# ತತ್ತ್ವವಾದದ ಮಾಧುರ್ಯ



ಶಂಖ-ಪದ್ಮ-ಗದಾ-ಚಕ್ರಧಾರಿಯಾದ **'ಕಮಲಾಲಯಾ'**ಪತಿ **'ಮಧುಸೂದನ'**



## ಅದ್ಭುತ ಸಂಶೋಧಕರು

ಶ್ರೀಮಧ್ವಾಚಾರ್ಯರನ್ನು ನೂತನ ಮತಸ್ಥಾಪಕರೆನ್ನದೆ ವೇದ, ಉಪನಿಷತ್ತೇ ಮುಂತಾದ ಸಾಹಿತ್ಯಗಳನ್ನೊಳಗೊಂಡ ವೈದಿಕ ವಾಙ್ಮಯದ ಅದ್ಭುತ ಸಂಶೋಧಕರೆನ್ನುವುದೇ ಸೂಕ್ತ, ಅವರು ಮರೆಯಾಗಿದ್ದ ವೈದಿಕ ಧರ್ಮವನ್ನೇ ತಮ್ಮ ಅಮೋಘ ಸಂಶೋಧನೆಯಿಂದ ಪುನಃ ಬೆಳಕಿಗೆ ತಂದರು. ವೈದಿಕ ಧರ್ಮವನ್ನು ಮುಚ್ಚಿದ್ದ, ಅನೇಕ ನೂತನ ವಾದಗಳನ್ನು ತಮ್ಮ ತರ್ಕಬದ್ಧ ಹಾಗೂ ಪ್ರಮಾಣಸಿದ್ಧ ವಿಚಾರಸರಣಿಯಿಂದ ಹೊಡೆದೋಡಿಸಿದರು. ವೈದಿಕಸಿದ್ಧಾಂತ ಪ್ರಜ್ವಲಿಸುವಂತೆ ಮಾಡಿರುವರು.

**– ಶ್ರೀ ವಿಶ್ವೇಶತೀರ್ಥಶ್ರೀಪಾದರು**

## 1. ಸರ್ವಜ್ಞಾನಕ್ಕೆ ಬೇಕಾದ ಸಾದೃಶ್ಯಜ್ಞಾನ

ಛಾಂದೋಗ್ಯೋಪನಿಷತ್ತಿನಲ್ಲಿ ಬಂದಿರುವಂತೆ, ಏಕವಿಜ್ಞಾನದಿಂದ ಸರ್ವ ವಿಜ್ಞಾನವನ್ನು ಸಿದ್ಧಾಂತಾನುಸಾರವಾಗಿ ಪ್ರಾಧಾನ್ಯ ಹಾಗೂ ಸಾದೃಶ್ಯದ ಹಿನ್ನೆಲೆಯಲ್ಲಿ ಸಮರ್ಥಿಸಬಹುದು. ಸದೃಶವಾದ ವಸ್ತುವಿನ ಒಂದು ಜ್ಞಾನದಿಂದ ಸದೃಶವಾದ ಮತ್ತೊಂದು ವಸ್ತುವಿನ ಜ್ಞಾನ ಬಂದಂತೆಯೇ ಎನ್ನುವುದಾದರೆ ಸದೃಶರಾದ ಭಗವಂತನ ಜ್ಞಾನದಿಂದ ಅವರಿಗೆ ಸದೃಶ್ಯವಾದ ಜಗತ್ತಿನ ಜ್ಞಾನದಿಂದ ಅವನ ಜ್ಞಾನವೂ ಬರಬೇಕಾದೀತು ತಾನೇ? ಎಂದು ಸಂದೇಶ ಸಹಜ.

ಆದರೆ ಭಗವಂತನಿಗೆ ಎಲ್ಲಾ ವಸ್ತುಗಳೂ ಸದೃಶವಾದವುಗಳು, ಅಂತಹ ಎಲ್ಲವುಗಳ ಜ್ಞಾನದಿಂದಷ್ಟೇ ಭಗವಂತನ ಜ್ಞಾನ ಬಂದೀತೇ ವಿನಹ ಯಾವುದೋ ಒಂದು ಸದೃಶ ವಸ್ತುವಿನ ಜ್ಞಾನದಿಂದಲ್ಲ.

ಮೃಗಾಲಯದಲ್ಲಿಯ ಎಲ್ಲಾ ಪ್ರಾಣಿಗಳ ಜ್ಞಾನದಿಂದ ಉಳಿದೆಲ್ಲ ಸದೃಶ ಪ್ರಾಣಿಗಳ ಜ್ಞಾನ ಹೇಗೆ ಬಂದಂತಾಗುವುದೋ ಹಾಗೆ. ಒಂದು ಸದೃಶ ಪ್ರಾಣಿಯ ಜ್ಞಾನದಿಂದ ಮೃಗಾಲಯದಲ್ಲಿಯೇ ಎಲ್ಲ ಸದೃಶ ಪ್ರಾಣಿಗಳ ಜ್ಞಾನ ಹೇಗೆ ಬರಲಾರದೋ ಹಾಗೇ ಜಗತ್ತಿನ ಯಾವುದೋ ಒಂದು ಸದೃಶ ಪದಾರ್ಥ ಜ್ಞಾನದಿಂದ ಸಕಲ ಪದಾರ್ಥಗಳ ಸಾದೃಶ್ಯವನ್ನು ಹೊಂದಿರುವ ಭಗವಂತನ ಜ್ಞಾನ ಬರಲಾರದು.

[ನಮ್ಮ ಗುರುಗಳಾದ ಶ್ರೀವಿದ್ಯಾಮಾನ್ಯರಿಗೆ ಶಾಸ್ತ್ರಾರ್ಥ ಚಿಂತನೆ ಎಂದರೆ ಭಾರೀ ಪ್ರಿಯ. ಗುರುಗಳ ಸಂತೋಷಕ್ಕಾಗಿ ನಾವು ವಿದ್ಯಾರ್ಥಿಯಾಗಿದ್ದಾಗ ಶ್ರೀ ವಿದ್ಯಾಮಾನ್ಯತೀರ್ಥರು ಪರಿಷ್ಕರಿಸಿದ್ದ ಒಂದು ಶಾಸ್ತ್ರಾರ್ಥ ಚಿಂತನೆಯಿದು].

* * * *

## 2. ನೈಜ ತತ್ವಜ್ಞಾನ

ಕೆಲವು ದಾರ್ಶನಿಕರು ಕಣ್ಣಿಗೆ ಕಂಡಿದ್ದಷ್ಟೇ ಸತ್ಯ ಎಂದರು. ಇನ್ನು ಕೆಲವರು ಕಂಡಿದ್ದೆಲ್ಲ ಸುಳ್ಳು, ಕಾಣದ ಆತ್ಮತತ್ವ ಸತ್ಯ ಎಂದರು. ಕಂಡ ಈ ಪ್ರಪಂಚ ಮಾತ್ರ ಸತ್ಯ, ದೇವರೂ ಇಲ್ಲ, ಆತ್ಮನೂ ಇಲ್ಲವೆಂದಾದರೆ

ಸ್ವಾರ್ಥ, ಅಹಂಕಾರಗಳು ಬೆಳೆದು ಸಮಾಜಕ್ಕೆ ಹಾನಿಯಾಗುತ್ತದೆ. ದೇವರೇ ಸತ್ಯ, ಪ್ರಪಂಚ ಸುಳ್ಳಾದರೆ ಕರ್ತವ್ಯದಲ್ಲಿ ಪ್ರೇರಣೆಯೇ ಇಲ್ಲದೆ ಸಾಧನೆಯಲ್ಲಿ ಸ್ಫೂರ್ತಿ ಇಲ್ಲದಾಗುತ್ತದೆ. ಅದಕ್ಕಾಗಿ ಮಧ್ವಾಚಾರ್ಯರು ಕಣ್ಣಿಗೆ ಕಾಣದ ದೇವರು, ಪುಣ್ಯ-ಪಾಪಗಳೂ ಸತ್ಯ. ಕಣ್ಣಿಗೆ ಕಾಣುವ ಪ್ರಪಂಚವು ಸತ್ಯ ಎಂದರು. ಅಧ್ಯಾತ್ಮ-ಆದಿಭೌತಿಕ ಇವೆರಡೂ ಬೇಕು. ಇದರಿಂದ ನಿಷ್ಕ್ರಿಯತೆಗೂ ಅವಕಾಶವಿಲ್ಲ, ಅಹಂಭಾವವೂ ಬರುವುದಿಲ್ಲ. ದೈವ ಮತ್ತು ಪುರುಷ ಪ್ರಯತ್ನ ಎರಡೂ ಸೇರಿದಾಗ ನಾವು ಜೀವನದ ಗುರಿಯನ್ನು ಮುಟ್ಟುತ್ತೇವೆ.

ಶ್ರೀ ಮಧ್ವಾಚಾರ್ಯರು ಮತತ್ರಯಾಚಾರ್ಯರಲ್ಲಿ ಕನ್ನಡನಾಡಿನ ಏಕೈಕ ಸುಪುತ್ರರು. ವೈದಿಕ ತತ್ವಜ್ಞಾನವನ್ನು ಬೆಳಕಿಗೆ ತಂದು ತತ್ವಜ್ಞಾನದ ಜೊತೆಯಲ್ಲಿ ಮಾನವ ಸಮಾಜದ ಸೇವೆಯೂ ಸಾಧಕನ ಕರ್ತವ್ಯ ಎಂದು ಪ್ರತಿಪಾದಿಸಿದವರು. ಸರಕಾರಕ್ಕೆ ಕರವನ್ನು ಕೊಡುವಷ್ಟೇ ಅಗತ್ಯದ ಕೆಲಸ ಇದು, ಎಂದು ಅವರ ಸಂದೇಶ. ಇಂತಹ ಆಚಾರ್ಯರ ಬಗ್ಗೆ ಹೆಮ್ಮೆಪಡುವ ಬದಲು ಇಲ್ಲಸಲ್ಲದ ಸುಳ್ಳು ಆರೋಪವನ್ನು ಹೊರೆಸಿ ಅವರ ಸಿದ್ಧಾಂತನ್ನು ಅವಹೇಳನ ಮಾಡುವುದನ್ನು ನಾವು ಮಾಡಬಾರದು.

* * *

## 3.ವೇದದಂತೆಯೇ ಶ್ರೀ ಮಧ್ವಾಚಾರ್ಯರ ಸಿದ್ಧಾಂತವೂ ಅಪೌರುಷೇಯ

ನಮ್ಮ ಸನಾತನ ವೈದಿಕ ಧರ್ಮಕ್ಕೆ ಉಳಿದ ಮತಗಳಿಗಿಂತ ವಿಶಿಷ್ಟತೆಯಿರಲು ಅದಕ್ಕೆ ಅಪೌರುಷೇಯವಾದ ವೇದದ ಆಧಾರವಿರುವುದೇ ಕಾರಣವಾಗಿದೆ. ಪೌರುಷೇಯ ಕೃತಿಗಳಲ್ಲಿ ಅದರ ನಿರ್ಮಾತೃಗಳಾದ ಮಾನವರಲ್ಲಿ ಸಹಜವಾಗಿ ಇರಬಹುದಾದ ಭ್ರಾಂತಿ-ಅಜ್ಞಾನಗಳಿಂದ ದೋಷಗಳು ಸಂಭವಿಸಲು ಸಾಧ್ಯವಿದೆ. ಮಾನವರ ರಚನೆಗೆ ಒಳಪಡದ ವೇದಗಳಲ್ಲಿ ಇಂತಹ ಮಾನವೀಯ ದೋಷಗಳಿಗೆ ಅವಕಾಶವೆಲ್ಲಿ? ಆದುದರಿಂದ ಅಪೌರುಷೇಯವಾದ ವೇದದಲ್ಲಿ ಪ್ರಾಮಾಣ್ಯದ ಸಂದೇಹಕ್ಕೆ ಎಡೆಯಿಲ್ಲದಿರುವುದರಿಂದ ಅದರ ಆಧಾರದಲ್ಲಿರುವ ಸನಾತನ ವೈದಿಕ ಧರ್ಮವು ಪರಮ ಪ್ರಮಾಣವೆನಿಸಿದೆ.

ಆದರೆ ವೇದವು ಪ್ರಮಾಣವಾಗಿದ್ದರೂ ಅದರ ಮೇಲೆ ತಮ್ಮ ಬುದ್ಧಿಯ ಕಸರತ್ತನ್ನು ಉಪಯೋಗಿಸಿ ತಮಗೆ ಇಷ್ಟ ಬಂದಂತೆ ವೇದಕ್ಕೆ ವ್ಯಾಖ್ಯಾನವನ್ನು ಮಾಡಿ ವಿಭಿನ್ನ ಪ್ರಕಾರದ ಅನೇಕ ಮತಗಳು ಹೊರಟಿವೆ. ಹೀಗಾಗಿ ವೇದವು ಅಪೌರುಷೇಯವಾಗಿದ್ದರೂ ವ್ಯಾಖ್ಯಾನಕಾರರು ತಮ್ಮ ಬುದ್ಧಿಯನ್ನು ಉಪಯೋಗಿಸಿ ವೇದದಿಂದ ಈ ಮತಗಳನ್ನು ಹೊರಡಿಸಲು ಪ್ರಯತ್ನಿಸಿದ್ದರಿಂದ ಈ ಮತಗಳಲ್ಲಿ ಮಾನವೀಯ ದೋಷಗಳ ಪ್ರವೇಶವಾಗಲು ಅವಕಾಶವಿದೆ. ವೇದವು ಅಪೌರುಷೇಯವಾದ್ದರಿಂದ ಪ್ರಮಾಣವಾಗಿದ್ದರೂ ಮಾನವರ ಬುದ್ಧಿ ಚಮತ್ಕಾರಗಳಿಗೆ ಒಳಪಟ್ಟ ಈ ಮತಗಳ ಬಗ್ಗೆ ನಮಗೆ ವಿಶ್ವಾಸವುಂಟಾಗಲಾರದು. ಆದರೆ ಶ್ರೀಮಧ್ವಾಚಾರ್ಯರ ಸಿದ್ಧಾಂತದಲ್ಲಿರುವ ಒಂದು ವಿಶಿಷ್ಟತೆಯನ್ನು ನಾವು ಗಮನಿಸಬೇಕು. ಮಧ್ವಾಚಾರ್ಯರು ವೇದಗಳಿಗೆ ವ್ಯಾಖ್ಯಾನ ಮಾಡುವಾಗ ಎಲ್ಲಿಯೂ ತಮ್ಮ ಬುದ್ಧಿ ಕಸರತ್ತನ್ನು ಪ್ರದರ್ಶಿಸಲಿಲ್ಲ. ಸ್ಪಷ್ಟವಾದ ವೇದವಾಕ್ಯಗಳನ್ನು ಮತ್ತು ವೇದಗಳ ಪ್ರಮಾಣಿಕ ವ್ಯಾಖ್ಯಾನಗಳೆಂದು ಸರ್ವಸಮ್ಮತವಾದ ಪುರಾಣವಾಕ್ಯಗಳನ್ನು ಉಲ್ಲೇಖಿಸಿಯೇ ವೇದಗಳ ವ್ಯಾಖ್ಯಾನಗಳನ್ನು ಮಾಡಿದ್ದಾರೆ. ತಮ್ಮ ಬೌದ್ಧಿಕ ವಿಚಾರವನ್ನು, ವೇದಗಳ ಮೇಲೆ ಹೇರುವ ವಿಚಾರವನ್ನು ಎಲ್ಲಿಯೂ ಮಾಡಿಲ್ಲ. ವೇದಗಳಿಂದಲೇ ವೇದಗಳ ಅರ್ಥವನ್ನು ಹೊರಹೊಮ್ಮಿಸುವ ಅದ್ಭುತ ಕೌಶಲವನ್ನು ತೋರಿಸಿ ಪ್ರಾಮಾಣಿಕವಾದ ವೇದ ವಿವರಣೆಯನ್ನು ಮಾಡಿದ್ದಾರೆ. ಆದ್ದರಿಂದ ವೇದದಂತೆಯೇ ಮಧ್ವಾಚಾರ್ಯರ ಸಿದ್ಧಾಂತವನ್ನು ಅಪೌರುಷೇಯವೆಂದು ನಾವು ಹೇಳಬಹುದು.

* * *

## 3. ಪ್ರತಿಮೆಯೇ ದೇವರಲ್ಲ

ವಿವಿಧ ಸಾಂಸಾರಿಕ ಕ್ಲೇಶಗಳಿಂದ ಬಳಲಿದ ಜನಕ್ಕೆ ವಿಶ್ರಾಂತಿಧಾಮ ಈ ಶ್ರೀಕೃಷ್ಣ ಸನ್ನಿಧಿ. ಮರುಭೂಮಿಯಲ್ಲಿ ಬಳಲಿದ ವ್ಯಕ್ತಿಗೆ ನೀರಿನಂತೆ ತಾಪಪರಿಹಾರಕ ಈ ಕ್ಷೇತ್ರ. ಸಜ್ಜನ ಕರುಣೆಯಿಂದ ಶ್ರೀ ಮದಾಚಾರ್ಯರು ಈ ಶಾಂತಿಯ ಕೇಂದ್ರವನ್ನು ಸುಮಾರು 700 ವರ್ಷಗಳ ಹಿಂದೆ ಸ್ಥಾಪಿಸಿದರು. ಆ ಕ್ಷೇತ್ರವೇ ಉಡುಪಿ.

ಪ್ರತಿಮೆಯೇ ದೇವರಲ್ಲ. ಪ್ರತಿಮೆಯಲ್ಲಿ ದೇವರು. ರಾಷ್ಟ್ರಧ್ವಜವೇ ರಾಷ್ಟ್ರವಲ್ಲ. ಅದು ರಾಷ್ಟ್ರದ ಪ್ರತೀಕ. ಅದರಿಂದ ರಾಷ್ಟ್ರೀಯತೆ ಸ್ಫೂರ್ತಿ ಪಡೆಯಬೇಕು. ಅದರಂತೆ ಪ್ರತಿಮೆಯಿಂದ ಭಕ್ತಿಯ ಸ್ಫೂರ್ತಿ ಪಡೆಯಬೇಕು. ನೀರು ತರುವಾಗ ಪಾತ್ರೆಯನ್ನು ತರಲೇಬೇಕು. ನೀರು ಮಾತ್ರ ತಾ ಪಾತ್ರೆ ಬೇಡ ಎನ್ನುವಂತಿಲ್ಲ. ಅದರಂತೆ ದೇವರು, ಭಕ್ತಿ ಅಷ್ಟೇ ಸಾಕು ಪ್ರತಿಮೆ ಬೇಡ ಅನ್ನುವಂತಿಲ್ಲ. ಜಡವಾದ ಕಲ್ಲು ಮಾತ್ರವಲ್ಲದೆ ಪ್ರಾಣಿಗಳೆಲ್ಲವೂ ಪರಮಾತ್ಮನ ಪ್ರತಿಮೆಗಳೇ. ಈ ಜಡ ಜೀವಿಗಳಿಗಿಂತ ಭಿನ್ನವಾಗಿ ಅದರ ಅಂತರ್ಯಾಮಿಯಾಗಿರುವವನು ಪರಮಾತ್ಮ ಇದು ಆಚಾರ್ಯ ಶ್ರೀ ಮಧ್ವರು ಪ್ರತಿಪಾದಿಸಿದ ತತ್ವ.

ಕರೆಯುವ ಶಕ್ತಿ ಇದ್ದವರು ಕರೆದಾಗ ಭಗವಂತ ಓಡಿಬರುತ್ತಾನೆ. ನಾವು ಕರೆದಾಗ ಕ್ಷಣಕಾಲ ನಿಂತು ಭಗವಂತ ಹೋಗಬಹುದು. ಆಚಾರ್ಯ ಮಧ್ವರು ಅಸ್ಖಲತ್ ಕೃಷ್ಣ ಹೃದಯರು. ಅಂದರೆ ಅವರು ಹೃದಯದಲ್ಲಿ ಸದಾ ಕೃಷ್ಣನನ್ನು ಕಂಡವರು. ಅಂಥಹವರು ಶ್ರೀಕೃಷ್ಣನನ್ನು ಕರೆದಾಗ ಶ್ರೀಕೃಷ್ಣ ಶಾಶ್ವತವಾಗಿ ಈ ಪ್ರತಿಮೆಯಲ್ಲಿ ಸನ್ನಿಹಿತನಾಗಿದ್ದಾನೆ.

* * *

## 4. ಮಧ್ವ ಮತದ ಅಪೂರ್ವತೆ

ನಾಸ್ತಿಕವಾದ ಕಣ್ಣಿಗೆ ಕಾಣುವ ವಸ್ತುಗಳನ್ನಷ್ಟೇ ಒಪ್ಪಿ, ಜೀವ ಈಶ್ವರ ತತ್ತ್ವಗಳನ್ನು ನಿರಾಕರಿಸಿತು. ಇದು ಜಡವಾದ. ಮೀಮಾಂಸಕರು ಜೀವನನ್ನು ಅಂಗೀಕರಿಸಿದರು. ಆದರೆ ಈಶ್ವರನನ್ನು ನಿರಾಕರಿಸಿದರು. ಈಶನ ಸ್ಥಾನದಲ್ಲಿ ಕರ್ಮವನ್ನು ಕೂಡಿಸಿದರು. ಇದು ಜೀವವಾದ. ಶ್ರೀಮಧ್ವಾಚಾರ್ಯರು ಜಡ, ಜೀವ, ಈಶ್ವರ ಈ ಮೂರನ್ನು ಸಾಧಿಸಿದರು. ದೇಶ ಸುಭದ್ರವಾಗಬೇಕಾದರೆ ಶಾಸನವೂ ಬೇಕು, ಪ್ರಜೆಗಳೂ ಇರಬೇಕು, ಸರಕಾರವೂ ಬೇಕು. ಸರಕಾರ ಶಾಸನ-ಕಾಯಿದೆಗಳನ್ನು ಸರಿಯಾಗಿ ಜಾರಿಗೊಳಿಸಬೇಕು. ಪ್ರಜೆಗಳು ಅದನ್ನು ಅನುಸರಿಸಬೇಕು. ಅದರಂತೆ ನಮ್ಮ ಜೀವನ ಪೂರ್ಣವಾಗಬೇಕಾದರೆ ಜಡವಾದ ಕರ್ಮ, ಕರ್ಮಕ್ಕೆ ಅಧೀನರಾದ ನಾವು (ಜೀವ) ಕರ್ಮಫಲವನ್ನು

ನೀಡುವ ದೇವರು ಈ ಮೂರೂ ಬೇಕು. ಇದೇ ಪಂಚಭೇದ ಸಿದ್ಧಾಂತ. ಇದನ್ನು ಪ್ರತಿಪಾದಿಸಿದವರು ಶ್ರೀಮಧ್ವಾಚಾರ್ಯರು.

ಆಚಾರ್ಯರ ಮೊದಲ ಅವತಾರ ಹನುಮಂತ. ವೀರ ಆಂಜನೇಯ, ಕಪಿಗಳು ಮೂರ್ಛೆ ಹೋದಾಗ ಸಂಜೀವಿನಿ ಪರ್ವತ ತಂದು ಬದುಕಿಸಿದ.

**ಶ್ರೀಮಧ್ವಾಚಾರ್ಯರೂ–**

**ಯೋ ವಿಪ್ರಲಂಭವಿಪರೀತಮತಿಪ್ರಭೂತಾನ್ ।**
**ವಾದಾನ್ ನಿರಸ್ಯ ಕೃತವಾನ್ ಭುವಿ ತತ್ತ್ವವಾದಮ್ ॥**

ಮಿಥ್ಯಾಜ್ಞಾನದ ವಿಷಗಾಳಿಯಿಂದ ಸಜ್ಜನರು ಮೂರ್ಛೆಗೊಂಡಾಗ ತತ್ತ್ವಜ್ಞಾನವೆಂಬ ಸಂಜೀವಿನಿಯಿಂದ ಬದುಕಿಸಿದರು. ದ್ವಾಪರದಲ್ಲಿ ಭೀಮಸೇನನಾಗಿ ಪಂಚವರ್ಣದ ಸೌಗಂಧಿಕಾ ಪುಷ್ಪವನ್ನು ತಂದುಕೊಟ್ಟರು. ಶಸ್ತ್ರ ಹಿಡಿದು ದುರ್ಯೋಧನಾದಿಗಳನ್ನು ನಿಗ್ರಹಿಸಿದರು. ಕಲಿಯುಗದಲ್ಲಿ ಶ್ರೀಮದಾಚಾರ್ಯರು ಪಂಚಭೇದದ ವೈದಿಕ ಸಿದ್ಧಾಂತವನ್ನು ಸರ್ವಮೂಲಗಳ ರೂಪದಿಂದ ನೀಡಿದರು. ಶಾಸ್ತ್ರ ಹಿಡಿದು ಅನ್ಯಥಾಜ್ಞಾನದೊಂದಿಗೆ ಹೋರಾಡಿದರು. ಈ ಸರ್ವಮೂಲಗಳು ತತ್ವಜ್ಞಾನ ವೃಕ್ಷದ ಬೇರುಗಳು. ಬೇರಿಗೆ ನೀರು ಹಾಕಿದರೆ ಮರ ಫಲಪುಷ್ಪಭರಿತವಾಗುತ್ತದೆ.

* * *

## 5. ಗೀತೆಯ ಮಹಾ ಸಂದೇಶ

ಲೋಕದಲ್ಲಿ ನಾಸ್ತಿಕರು ದೇವರಿಲ್ಲ ಎಂದು ಸ್ಪಷ್ಟವಾಗಿ ಹೇಳಿ, ಪ್ರತ್ಯಕ್ಷವಾಗಿರುವ ಪ್ರಕೃತಿಯ ವಸ್ತುಗಳಲ್ಲೇ ನಾವು ದೇವರನ್ನು ಕಲ್ಪನೆ ಮಾಡಿಕೊಳ್ಳುತ್ತೇವೆ ಎನ್ನುತ್ತಾರೆ. ಅದನ್ನು ಇತರರು ಒಪ್ಪಬಹುದು ಅಥವಾ ಒಪ್ಪದಿರಬಹುದು. ಆದರೆ ದೇವರಿದ್ದಾನೆಂದು ಹೇಳಿ, ಅದನ್ನು ವೇದಶಾಸ್ತ್ರಾದಿಗಳೆಲ್ಲದರಿಂದಲೂ ಸಮರ್ಥಿಸಿ, ಕೊನೆಗೆ ಇದೆಲ್ಲವೂ ಕೇವಲ ಅವಿದ್ಯೆಯೆಂದು ಹೇಳುವ ಪ್ರಚ್ಛನ್ನ ನಾಸ್ತಿಕರ ಮತವು ಬಹು ಭಯಂಕರವಾದುದು. ವೇದಶಾಸ್ತ್ರಾದಿಗಳೂ ಮಿಥ್ಯ. ಪೂಜೆಮಾಡುವ ಆರಾಧಕನೂ, ಆರಾಧ್ಯ ದೇವತೆಯೂ ಕೇವಲ ತೋರಿಕೆಯವಾದರೆ ಅಂತಹ

ಆರಾಧನೆ, ಪೂಜೆ, ನಂಬಿಕೆ ಇವುಗಳಿಂದ ಅಧೋಗತಿಯೇ ಅಲ್ಲದೆ ಮತ್ತೇನು ಪ್ರಯೋಜನವುಂಟಾದೀತು? ಆದುದರಿಂದ ಜೀವನು–

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ॥**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥**

ಲೋಕದಲ್ಲಿ ಪ್ರಾಣಿಗಳ ಸರ್ವ ವ್ಯಾಪಾರಗಳೂ ಯಾವ ಪರಮಾತ್ಮನಿಂದ ಆಗುತ್ತವೆಯೋ, ಈ ಚರಾಚರಾತ್ಮಕವಾದ ಜಗತ್ತು ಯಾವ ಪರಮಾತ್ಮನಿಂದ ವ್ಯಾಪ್ತವಾಗಿದೆಯೋ, ಆ ಭಗವಂತನನ್ನು ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳಿಂದ ಪೂಜಿಸಿ, ಮೋಕ್ಷವನ್ನು ಹೊಂದಬೇಕು. ಅಲ್ಲದೆ–

"ನನ್ನ ಅಜ್ಞಾನವು ಹೋಗಿ ಜ್ಞಾನ ಬಂದರೆ ಸಂಸಾರ ಬಂಧವು ತನಗೆ ತಾನೇ ನಿವೃತ್ತಿಯಾಗುತ್ತದೆ. ಅದೇ ಮುಕ್ತಿ. ಮುಕ್ತಿಗಾಗಿ ದೇವರೆಂಬ ವ್ಯಕ್ತಿಯ ಪ್ರಸಾದ ಅಥವಾ ಅನುಗ್ರಹದ ಆವಶ್ಯಕತೆಯೇನಿಲ್ಲ." ಹೀಗೆಂದು ಭಾವಿಸುವುದು ಕೇವಲ ಭ್ರಮೆ. ರಾತ್ರಿಯಲ್ಲಿ ಘನೀಭೂತವಾಗಿ ಜಗತ್ತನ್ನೆಲ್ಲ ವ್ಯಾಪಿಸಿರುವ ಕತ್ತಲೆ ಹೋಗಿ ಪ್ರಕಾಶವುಂಟಾಗಲು ಸೂರ್ಯನಾರಾಯಣನ ಅನುಗ್ರಹವಾಗಿ, ತನ್ಮೂಲಕ ಆ ಅಂಧಕಾರವು ಓಡಿಸಲ್ಪಟ್ಟು, ದಿವ್ಯ ಜ್ಯೋತಿಯ ಪ್ರಭಾವದಿಂದ ಬೆಳಕು ಬರಬೇಕಲ್ಲದೆ ಕತ್ತಲೆ ಹೋಗಲಿಕ್ಕಾಗಲೀ, ಬೆಳಕು ಬರಲಿಕ್ಕಾಗಲೀ ಬೇರೊಂದು ಸಾಧನವಿಲ್ಲ, ಮುಕ್ತಿಗೆ ಭಗವಂತನ ಪ್ರಸಾದ ಅವಶ್ಯಕ. ಅಂತಹ ಪ್ರಸಾದವಾಗಲು ಭಕ್ತಿ ಆವಶ್ಯಕ. ಆ ಭಕ್ತಿಯು ಮಾಹಾತ್ಮ್ಯಜ್ಞಾನ ಪೂರ್ವಕವಾದುದೂ, ಸುದೃಢವಾದುದೂ, ನಿಷ್ಕಪಟವಾದುದೂ ಆಗಿರಬೇಕು. ಅಂತಹ ಭಗವತ್ಪ್ರಸಾದ ಅವಶ್ಯಕವಿಲ್ಲ ಎಂದು ಹೇಳತಕ್ಕದ್ದು ಕೃತಘ್ನತಾ ಭಾವವಲ್ಲದೆ ಅನ್ಯಥಾ ಅಲ್ಲ. ಆದುದರಿಂದ ಶ್ರೀಕೃಷ್ಣ ಪರಮಾತ್ಮನು ಅರ್ಜುನನನ್ನು ಕುರಿತು–

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋऽಸಿ ಮೇ ॥**

"ನೀನು ನನಗೆ ಅತ್ಯಂತ ಪ್ರೀತಿಪಾತ್ರನಾದ್ದರಿಂದ ಹೇಳುತ್ತೇನೆ ಕೇಳು. ನನ್ನಲ್ಲಿ ನಿಶ್ಚಲ ಮನವುಳ್ಳವನಾಗು, ನನ್ನ ಪ್ರೀತಿಗೋಸ್ಕರವೇ ಯಜ್ಞ ಮಾಡು. ನನ್ನ ಮಾಹಾತ್ಮ್ಯಜ್ಞಾನಪೂರ್ವಕ ನಮಸ್ಕಾರ ಮಾಡು. ಹೀಗಾದರೆ ತಪ್ಪದೆ

ನನ್ನನ್ನು ಹೊಂದೇತೀರುವೆ. ಇದನ್ನು ಪ್ರತಿಜ್ಞೆ ಮಾಡಿ ಹೇಳುತ್ತೇನೆ", ಎಂಬುದಾಗಿ ಅಪ್ಪಣೆ ಕೊಡಿಸಿದ್ದಾನೆ. ಭಗವಂತನ ಈ ಮಾತುಗಳನ್ನೂ ಅದರಿಂದ ಬೋಧವಾಗುವ ಧ್ವನಿಯನ್ನೂ ಅಲಕ್ಷಮಾಡದೆ, ಶ್ರೀ ಮದಾಚಾರ್ಯರ ಅನುಗ್ರಹದಿಂದ ದೊರೆತ ಜ್ಞಾನವನ್ನು ಆಸ್ತಿಕ ಮಹಾಶಯರಲ್ಲಿ ಬೇರೂರಲಿಕ್ಕಾಗಿಯೇ ಶ್ರಮಿಸಿ ಕೃತಾರ್ಥರಾಗಬೇಕು.

* * *

## 6. ಯತ್ನಶೀಲ ಬದುಕಿನ ಸಂದೇಶ ಮಧ್ವರದ್ದು

ಹೆತ್ತವರ ಸಂಬಂಧ ಒಂದು ಜನ್ಮಕ್ಕಾದರೆ ದೇವರು- ಗುರುಗಳ ಸಂಬಂಧ ಜನ್ಮಜನ್ಮಾಂತರಕ್ಕೂ ಉಳಿಯುವಂತಹದ್ದು. ಶ್ರೀಮಧ್ವಾಚಾರ್ಯರು ವೇದವ್ಯಾಸರ ಸಿದ್ಧಾಂತವನ್ನು ಪ್ರಸಾರ ಮಾಡಿರುವ ಜಗದ್ಗುರುಗಳು. ಅವರು ಜನ್ಮ-ಜನಕ್ಕೂ ನಮ್ಮ ಗುರುಗಳಾಗಿರಬೇಕು.

**'ಪರಮಾತ್ಮ ವಿಶ್ವತಃಚಕ್ಷು.'** ನಾವು ಮಾಡಿದ್ದೆಲ್ಲವನ್ನೂ ಅವನು ನೋಡುತ್ತಿರುತ್ತಾನೆ. ಅವನ ಕಣ್ಣು ತಪ್ಪಿಸಿ ನಾವೇನನ್ನೂ ಮಾಡಲಾರೆವು. ಈ ಭಗವತ್ಪ್ರಜ್ಞೆಯಿಂದ ನಮ್ಮಲ್ಲಿ ಅಕೃತ್ಯ, ಅನೀತಿ, ಅನ್ಯಾಯಗಳು ಕಡಿಮೆಯಾದಾವು. ಅದನ್ನು ಮರೆತು ಕೇವಲ ಭೌತಿಕ ವಾದವನ್ನು ಅನುಸರಿಸಿ ಎಷ್ಟು ಕಾಯಿದೆ ಕಾನೂನುಗಳನ್ನು ಮಾಡಿದರೂ ಅನ್ಯಾಯಗಳನ್ನು ತಡೆಯುವುದು ಸಾಧ್ಯವಿಲ್ಲ. ಕಾನೂನು ಕುರುಡನ ಕೈಯಲ್ಲಿರುವ ಬಡಿಗೆಯಂತೆ. ದುಷ್ಟರ ಮೇಲೆ ಹೇಗೋ ಹಾಗೆ ಸಜ್ಜನರ ಮೇಲೂ ಅಂತಹ ಕಾನೂನಿನ ಪ್ರಯೋಗವಾಗಬಹುದು. ಸ್ವಾರ್ಥಕ್ಕಾಗಿ ಮತ್ತೊಬ್ಬರ ಹಿಂಸೆಯನ್ನು ಏಕೆ ನಡೆಸಬಾರದು? ಎನ್ನುವ ಅಂತರಾಳದ ಪ್ರಶ್ನೆಗೆ ಜಡವಾದವು ಯಾವ ಉತ್ತರವನ್ನೂ ನೀಡಲಾರದು.

ಶ್ರೀಮದಾಚಾರ್ಯರು ತತ್ತ್ವಜ್ಞಾನದ ದೀವಿಗೆಯನ್ನು ಕೊಟ್ಟಿದ್ದಾರೆ. ಎಷ್ಟು ದೊಡ್ಡ ದೀವಟಿಕೆಯಾದರೂ ಅದನ್ನು ಹಿಡಿದು ನಿಂತಲ್ಲೇ ನಿಂತರೆ ದೂರದ ಕತ್ತಲೆ ನಾಶವಾಗದು. ಅದನ್ನು ಹಿಡಿದು ಚಲಿಸಬೇಕು. ಇಂತಹ ಪ್ರಯತ್ನಶೀಲ ತತ್ತ್ವಜ್ಞಾನವನ್ನು ಕೊಟ್ಟವರು ಶ್ರೀ ಮಧ್ವಾಚಾರ್ಯರು.

* * *

## 7. ಭಗವಂತ ನಿರ್ಗುಣನೇ?

**'ಏಕೋ ದೇವಃ ಸರ್ವಭೂತೇಷು ಗೂಢಃ......ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ'** ಎನ್ನುವ ಶ್ರುತಿ ಮೊದಲು ಭಗವಂತನಲ್ಲಿ ಗುಣಗಳನ್ನು ಅನುವಾದ ಮಾಡಿ ನಂತರ **'ನಿರ್ಗುಣಶ್ಚ'** ಎಂದು ಹೇಳುವ ಮೂಲಕ ಅದನ್ನು ಅಲ್ಲಗಳೆಯುತ್ತದೆ ಎನ್ನುವ ಅದ್ವೈತಗಳ ಅರ್ಥ ಸರಿಯಲ್ಲ. ವಾದಿರಾಜರು ಈ ಮಂತ್ರವನ್ನು ಅರ್ಥೈಸುತ್ತಾ ಮೊದಲು ಭಗವಂತನ ಗುಣಗಳನ್ನೆಲ್ಲಾ ವಿವರಿಸಿ ಕಡೆಗೆ **'ನಿರ್ಗುಣಶ್ಚ'** ಎಂದು ಚಕಾರದೊಡನೆ ಹೇಳಿದ್ದರಿಂದ ಭಗವಂತ ನಿರ್ಗುಣನೂ ಆಗಿದ್ದಾನೆ ಎಂದು ತಿಳಿಸುತ್ತಿದೆ. ಗುಣಗಳೊಂದಿಗೆ ಈ ನಿರ್ಗುಣತ್ವವನ್ನು ಸೇರಿಸುತ್ತಿರುವುದರಿಂದ ನಿರ್ಗುಣತ್ವವು ಭಗವಂತನ ಒಂದು ಗುಣವೇ ಎಂದು ತಿಳಿಸಿದಂತಾಗುತ್ತದೆ. ಆದ್ದರಿಂದ ಬ್ರಹ್ಮನಿರ್ಗುಣ ಎಂದರೆ ಕೇವಲ ಪ್ರಾಕೃತಗುಣರಹಿತನಾಗಿದ್ದಾನೆಂದಷ್ಟೇ ಅರ್ಥವೇ ಹೊರತು ಸರ್ವಥಾ ಗುಣರಹಿತನೆಂದಲ್ಲ.

* * *

## 8. ಎರಡು ಅಂಶಗಳ ಸೂತ್ರ

ಬದುಕು ಒಂದು ರಥ, ರಥ ಸಾಗಲು ಎರಡೂ ಚಕ್ರಗಳು ಬೇಕು. ಜೀವನ ರಥಕ್ಕೂ ಹಾಗೆಯೇ. ದೈವಪೌರುಷಗಳೆಂಬ ಎರಡೂ ಚಕ್ರಗಳು ಬೇಕು.

ನನ್ನ ಆಗುಹೋಗುಗಳಿಗೆಲ್ಲ ನಾನೇ ಬಾಧ್ಯ; ನಾನು ನಡೆಸುವಂತಹದ್ದೆಲ್ಲ ನನ್ನಿಂದಲೇ ನಡೆಯುವಂತಹವು-ಎಂಬ ಅಹಂಕಾರವೂ ಇರಬಾರದು; ಎಲ್ಲವನ್ನೂ ಭಗವಂತನೇ ಮಾಡುವವನು; ಇಲ್ಲಿ ನಾನು ಮಾಡಬೇಕಾದದ್ದು ಏನೂ ಇಲ್ಲ ಎಂಬ ನಿಷ್ಕ್ರಿಯತೆಯ ಭಾವನೆಯೂ ಸಲ್ಲದು. ಜಗತ್ತೆಲ್ಲ ಪಾರಮಾರ್ಥಿಕ ಸತ್ಯವಾಗಿದ್ದು, ಅದರಲ್ಲಿ ನನ್ನ ಪಾಲಿಗೆ ಒದಗಿಬಂದ ಕರ್ತವ್ಯವನ್ನು ನಾನು ನಿರ್ವಹಿಸಲೇಬೇಕು-ಎಂಬ ಕರ್ತವ್ಯಪ್ರಜ್ಞೆಯ ಜೊತೆಗೆ ನನ್ನಿಂದ ಏನು ನಡೆಯಬೇಕಾದರೂ ಸ್ವತಂತ್ರನಾದ ಭಗವದನುಗ್ರಹವಿದ್ದರಷ್ಟೆ ಸಾಧ್ಯ ಎಂಬ ವಿನೀತತೆಯು ಆವಶ್ಯಕ.

ಸುಮಾರು ಏಳುನೂರು ವರ್ಷಗಳ ಹಿಂದೆ ಅವತರಿಸಿದ ಶ್ರೀಮಧ್ವಾಚಾರ್ಯರು ನೀಡಿದ ಪ್ರಮುಖ ಸಂದೇಶಗಳಲ್ಲೊಂದು ಈ ಸಂದೇಶ. **'ಮಹಾಪ್ರಯತ್ನವರ್ಜಿತಾಃ ಹರೇರನುಗ್ರಹೋಜ್ಝಿತಾಃ । ಜನಾ ನ ಜಗ್ಮುರುನ್ನತಿಂ-'**

ಭಗವದ್ಗೀತೆಯ ಉಪಸಂಹಾರದ ಶ್ಲೋಕದಲ್ಲಿ ಈ ಸಂದೇಶವನ್ನು ಸೂಚಿಸಲಾಗಿದೆ- **'ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ । ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥'** ಅನುಗ್ರಹೋನ್ಮುಖನಾದ ಭಗವಂತ ಹಾಗೂ ಕರ್ತವ್ಯೋನ್ಮುಖನಾದ ನರ (ನರರನ್ನು ಪ್ರತಿನಿಧಿಸುವ ಅರ್ಜುನನಲ್ಲಿಯ ಧನುರ್ಧಾರಿತ್ವದಿಂದ ಕರ್ತವ್ಯೋನ್ಮುಖತೆಯು ಧ್ವನಿತವಾಗುವುದು) ಎಲ್ಲಿಯೋ ಅಲ್ಲಿ ಜಯ, ಸಂಪತ್ತು, ನೀತಿ ಮೊದಲಾದವುಗಳೆಲ್ಲ ಸಿದ್ಧಿಸುವವು ಎಂಬುದಾಗಿ.

ಭಕ್ತಿಭಾವನೆ ಹಾಗೂ ಕರ್ತವ್ಯಪ್ರಜ್ಞೆ ಎಂಬ ಎರಡು ಅಂಶಗಳನ್ನೊಳಗೊಂಡ ಸೂತ್ರದ ಮಧ್ವಾಚಾರ್ಯರ ಸಂದೇಶ ಪ್ರಯೋಗಾರ್ಹವೆನಿಸಿದ್ದು ಸರ್ವದೇಶಕಾಲದಲ್ಲೂ ಅಬಾಧಿತವಾಗಿರು-ವಂತಹದ್ದು.

* * *

## 9. ಭಗವತ್ಪ್ರಜ್ಞೆಯಿಂದ ಏನು ಲಾಭ?

**ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ-**

ಎಂದು ಶ್ರೀಮಧ್ವಾಚಾರ್ಯರು ಯತಿಗಳಿಗೆ ವಿಶೇಷವಾಗಿ ವಿಧಿಸಿರುವ ಧರ್ಮ. ಏಕೆಂದರೆ, ಇದೊಂದನ್ನು ಮನಸ್ಸಿನಲ್ಲಿ ದೃಢವಾಗಿ ನಂಬಿಕೊಂಡರೆ ನಮ್ಮ ಸಮಾಜದ ಅನೇಕ ಅವ್ಯವಹಾರಗಳು ನಿಂತು ಹೋಗುತ್ತವೆ. ನಾವು ನಮ್ಮ ಸಮಾಜದ ಕಣ್ಣು ತಪ್ಪಿಸಬಹುದು, ನಮ್ಮ ಮೇಲಧಿಕಾರಿಗೂ ಗೊತ್ತಾಗದಂತೆ ಅವ್ಯವಹಾರಗಳನ್ನು ನಡೆಸಬಹುದು. ಆದರೆ, ದೇವರಿಗೆ ತಿಳಿಯದಂತೆ ಏನೂ ಮಾಡಲಾರೆವು. ಅವನು ರಾತ್ರಿ-ಹಗಲೆನ್ನದೆ ಎಲ್ಲೆಡೆಯೂ ವ್ಯಾಪಿಸಿದ್ದಾನೆ. ಯಾರ ಕಣ್ಣು ತಪ್ಪಿಸಿದರೂ ಅವನ ಕಣ್ಣು ತಪ್ಪಿಸಿ ಯಾರೂ ಏನನ್ನೂ ಮಾಡಲಾರರು. ಇಂದು ಲಂಚಾವತಾರ

ರಾಜಕೀಯದಲ್ಲಿ ಮಾತ್ರವಲ್ಲ ಎಲ್ಲ ಕ್ಷೇತ್ರಗಳಲ್ಲೂ ಹರಡಿಕೊಂಡಿವೆ. ದೇವರ ಬಗ್ಗೆ ನಂಬಿಕೆ ದೃಢವಾದಂತೆಲ್ಲ ಈ ಪಿಡುಗು ತನ್ನಿಂದ ತಾನಾಗಿಯೇ ನಿಲ್ಲುತ್ತದೆ.

ದೇವರ ನಂಬಿಕೆಯಿಂದ ಉಂಟಾಗುವ ಇನ್ನೊಂದು ಸಾಮಾಜಿಕ ಪರಿವರ್ತನೆ–ಸಮಾಜಸೇವೆ–ದೇವರು ದೊಡ್ಡವನು, ಅವನಿಂದಾಗಿಯೇ ಎಲ್ಲವೂ ನಡೆಯುತ್ತದೆ. ಅಂತಹ ದೇವರಿಗೆ ನಾವು ಹೇಗೆ ಕೃತಜ್ಞತೆಯನ್ನು ಅರ್ಪಿಸುವುದು? ಯಾವ ಪ್ರತ್ಯುಪಕಾರವನ್ನು ಮಾಡುವುದು?

ದೇವರಿಗೆ ನಮ್ಮ ಕೃತಜ್ಞತೆಯ ಅಗತ್ಯವಾಗಲೀ ಪ್ರತ್ಯುಪಕಾರದ ಅಪೇಕ್ಷೆಯಾಗಲೀ ಇಲ್ಲ. ಆದರೂ ನಾವು ಅವನಿಗೆ ಅದನ್ನು ಮಾಡಬಯಸುವುದಾದಲ್ಲಿ ಅವನು ಸೃಷ್ಟಿ ಮಾಡಿದ ಈ ಪ್ರಪಂಚಕ್ಕೆ ನಮ್ಮ ಕೈಲಾದ ಸೇವೆಯನ್ನು ಸಲ್ಲಿಸಬೇಕು. **'ತಸ್ಯ ಪ್ರಾಣ್ಯುಪಕಾರೇಣ ಪ್ರೀತೋ ಭವತಿ ಕೇಶವಃ'**. ಇದೇ ದೇವರು ನಮ್ಮಿಂದ ಬಯಸುವ ಪ್ರತ್ಯುಪಕಾರ.

ಒಮ್ಮೆ ಅನೇಕ ಸಾಧುಗಳು ಗಂಗಾಸ್ನಾನವನ್ನು ಮಾಡಿ ದಕ್ಷಿಣಭಾರತದಲ್ಲಿರುವ ತಮ್ಮ ಊರಿನ ದೇವರಿಗೆ ಅಭಿಷೇಕ ಮಾಡಲು ಗಂಗಾಜಲವನ್ನು ಹೊತ್ತು ತರುತ್ತಿದ್ದರು. ಮಧ್ಯದಲ್ಲಿ ಒಂದು ಒಂಟೆ ಬೇಸಿಗೆಯಿಂದ ಬಳಲಿ ನೀರಡಿಕೆಯಿಂದ ಪ್ರಾಣ ಬಿಡುವ ಸ್ಥಿತಿಯಲ್ಲಿತ್ತು. ಅದನ್ನು ನೋಡಿದ ಒಬ್ಬ ಸಾಧು ತನ್ನ ತಲೆಯ ಮೇಲಿದ್ದ ಗಂಗಾ ಜಲವನ್ನು ಒಂಟೆಯ ಬಾಯಿಯಲ್ಲಿ ಸುರಿದ. ಜೊತೆಗಿದ್ದ ಸಾಧುಗಳು ಅವನನ್ನು ಜರೆದರು. ಆಗ ಸಾಧು ಹೇಳಿದ– ನಮ್ಮೂರಿನ ದೇವರನ್ನು ನಾನು ಈ ಒಂಟೆಯ ಬಾಯಿಯಲ್ಲಿ ಕಂಡೆ. ನಾನು ಸುರಿದ ಗಂಗಾಜಲ ನೇರವಾಗಿ ದೇವರಿಗೆ ಸೇರಿದೆ– ಎಂದು. ಹೀಗೆ ಭಗವತ್ಪ್ರಜ್ಞೆಯಿಂದ ವೈಯಕ್ತಿಕ ಹಾಗೂ ಸಾಮಾಜಿಕ ಎರಡೂ ವಿಧದ ಲಾಭವಿದೆ.

* * *

# ಸಾಹಿತ್ಯ ಸೌರಭ



ಗದಾ-ಚಕ್ರ-ಶಂಖ-ಪದ್ಮಧಾರಿಯಾದ **'ರಮಾ'**ಪತಿ **'ತ್ರಿವಿಕ್ರಮ'**



## ಭಗವಂತನ ನೃತ್ಯಮಂದಿರ

ನಮ್ಮ ಹೃದಯವು ಭಗವಂತನ ನೃತ್ಯಮಂದಿರವಾಗಬೇಕಾದರೆ ಪರಮಾತ್ಮನಿಗೆ ಪ್ರಿಯವಾದ ಸದ್ಗುಣಗಳಿಂದ ಇದನ್ನು ಸಿಂಗರಿಸಬೇಕು. ಮಗುವಿಗೆ ಬೇಕಾದ ತಿಂಡಿ ಮಿಠಾಯಿಗಳು ಸುಂದರ ಆಟಿಕೆಗಳು ನಮ್ಮಲ್ಲಿದ್ದರೆ ಮಗುವು ನಮ್ಮ ಕಡೆಗೆ ಓಡಿ ಬರುವುದು. ಹೊಲಸು ಪದಾರ್ಥಗಳಿಂದ ತುಂಬಿದ ಜಾಗವು ಕ್ರಿಮಿಕೀಟಗಳ ಆವಾಸ ಸ್ಥಾನವೇ ಆಗುವುದು. ಹೃದಯವು ದುರ್ಗುಣಗಳಿಂದ ದೂಷಿತವಾದರೆ ಆಸುರೀಶಕ್ತಿಗಳ ರುದ್ರತಾಂಡವ ಭೂಮಿ ಎನಿಸುವುದು. ನಮ್ಮ ಹೃದಯವು ಸದ್ಗುಣಗಳಿಂದ ತುಂಬಿದ್ದು ಬಾಲಗೋಪಾಲನ ನೃತ್ಯಮಂದಿರವಾಗುವಂತೆ, ಅದನ್ನು ಸದ್ಗುಣ ಸತ್ಕೃತಿಗಳಿಂದ ಅಲಂಕರಿಸೋಣ.

**- ಶ್ರೀ ವಿಶ್ವೇಶತೀರ್ಥಶ್ರೀಪಾದರು**

## 1. ರಾಮಾಯಣ–ಸೀತಾಚರಿತ–ರಾವಣ ವಧ

ಸೀತಾರಾಮರ ಜೀವನವು ವಿಶ್ವದ ನರನಾರಿಯರಿಗೆಲ್ಲ ಆದರ್ಶಪ್ರಾಯವಾದ ಉದಾತ್ತ ಉಜ್ವಲ ವ್ಯಕ್ತಿತ್ವವನ್ನು ಚಿತ್ರಿಸುವುದಕ್ಕಾಗಿಯೇ ವಾಲ್ಮೀಕಿ ಋಷಿಗಳು ರಾಮಾಯಣ ಕಾವ್ಯವನ್ನು ರಚಿಸಿದ್ದಾರೆ. ಈ ಕಾವ್ಯಕ್ಕೆ 'ರಾಮಾಯಣ' 'ಸೀತಾಚರಿತ' 'ರಾವಣವಧ' ಎಂಬುದಾಗಿ ಮೂರು ಹೆಸರುಗಳನ್ನು ರಾಮಾಯಣದಲ್ಲಿ ನಾವು ಕಾಣಬಹುದು. ಇದು ಪುರುಷೋತ್ತಮನಾದ ರಾಮನ ಚರಿತ್ರೆಯಾಗಿರುವಂತೆ ಆದರ್ಶ ಮಹಿಳಾಮಣಿಯಾದ ಸೀತೆಯ ಚರಿತ್ರೆಯೂ ಆಗಿದೆ. ರಾವಣನ ವಧೆಯನ್ನು ನಿರೂಪಿಸಿ ಜನರ ಅಂತರಂಗದಲ್ಲಿ ಮೂಡಬಹುದಾದ ದುಷ್ಟತನವನ್ನು ಉಚ್ಚಾಟಿಸುವುದೇ ಈ ಕಾವ್ಯದ ಧ್ಯೇಯವಾಗಿದೆ. ನರನಾರಿಯರಲ್ಲಿ ಸ್ವಾರ್ಥ, ಕ್ರೌರ್ಯ, ಆಕ್ರಮಣ ಪ್ರವೃತ್ತಿ ಮುಂತಾದ ದುರ್ಗುಣಗಳನ್ನು ನಿರ್ಮೂಲಿಸಿ ಶ್ರೀರಾಮ ಸೀತೆಯರ ಆದರ್ಶ ವ್ಯಕ್ತಿತ್ವವನ್ನು ರೂಪಿಸುವುದೇ ರಾಮಾಯಣದ ಉದ್ದೇಶವಾಗಿದೆ.

ಇಂಥಹ ಗುಣಶೀಲ ಸಂಪನ್ನವಾದ ಸೀತಾರಾಮರ ವ್ಯಕ್ತಿತ್ವವನ್ನು ಪ್ರಶ್ನಿಸಿ ಕೆದಕಿ ಆಕ್ಷೇಪಿಸುವ ಪ್ರವೃತ್ತಿಗಳನ್ನು ನಾವು ಈಗಲೂ ನೋಡುತಿದ್ದೇವೆ. ಸೀತೆಯ ಅಗ್ನಿಪರೀಕ್ಷೆಯು ರಾಮಾಯಣದ ಯುದ್ಧಕಾಂಡದಲ್ಲಿ ಮುಕ್ತಾಯವಾಗಲಿಲ್ಲ. ಇಂದಿನವರೆಗೂ ಈ ಅಗ್ನಿಪರೀಕ್ಷೆಯು ನಡೆಯುತ್ತಲೇ ಇದೆ. ವಿಮರ್ಶೆಯ ಮೂಸೆಯಲ್ಲಿ ಇಟ್ಟಷ್ಟೂ ರಾಮಸೀತೆಯರ ವ್ಯಕ್ತಿತ್ವವು ಇನ್ನೂ ಹೆಚ್ಚು ಪರಿಶುಭ್ರವೂ, ಪ್ರಕಾರವೂ ಆಗಿ ಕಂಗೊಳಿಸುತ್ತದೆ. ರಾಮಸೀತೆಯರ ಪರಿಶುದ್ಧ ವ್ಯಕ್ತಿತ್ವಕ್ಕೆ ರಾಡಿ ಎರಚುವ ಪ್ರಯತ್ನದಿಂದ ಅವರ ಜೀವನವನ್ನು ಅಧ್ಯಯನ ಮಾಡಿ ಅವರ ಮಹಾವ್ಯಕ್ತಿತ್ವವನ್ನು ತಿಳಿದು ಜನರಿಗೆ ಪ್ರಸಾರಗೊಳಿಸಲು ಉತ್ತಮ ಅವಕಾಶ ದೊರಕಿದೆಯೆಂದು ನಾವು ಭಾವಿಸುತ್ತೇವೆ.

* * *

## 2. ವಾದಿರಾಜರ ವಾಙ್ಮಯದ ಶ್ರೇಷ್ಠತೆ

ಪಂಡಿತರು, ಸಂಸ್ಕೃತ ಬಲ್ಲವರನ್ನು ತಣಿಸಲು ಆಧ್ಯಾತ್ಮ ವಿಷಯಗಳನ್ನು ಮಧ್ವಸಿದ್ಧಾಂತದ ಪ್ರತಿಷ್ಠಾಪನೆಗಾಗಿ ಪ್ರೌಢಶಾಸ್ತ್ರ ಗ್ರಂಥಗಳಲ್ಲಿ ತುಂಬಿಟ್ಟು

ಕರುಣೆ ತೋರಿದರು. ಕನ್ನಡಬಲ್ಲ ಪ್ರಬುದ್ಧರಿಗೆಂದು ಶಾಸ್ತ್ರಾರ್ಥಗಳನ್ನು ಒಳಗೊಂಡ ಲಕ್ಷ್ಮೀಶೋಭಾನೆ ಯಂಥ ಕನ್ನಡ ಕಾವ್ಯಾತ್ಮಕ ಕೃತಿಯನ್ನು ರಚಿಸಿ ಉಪಕಾರ ಮಾಡಿದರು. ಸಾಮಾನ್ಯ ಜನರಿಗಾಗಿ ಭಕ್ತಿಯಿಂದ ಹಾಡಿ ಭಗವಂತನನ್ನು ಒಲಿಸಿಕೊಳ್ಳಲೆಂದು ಕನ್ನಡ ಹಾಡುಗಬ್ಬಗಳನ್ನು ರಚಿಸಿ ಅನುಗ್ರಹಿಸಿದರು. ಪಾಮರರಿಗೊಂದು, ಕನ್ನಡವೂ ಬಲ್ಲದವರಿಗೆಂದು ತುಳು ಭಾಷೆಯಲ್ಲಿ ಹಾಡುಗಳನ್ನು ಕಟ್ಟಿಕೊಟ್ಟು ಉದ್ಧರಿಸಿದರು. ಇಂಥವರು ನಿಜವಾದ ಕಾರುಣ್ಯಮೂರ್ತಿ.

ರುಗ್ಮೀಣೀಶವಿಜಯವೆಂಬ ಮಹಾಕಾವ್ಯವನ್ನು ರಚಿಸಿ ಶಾಸ್ತ್ರ ಪ್ರಮೇಯಗಳನ್ನು ಕಾವ್ಯಮಯವಾಗಿ ಬಣ್ಣಿಸಿ ಮನದಟ್ಟಾಗಿಸಿದರು. ಕಾವ್ಯದಲ್ಲಿ ಬರುವ ಅನೇಕ ಸಂದರ್ಭಗಳನ್ನು ಅನೇಕ ತತ್ತ್ವಗಳ ಉಪದೇಶಕ್ಕಾಗಿ ಆರಿಸಿಕೊಂಡ ವಿಪುಲ ಉದಾಹರಣೆಗಳು ನಮಗೆ ದೊರೆಯುತ್ತವೆ. ಉಗ್ರಸೇನನು ತಾನಿಚ್ಛಿಸುವ ಸಾಮ್ರಾಜ್ಯ ಇತರ ಎಲ್ಲರೂ ಬಯಸುವಂತಹ ಭೌತಿಕ ಸಾಮ್ರಾಜ್ಯವಲ್ಲ ಬದಲಿಗೆ ಅದೊಂದು ಎಂದೂ ಸೋಲದ ಅಧ್ಯಾತ್ಮ ಸಾಮ್ರಾಜ್ಯ ಎಂದು ಹೇಳುತ್ತಾ ಆ ಸಾಮ್ರಾಜ್ಯಕ್ಕೆ ಸೈನ್ಯ, ಬೊಕ್ಕಸ, ಛತ್ರ ಮುಂತಾದವು ಯಾವುವು ಎಂಬುದನ್ನು ವರ್ಣಿಸಿ ದೊಡ್ಡ ಪ್ರಮೇಯ ವಿಚಾರಗಳನ್ನೇ ತೆರೆದು

ತೋರಿಸುವುದನ್ನು ಶ್ರೀವಾದಿರಾಜರ ವಿದ್ವತ್ತು ಕವಿತ್ವ ರುಗ್ಮೀಣೀಶವಿಜಯ ಸೊಗಸಾಗಿ ಮೂಡಿಸುತ್ತದೆ.

* * *

## 3. ಕ್ರೋಧ ಸಂವತ್ಸರದ ಶಾಂತಿ ಸಂದೇಶ

ಜನರ ಹೃದಯದಲ್ಲಿ ಹೊಸ ಹರುಷ ಹಾಗೂ ಹುರುಪನ್ನು ನೀಡುತ್ತ ಆಗಮಿಸಿರುವ ಯುಗಾದಿಯನ್ನು ನಾವು ಸಂಭ್ರಮದಿಂದ ಸ್ವಾಗತಿಸುವವು. ವರ್ಷಾರಂಭವು ನಮಗೆ ಹಿಂದಿನ ವರ್ಷದ ಕರ್ತವ್ಯದ ನಿರೀಕ್ಷಣೆಯ ಪ್ರವೃತ್ತಿಯನ್ನು ನೀಡುವುದಲ್ಲದೆ ಹೊಸವರ್ಷದ ಕರ್ತವ್ಯದ ಸತ್ರಕ್ಕೆ ನಮ್ಮನ್ನು ದೀಕ್ಷಾಬದ್ಧರನ್ನಾಗಿಸುತ್ತದೆ.

"ಅತ್ಯೇತಿ ರಜನೀ ಯಾ ತು ಸಾ ನ ಪ್ರತಿನಿವರ್ತತೇ
ಯಾತ್ಯೇವ ಯಮುನಾ ಪೂರ್ಣಂ ಸಮುದ್ರಮುದಕಾರ್ಣವಮ್"

ಎಂದು ಭಗವಾನ್ ರಾಮಚಂದ್ರನು ಅಪ್ಪಣೆ ಕೊಡಿಸಿದಂತೆ "ಕಳೆದ ರಾತ್ರಿ ಹಗಲುಗಳನ್ನು ನಾವು ತಿರುಗಿ ಪಡೆಯಲಾರೆವು. ನಮ್ಮನ್ನು ಹಾಯ್ದು ಹರಿದುಹೋಗುವ ನದಿಯ ನೀರು ತಿರುಗಿ ಬರಲಾರದು" ಎಂಬ ಮಾತನ್ನು ನಾವು ಸರ್ವದಾ ಗಮನದಲ್ಲಿಟ್ಟುಕೊಳ್ಳಬೇಕು. ನಾವು ಇಂತಹ ದಿನದಲ್ಲಿ ಇಂತಹ ಸತ್ಕಾರ್ಯವನ್ನು ನಡೆಸಬೇಕೆಂದು ಸಂಕಲ್ಪಿಸಿದ ಕರ್ತವ್ಯವು ಕೈಗೂಡದೆಯೇ ಆ ದಿನವು ಉರುಳುತ್ತಿದೆ. ನದಿಯ ನೀರಿನಂತೆ ನಮ್ಮ ಮುಂದೆ ಪ್ರತಿಕ್ಷಣ ನಿಮಿಷಗಳು ಹರಿಯು ನಮ್ಮನ್ನು ಅಣಕಿಸುತ್ತಿವೆ. ನಾವು ಮಾತ್ರ ನದಿಯ ನೀರಿನಲ್ಲಿ ಅದೇ ವೇಗದಿಂದ ಸಾಗಿ ನದಿಯನ್ನೂ ದಾಟಬಲ್ಲ, ಸಮುದ್ರವನ್ನೂ ಮುಟ್ಟಬಲ್ಲ ನಾವೆಗಳಾಗದೆ ನದಿಯ ನೀರಿನಲ್ಲೇ ಮುಳುಗಿ ಏಳುವ ಸ್ಥಿತಿಸ್ಥಾಪಕ ವೃತ್ತಿಯ ಸ್ತಬ್ಧ ಬಂಡೆಗಲ್ಲುಗಳಾಗಿದ್ದೇವೆ. ನವ ವರ್ಷಾರಂಭದಲ್ಲಿ ಕ್ರೋಧಿ ಸಂವತ್ಸರದ ಅಧಿಪತಿಯಾದ ಭಗವಂತನು ನಮ್ಮ ಈ ದೌರ್ಬಲ್ಯದ ವಿರುದ್ಧವಾಗಿ ಕ್ರೋಧವನ್ನು ಹುಟ್ಟಿಸಿ ಕಾಲದ ವೇಗಕ್ಕೆ ಸರಿಯಾದ ಕ್ರಿಯಾವೇಗವನ್ನೂ ಉತ್ಸಾಹಶಕ್ತಿಯನ್ನೂ ನಮಗೆ ದಯಪಾಲಿಸಲೆಂದು ಆಶಿಸುವೆವು.

* * *

## 4. ಸುಧಾದ ಮಹತ್ವ

ಶ್ರೀವೇದವ್ಯಾಸರು ಭಾರತಾದಿ ಅನೇಕ ಗ್ರಂಥಗಳನ್ನು ರಚಿಸಿದ್ದರೂ ಜ್ಞಾನ, ಭಕ್ತಿ, ಕರ್ತವ್ಯಗಳ ಸರಿಯಾದ ನಿರೂಪಣೆಯನ್ನು ಮಾಡಿ ಪರಿಪೂರ್ಣ ಭಾಗವತ ಧರ್ಮವನ್ನು ಬೋಧಿಸುವ ಮಹೋನ್ನತ ಗ್ರಂಥವನ್ನು ಸಜ್ಜನವೃಂದಕ್ಕೆ ನೀಡಬೇಕೆನ್ನುವ ನಾರದರ ಪ್ರಾರ್ಥನೆಯನ್ನು ಮನ್ನಿಸಿ ಭಾಗವತ ಗ್ರಂಥವನ್ನು ರಚಿಸಿದಂತೆ ಬ್ರಹ್ಮಸೂತ್ರಾದಿ ಅನೇಕ ಗ್ರಂಥಗಳನ್ನು ರಚಿಸಿದ್ದರೂ ವಿವಿಧ ವಾದಗಳಿಂದ ಸಜ್ಜನ ವೃಂದದ ಮನಸ್ಸಿನಲ್ಲಿ ಮೂಡುವ ಸಂಶಯ, ವಿಪರ್ಯಯಗಳನ್ನೆಲ್ಲಾ ಪ್ರಬಲವಾದ ಪ್ರಮಾಣಗಳು ಮತ್ತು ತರ್ಕಗಳಿಂದ ಪರಿಹರಿಸಿ ತತ್ವದ ವಿಷಯದಲ್ಲಿ ದೃಢವಾದ ನಿಶ್ಚಯವನ್ನು ನಿರ್ಮಿಸುವ ಮಹಾಗ್ರಂಥವನ್ನು ಸಜ್ಜನರಿಗೆ ಕರುಣಿಸಬೇಕೆನ್ನುವ

ತ್ರಿವಿಕ್ರಮಪಂಡಿತಾಚಾರ್ಯರ ಪ್ರಾರ್ಥನೆಯಂತೆ ಶ್ರೀಮದಾಚಾರ್ಯರು ಅನುವ್ಯಾಖ್ಯಾನವನ್ನು ರಚಿಸಿದರು. ಅನುವ್ಯಾಖ್ಯಾನದ ವಿಸ್ತಾರವಾದ ವ್ಯಾಖ್ಯಾನವಾಗಿ ಟೀಕಾಕೃತ್ಪಾದರು ರಚಿಸಿದ ಸುಧಾಗ್ರಂಥವು ಮಾಧ್ವ ಸಮಾಜದ ಮೇರುಕೃತಿಯಾಗಿದೆ. ಇವೆರಡು ಗ್ರಂಥಗಳು ಸೂರ್ಯಚಂದ್ರರಂತೆ ಎಲ್ಲಾ ಆಧ್ಯಾತ್ಮಿಕ ವಿಷಯಗಳನ್ನು ವಿಶದವಾಗಿ ನಿರೂಪಿಸಿ

ಪ್ರಾಚೀನ ಮತ್ತು ಆಧುನಿಕ ಸವಾಲುಗಳಿಗೆಲ್ಲಾ ಸರಿಯಾದ ವೈಜ್ಞಾನಿಕವಾದ ಉತ್ತರವನ್ನು ನೀಡುವ ಅಪೂರ್ವ ಗ್ರಂಥಗಳಾಗಿವೆ.

* * *

## 5. ಕಾವ್ಯ ವಿನೋದ–'ಕಾವ್ಯಾಲಾಪ'

**"ಕಾವ್ಯಶಾಸ್ತ್ರವಿನೋದೇನ ಕಾಲೋ ಗಚ್ಛತಿ ಧೀಮತಾಮ್'** – ಎಂಬ ಸುಭಾಷಿತದಲ್ಲಿ ವಿವೇಕಿಗಳ ಕಾಲಯಾಪನೆಗೆ ಕಾವ್ಯವಿನೋದವನ್ನೂ ಸಾಧನವನ್ನಾಗಿ ನಿರೂಪಿಸುವ ಮೂಲಕ ಕಾವ್ಯಕ್ಕೆ ಶಾಸ್ತ್ರದ ಮಟ್ಟವನ್ನು ನೀಡಿದ್ದರೆ, **'ಕಾವ್ಯಾಲಾಪಾಂಶ್ಚ ವರ್ಜಯೇತ್'**– ಎಂಬ ಸುಭಾಷಿತದಲ್ಲಿ ಕಾವ್ಯವನ್ನು ಆಲಾಪದ ಹರಟೆಯ ಜೊತೆಗೆ ಸೇರಿಸುವ ಮೂಲಕ ಅಥವಾ ಕಾವ್ಯವನ್ನು ಒಂದು ಬಗೆಯ 'ಆಲಾಪ' 'ಹಾಳು ಹರಟೆ'– ಎಂದೇ ಕರೆಯುವ ಮೂಲಕ ಟೀಕಿಸಲಾಗಿದೆ. ಅಂದರೆ ಕಾವ್ಯಗಳಲ್ಲಿ ಎರಡು ಬಗೆಯ ವ್ಯಕ್ತಿತ್ವವೂ ಇದೆ ಎಂದರ್ಥ.

### 'ವಾಯಸತೀರ್ಥ' 'ಹಂಸತೀರ್ಥ' :–

ಭಾಗವತ (1–5–10 ಹಾಗೂ 12–12–49) ಪ್ರಾರಂಭದಲ್ಲಿ ಹಾಗೂ ಉಪಸಂಹಾರದಲ್ಲಿ – ಹೀಗೆ ಎರಡು ಬಾರಿ ಕಾವ್ಯವನ್ನು **'ವಾಯಸತೀರ್ಥ', 'ಧ್ವಾಂಕ್ಷತೀರ್ಥ'**– ಎಂದೂ **'ಹಂಸತೀರ್ಥ'** ಎಂದೂ ವಿಭಜಿಸಿ ಭಗವಂತನ ಪ್ರಸ್ತಾವ ಇದ್ದರೆ ಅದು ಹಂಸತೀರ್ಥ, ಅವನ ಪ್ರಸ್ತಾವ ಇರದಿದ್ದರೆ ಅದು ಬರೇ ವಾಯಸತೀರ್ಥ, ಧ್ವಾಂಕ್ಷತೀರ್ಥ – ಎಂದು ವಿವೇಚಿಸಿದೆ. ಬದುಕಿನ ಕಾಲಹರಣಕ್ಕಾಗಿ ಮಧ್ವರು ವ್ಯಾಖ್ಯಾನಿಸಿರುವರು – **'ವಾಯಸಂ ತೀರ್ಥಂ ವಯೋಮಾತ್ರಾನುಜೀವಿ ಶಾಸ್ತ್ರಮ್'**– ಭಾಗ. ತಾ. ನಿ.

ಕಾಗೆಯ ಸ್ನಾನಕ್ಕೆ ಉಪಯುಕ್ತವಾಗುವ ನೀರು **'ವಾಯಸತೀರ್ಥ' 'ಧ್ವಾಂಕ್ಷತೀರ್ಥ'** ಎಂದು ನಿಂದಿಸಲ್ಪಟ್ಟರೆ, ಹಂಸಗಳು ವಿಹರಿಸುವ ಸರೋವರ **'ಹಂಸತೀರ್ಥ'** ಎಂದು ಸ್ತುತಿಸಲ್ಪಡುವುದು. ಇಂತಹ ಜಲಾಶಯಗಳ ಛಾಯೆಯ ಧ್ವನಿ ಮೂಡುವಂತೆ ಶಾಸ್ತ್ರವನ್ನು ವಾಯಸತೀರ್ಥ, ಹಂಸತೀರ್ಥ ಎಂದು ವಿಭಜಿಸುವ ಮೂಲಕ ಸಂನ್ಯಾಸಿಗಳೇ ಮುಂತಾದ ಸಾಧಕರ ಕಣ್ಣಿಗೆ ಕಾಣದಂತೆ ಮುಚ್ಚಲ್ಪಡುವಂತಹದ್ದು "ವಾಯಸತೀರ್ಥ ಸಾಹಿತ್ಯ ಎನಿಸಿದರೆ, ಹಂಸಗಳೆನಿಸುವ ಸಂನ್ಯಾಸಿಗಳಿಗೂ ಉಪಯುಕ್ತವಾಗುವ ಸಾಹಿತ್ಯ **'ಹಂಸತೀರ್ಥ'** ಎನಿಸುವುದು.

ಇವುಗಳಲ್ಲಿ **'ಹಂಸತೀರ್ಥ'**–ಎಂಬ ಹೆಗ್ಗಳಿಕೆಗೆ ಪಾತ್ರವಾಗುವ ಕಾವ್ಯವನ್ನು ಇಟ್ಟುಕೊಂಡು **'ಕಾವ್ಯಶಾಸ್ತ್ರವಿನೋದೇನ ಕಾಲೋ ಗಚ್ಛತಿ ಧೀಮತಾಮ್'**– ಎಂದು ವಿವೇಕಿಗಳು ತಮ್ಮ ಕಾಲವನ್ನು ಸಾರ್ಥಕ ಪಡಿಸಿಕೊಳ್ಳುವುದಕ್ಕೆ ಶಾಸ್ತ್ರವನ್ನು ಹೇಗೋ ಹಾಗೆ ಇಂತಹ ಕಾವ್ಯವನ್ನೂ ಶಾಸ್ತ್ರಾನಂದ ರೂಪವಾದ ವಿನೋದದ ಸಂಪಾದಕವಾಗಿ ವಿನಿಯೋಗಿಸಿಕೊಳ್ಳುವರು. – ಎಂದು ಸಾರುವ ಮೂಲಕ **'ಹಂಸತೀರ್ಥ'** ಕಾವ್ಯಗಳನ್ನು ಶಾಸ್ತ್ರದ ಮಟ್ಟಕ್ಕೆ ಏರಿಸಲಾಗಿದೆ.

**'ವಾಯಸತೀರ್ಥ'** – ಎಂಬ ನಿಂದೆಗೆ ಗುರಿಯಾಗಿರುವ ಕಾವ್ಯವನ್ನು ಇಟ್ಟುಕೊಂಡು **'ಕಾವ್ಯಾಲಾಪಾಂಶ್ಚ ವರ್ಜಯೇತ್'** –ಎಂದು ಅಂತಹ ಕಾವ್ಯದ ಉಪಯೋಗ ಎಂದರೆ ನಿರರ್ಥಕವಾದ ಆಲಾಪದಂತೆ, ಅರ್ಥಾತ್ ಹರಟೆಯಂತೆ ಎಂದು ಧ್ವನಿಯನ್ನು ಹೊರಡಿಸುವ ಮೂಲಕ ಅದನ್ನು ಆದಷ್ಟು ದೂರ ಮಾಡಬೇಕೆಂದು ಎಚ್ಚರಿಸಲಾಗಿದೆ.

* * *

## 6. ಹೆಡ್ಡರ ಎಣಿಕೆ

ಒಮ್ಮೆ ಹತ್ತು ಹೆಡ್ಡರ ಗುಂಪೊಂದು ನದಿಯನ್ನು ದಾಟಬೇಕಾದ ಪ್ರಸಂಗ ಒದಗಿ ಬಂತು. ನದಿಯನ್ನು ದಾಟಿದ ಬಳಿಕ ತಮ್ಮಲ್ಲಿ ಯಾರಾದರೂ ನದಿಯಲ್ಲಿ ಮುಳುಗಿದ್ದಿರಬಹುದೇ ಎಂಬ ಸಂದೇಹ ಅವರಲ್ಲಿ ಮೂಡಿತು. ಸಂದೇಹ ಪರಿಹಾರಕ್ಕಾಗಿ ಎಲ್ಲರನ್ನೂ ಸಾಲಾಗಿ ಕುಳ್ಳಿರಿಸಿ, ಅವರಲ್ಲೇ ಒಬ್ಬ ಎಣಿಸಿದ. ತಾವು ಹತ್ತು ಮಂದಿ ಹೊರಟವರು. ಆದರ ಈಗ ಎಣಿಸುವಾಗ

ಒಂಭತ್ತೇ ಮಂದಿ ಲೆಕ್ಕಕ್ಕೆ ಸಿಗುವರು. ಅವನ ಎಣಿಕೆಯು ತಪ್ಪಿರಬೇಕೆಂದು ಮತ್ತೊಮ್ಮೆ ಎಣಿಸಿದ. ಆದರೆ ಆಗಲೂ ಎಣಿಕೆ ಒಂಭತ್ತಕ್ಕೇ ನಿಲ್ಲುವುದು. ಹೀಗೆ ಹತ್ತು ಮಂದಿಯೂ ಪ್ರತ್ಯೇಕವಾಗಿ ಎಣಿಸಿದಾಗಲೂ ಲೆಕ್ಕಕ್ಕೆ ಸಿಗುವುದು ಒಂಭತ್ತೇ ಮಂದಿ. ಹಾಗಾದರೆ ತಮ್ಮಲ್ಲಿ ಒಬ್ಬ ನದಿಯಲ್ಲಿ ಮುಳುಗಿದ್ದಿರಬೇಕೆಂದು ತೀರ್ಮಾನಿಸಿ ಅಳತೊಡಗಿದರು.

ಆ ದಾರಿಯಲ್ಲೇ ಸಾಗುತ್ತಿದ್ದ ದಾರಿಹೋಕನೊಬ್ಬ ಅವರ ಅಳುವಿಕೆಯ ಕಾರಣವನ್ನು ವಿಚಾರಿಸುವನು. ಹತ್ತು ಮಂದಿ ಹೊರಟ ತಮ್ಮಲ್ಲಿ ಒಂಭತ್ತೇ ಮಂದಿ ಉಳಿದುಕೊಂಡಿರುವುದೆಂದು ತೀರ್ಮಾನಿಸಿ ಅವರು ಅಳವಡಿಸಿಕೊಂಡಿದ್ದ ಎಣಿಕೆಯ ಪದ್ಧತಿಯನ್ನು ಕಂಡು ಅವನಿಗೆ ನಗುವು ಬರುವುದು. ಪ್ರತಿಯೊಬ್ಬ ಹೆಡ್ಡನೂ ಎಣಿಸುವಾಗ ತಮ್ಮನ್ನು ಹೊರತು ಪಡಿಸಿ ಉಳಿದವರನ್ನಷ್ಟೇ ಗಣನೆಗೆ ತೆಗೆದುಕೊಂಡಿದ್ದರಿಂದ ಅವರ ಲೆಕ್ಕಕ್ಕೆ ಒಂಭತ್ತೇ ಮಂದಿ ಗೋಚರಿಸಿದ್ದು. ಇದನ್ನು ತಿಳಿಹೇಳಿ ಅವರನ್ನು ಸಮಾಧಾನಿಸಿದ ಆ ವಿವೇಕಿ.

ನಾವು ಬುದ್ಧಿವಂತರು. ಆದರೂ ಒಂದು ವಿಷಯದಲ್ಲಿ ಹೆಡ್ಡರ ಎಣಿಕೆಯ ಪದ್ಧತಿಯನ್ನೇ ಅಳವಡಿಸಿಕೊಳ್ಳುವೆವು. ಸಮಾಜಕ್ಕಾಗಿ ನಾವು ಸಲ್ಲಿಸಬೇಕಾದ ಕರ್ತವ್ಯವದ ವಿಷಯದಲ್ಲಿ ನಮ್ಮದು ಹೆಡ್ಡರ ಎಣಿಕೆಯೇ. ಪ್ರತಿಯೊಬ್ಬ ಹೆಡ್ಡನೂ ತನ್ನನ್ನು ಬಿಟ್ಟು ಉಳಿದವರನ್ನಷ್ಟೇ ಎಣಿಸಿದಂತೆ ಶಿಷ್ಯರು ತಮ್ಮ ಕರ್ತವ್ಯದ ಬಗ್ಗೆ ಏನೂ ಪ್ರಸ್ತಾಪಿಸದ ಮಠಾಧಿಪತಿಗಳು, ಪೀಠಾಧಿಪತಿಗಳು ಸಮಾಜಕ್ಕಾಗಿ ಆ ಕರ್ತವ್ಯವನ್ನು ನಿರ್ವಹಿಸಬೇಕು. ಈ ಕರ್ತವ್ಯವನ್ನು ನಿರ್ವಹಿಸಬೇಕು–ಎಂದು ಬೆಟ್ಟು ಮಾಡಿ ಉಲ್ಲೇಖಿಸಿದರೆ, ಪೀಠಾಧಿಪತಿಗಳು ತಮ್ಮ ಕರ್ತವ್ಯದ ಬಗ್ಗೆ ಏನೂ ಪ್ರಸ್ತಾಪಿಸದೆ ಶಿಷ್ಯ ಸಮಾಜಕ್ಕಾಗಿ ಹಾಗೆ ಮಾಡಬೇಕು, ಹೀಗೆ ನಡೆದುಕೊಳ್ಳಬೇಕು ಎಂದೆಲ್ಲ ಆದೇಶಿಸುವರು.

ವಿವೇಕಿಗಳೆನಿಸಿದವರಿಗೆ ಹೆಡ್ಡರ ಈ ಎಣಿಕೆಯ ಪದ್ಧತಿ ಹೇಳಿಸಿದ್ದಲ್ಲ.

* * *

## 7. ವಿಶ್ವಂಭರನ ವಿಶ್ವ ಸಂದೇಶ

ಒಮ್ಮೆ ಚತುರ್ಮುಖ ಬ್ರಹ್ಮದೇವರ ಸನ್ನಿಧಿಯಲ್ಲಿ, ಯಾರಿಗೆ ಅಗ್ರಪೂಜೆ ಸಲ್ಲಬೇಕು? ಎಂದು ಚರ್ಚೆ ಪ್ರಾರಂಭವಾಯಿತು. ಆಗ ಬ್ರಹ್ಮದೇವರು, ಯಾರು ಪ್ರಪಂಚ ಪ್ರದಕ್ಷಿಣೆಯನ್ನು ಮೊದಲು ಮುಗಿಸುವರೋ ಅವರಿಗೆ ಅಗ್ರಪೂಜೆ ಎಂದು ಹೇಳಿದರು. ಎಲ್ಲ ದೇವತೆಗಳು ತಮ್ಮ ತಮ್ಮ ವಾಹನಗಳನ್ನೇರಿ ಪ್ರಯಾಣ ಬೆಳೆಸಿದರು. ಆದರೆ ದೊಡ್ಡ ಹೊಟ್ಟೆಯ ಗಣಪತಿ ಸಣ್ಣ ಇಲಿಯ ಮೇಲೆ ಕುಳಿತು ಪ್ರಪಂಚ ಪರ್ಯಟನದಲ್ಲಿ ಮೊದಲಸ್ಥಾನ ಪಡೆಯುವುದೆಂತು? ವಿಚಾರ ಮಾಡಿದ. ತನ್ನ ಮಾತಾಪಿತೃಗಳಾದ ಪಾರ್ವತೀ ಪರಮೇಶ್ವರಿಗೇನೇ ಪ್ರದಕ್ಷಿಣೆ ಹಾಕಿ ಆರಾಮವಾಗಿ ಕುಳಿತುಕೊಂಡನು. ಪ್ರಪಂಚವನ್ನು ಸುತ್ತಿ ಬಂದ ದೇವತೆಗಳು ಗಣಪತಿಯನ್ನು ಕಂಡು, ಇದೇನು ಗಣಪತಿ ಇಲ್ಲಿಯೇ ಇದ್ದಾನೆ. ಪ್ರಪಂಚ ಸುತ್ತಲೂ ಹೋಗಿಯೇ ಇಲ್ಲ! ಎಂದು ಕೊಂಡರು. ನಂತರ ಚತುರ್ಮುಖ ಬ್ರಹ್ಮದೇವರು ತಮ್ಮ ತೀರ್ಪು ನೀಡಿದರು- ನಿಮ್ಮೆಲ್ಲರಿಗಿಂತಲೂ ಮೊದಲು ಭೂಪ್ರದಕ್ಷಿಣೆ ಮುಗಿಸಿದವನು ಗಣಪತಿಯು. ಆದ ಕಾರಣ ಅವನಿಗೆ ಅಗ್ರಪೂಜೆ. ಈ ತೀರ್ಪು ಕೇಳಿ ಆಶ್ಚರ್ಯಗೊಂಡ ದೇವತೆಗಳು ವಿಚಾರಿಸಿದಾಗ, ತಾಯಿ-ತಂದೆಯವರಿಗೆ ಪ್ರದಕ್ಷಿಣೆ ಮಾಡಿ ನಮಿಸಿದರೆ ಸಕಲ ಭೂ ಪ್ರದಕ್ಷಿಣೆ ಮಾಡಿದ ಪುಣ್ಯ ಬರುವುದು. ಗಣಪತಿಯು ಇದನ್ನೇ ಮಾಡಿ ಅಗ್ರ ದೇವತೆ ಪೂಜೆಯನ್ನು ಪಡೆದನು ಎಂದು ತಿಳಿಯಿತು. ದೇವತೆಗಳು ಗಣಪತಿಯ ಜಾಣ್ಮೆಯನ್ನು ಮೆಚ್ಚಿದರು; ತಲೆ ತಗ್ಗಿಸಿದರು.

ನಾವೂ ಗಣಪತಿ-ಲೀಡರ್-ನಾಯಕರಾಗಬೇಕಾದರೆ, ನಾವೂ ಎಲ್ಲದರಲ್ಲೂ ಅಗ್ರಸ್ಥಾನ ಪಡೆಯಬೇಕಾದರೆ ತಾಯಿತಂದೆಗಳನ್ನು ಭಕ್ತಿಯಿಂದ ಸೇವಿಸಬೇಕು ಎಂಬ ಉತ್ತಮ ಸಂದೇಶ ಈ ಕಥೆಯ ಮೂಲಕ ಗಣಪತಿ ನಮಗೆ ನೀಡಿದ್ದಾನೆ.

ಇಲಿ ಬಹಳ ಸಣ್ಣ ಪ್ರಾಣಿ. ಅದರ ಮೇಲೆ ದೊಡ್ಡ ಗಣಪತಿಯ ಪಯಣ! ಇದನ್ನು ಕಂಡಾಗ ನಮಗೆಲ್ಲರಿಗೂ ಅತ್ಯಂತ ಆಶ್ಚರ್ಯವಾಗುತ್ತದೆ. ಆದರೆ ಇಲ್ಲಿಯೂ ಒಂದು ಆಧ್ಯಾತ್ಮಿಕ ಸಂದೇಶ ಅಡಗಿದೆ. ನಮ್ಮ ಇಂದ್ರಿಯಗಳೇ ಇಲಿ, ಇಲಿ ಬಹಳ ಚಂಚಲ. ಕಳ್ಳತನದಲ್ಲಿ ಆಹಾರದ ಆಪಹಾರ

ಮೊದಲಾದ ಅವ್ಯವಹಾರ ಮಾಡುವುದು. ನಮ್ಮ ಇಂದ್ರಿಯಗಳೂ ಕೂಡ ಚಂಚಲ, ಗುಟ್ಟಾಗಿ ಬೇಕಾದಷ್ಟು ಅವ್ಯವಹಾರ ಮಾಡುತ್ತವೆ. ಗಣಪತಿಯು ಅಂತಹ ಇಲಿಯ ಮೇಲೆ ಸಂಚಾರ ಮಾಡುತ್ತಾನೆ. ನಾವೂ ಈ ಇಂದ್ರಿಯಗಳ ಮೇಲೆ ಸವಾರಿ ಮಾಡಬೇಕು. ಆದರೆ ಇಂದು ನಾವು ಇಲಿಯ ಮೇಲೆ ಸವಾರಿ ಮಾಡುತ್ತಿಲ್ಲ. ಇಲಿಯೇ ನಮ್ಮ ಮೇಲೆ ಸವಾರಿ ನಡೆಸುತ್ತಿದೆ. ಇಂದ್ರಿಯಗಳ ಮೇಲೆ ನಮ್ಮ ಸವಾರಿ ಇಲ್ಲ. ನಮ್ಮ ಮೇಲೆ ಇಂದ್ರಿಯಗಳು ಸವಾರಿ ಮಾಡುತ್ತಿವೆ. ಇಂದ್ರಿಯಗಳು ಓಡಿದ ಕಡೆಗೆ ನಾವೂ ಓಡುತ್ತಿದ್ದೇವೆ.

ಉಪನಿಷತ್ ಹೇಳುತ್ತದೆ– ಶರೀರವು ರಥ, ಆತ್ಮ ರಥಿಕ, ಬುದ್ದಿ ಸಾರಥಿ, ಮನಸ್ಸು ಕಡಿವಾಣ, ಇಂದ್ರಿಯಗಳು–ಕುದುರೆಗಳು. ಇಂದ್ರಿಯಗಳ ಮೇಲೆ ಮನಸ್ಸಿನ ಹತೋಟಿಯಿಟ್ಟು ಬುದ್ಧಿಯಿಂದ ದೇವರೆಡೆಗೆ ದೇಹ ರಥದಲ್ಲಿ ಜೀವನದ ಜೈತ್ರಯಾತ್ರೆ ನಡೆಸಬೇಕು. ಗಣಪತಿಯು ವಿಘ್ನ ನಿವಾರಣೆ ಮಾಡುತ್ತಾನೆ ನಿಜ, ಆದರೆ ಎಲ್ಲರಿಗೂ ಅಲ್ಲ. ಸಜ್ಜನರಿಗೆ ವಿಘ್ನ ಪರಿಹಾರ ಮಾಡಿದರೆ ದುರ್ಜನರಿಗೆ ವಿಘ್ನ ಉಂಟುಮಾಡುತ್ತಾನೆ. ಶ್ರೀ ವಾದಿರಾಜರು ಹೇಳುತ್ತಾರೆ– **'ದುಷ್ಟಾನಾಂ ವಿಘ್ನಕರ್ತಾ'** ಆತ್ಮಲಿಂಗವನ್ನು ಅಪಹರಿಸಿದ ರಾವಣನಿಗೆ ವಿಘ್ನವುಂಟುಮಾಡಿ ಗೋಕರ್ಣದಲ್ಲಿಯೇ ಆತ್ಮಲಿಂಗ ಉಳಿಯುವಂತೆ ಮಾಡಿದ.

ಗಣಪತಿಯು ತನ್ನ ಕೈಯಲ್ಲಿ ಅಂಕುಶ ಹಿಡಿದಿದ್ದಾನೆ. ಇದೇನು! ಮಾವುತನ ಕೈಯಲ್ಲಿರಬೇಕಾದ ಅಂಕುಶ ಆನೆಯ ಕೈಯಲ್ಲಿದೆ! ನಮ್ಮನ್ನು ನಾವೇ ತಿದ್ದಿಕೊಳ್ಳಬೇಕು. ಇನ್ನೊಬ್ಬರು ತಿದ್ದುವಂತಾಗಬಾರದು. ಎಂಬ ಸಂದೇಶ ನೀಡುತ್ತಿದ್ದಾನೆ ಗಣಪತಿ!
ಜನಗಣಮನ ಅಧಿನಾಯಕ ಶ್ರೀ ವಿಶ್ವಂಭರನೇ, ಅವನೇ ಇಡೀ ಪ್ರಪಂಚದ ಒಡೆಯ. ಹೊರತು ರಾಷ್ಟ್ರಪತಿ ಪ್ರಧಾನ ಮಂತ್ರಿಗಳಲ್ಲ. ಇವರೆಲ್ಲ ರಾಷ್ಟ್ರದ ಒಡೆಯರಲ್ಲ.

ಹೀಗೆ ವಿಶ್ವಂಭರನ ವಿಶ್ವ ಸಂದೇಶವನ್ನು ಅರಿತು ಅದನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಇದೇ ನಿಜವಾದ ಗಣಪತಿಯ ಪೂಜೆ ಅದನ್ನು ಬಿಟ್ಟು ಕೆಲವು ದಿವಸ ಪೂಜೆ ಮಾಡಿ ಮೃಣ್ಮಯ ಗಣಪತಿಯನ್ನು ನೀರಲ್ಲಿ ಹಾಕುವಂತೆ ಮನಸ್ಸಿನ ಚಿನ್ಮಯ ನೀರಿಗೆ ಹಾಕುವುದಲ್ಲ–ಮರೆಯುವುದಲ್ಲ.

## 8. ಅಪರೋಕ್ಷ ಜ್ಞಾನಿಗಳ ಅನುಭೂತಿಯ ಉದ್ಗಾರಗಳು

ನಾವು ನಮ್ಮ ಜೀವನದಲ್ಲಿ ಲೌಕಿಕ ಸಿದ್ಧಿಗಾಗಿ ಬೇರೆ ಬೇರೆ ವ್ಯವಹಾರಗಳಲ್ಲಿ ತೊಡಗಿರುತ್ತೇವೆ. ಬೆಳಿಗ್ಗೆಯಿಂದ ಸಂಜೆಯವರೆಗೆ ನಾನಾ ರೀತಿಯ ಕೆಲಸಗಳ ಜಂಜಾಟದಲ್ಲಿ ಮುಳುಗಿರುತ್ತೇವೆ. ಆದರೆ ಇವೆಲ್ಲವುಗಳ ಮಧ್ಯದಲ್ಲಿಯೂ ಇವುಗಳಿಗೆ ಪೂರಕವಾಗಿ ಶಕ್ತಿ ಚೈತನ್ಯ ತುಂಬುವ, ಇವುಗಳನ್ನೂ ಮೀರಿ ನಿಂತಿರುವ ಒಂದು ಆಧ್ಯಾತ್ಮಿಕ ಪ್ರಕ್ರಿಯೆಯು ನಮ್ಮಲ್ಲಿ ನಿರಂತರವಾಗಿ ನಡೆಯುತ್ತಿರಬೇಕು. ಶರೀರದಲ್ಲಿ ಅನೇಕ ಅಂಗಾಂಗಗಳಿದ್ದರೂ ಅದರ ಕೇಂದ್ರಬಿಂದುವಾಗಿ ಒಂದು ಚೈತನ್ಯವಿರುವಂತೆ, ನಮ್ಮ ಜೀವನದ ಆತ್ಮವಾಗಿ, ಕೇಂದ್ರ ಬಿಂದುವಾಗಿ ಆಧ್ಯಾತ್ಮಿಕತೆಯನ್ನು ನಮ್ಮಲ್ಲಿ ಅಳವಡಿಸಿಕೊಳ್ಳಲು ನಾವು ಪ್ರಯತ್ನಿಸಬೇಕು. ನಿರಂತರ ಭಗವತ್‌ಸ್ಮರಣೆ, ಭಕ್ತಿ, ಭಜನೆಗಳು ನಮ್ಮ ಜೀವನದಲ್ಲಿ ಹೊಸ ಶಕ್ತಿಯನ್ನು, ಆತ್ಮವಿಶ್ವಾಸವನ್ನು ಮೂಡಿಸಬಲ್ಲವು. ಸಂಸ್ಕೃತದ ಮಂತ್ರಗಳು ನಮಗೆ ಕಠಿಣವೆನಿಸಬಹುದು. ಆದರೆ ವಾದಿರಾಜರು, ಪುರಂದರರು, ಕನಕರು, ವಿಜಯದಾಸರಂತಹ ಅಪರೋಕ್ಷಜ್ಞಾನಿಗಳ ಅನುಭೂತಿಯ ಉದ್ಗಾರಗಳಾದ ದಾಸಕೃತಿಗಳು, ಮಂತ್ರದ್ರಷ್ಟಾರರಾದ ಮುನಿಗಳಿಂದ ಹೊರಹೊಮ್ಮಿದ ವೇದ ಮಂತ್ರಗಳಂತೆ ಪರಮಪವಿತ್ರಗಳು. ಇಂತಹಾ ಭಕ್ತಿಗೀತೆಗಳನ್ನು ಹಾಡಿದರೆ ಭಗವಂತನು ಬೇಗನೆ ಒಲಿಯುವನು. ಕನ್ನಡದಲ್ಲಿ ಜನಸಾಮಾನ್ಯರಿಗೆ ಸುಲಭವಾಗುವಂತೆ ರಚಿಸಿದ ಇಂತಹಾ ಭಕ್ತಿ ಮಂತ್ರಗಳನ್ನು ಎಲ್ಲಾ ವರ್ಗದ ಜನರೂ ಸುಲಭವಾಗಿ ಅರ್ಥ ಮಾಡಿಕೊಂಡು ಹಾಡಿ ನಲಿದು ಆಧ್ಯಾತ್ಮಿಕ ಆನಂದವನ್ನು ಅನುಭವಿಸಬಹುದು.

* * *

## 9. ಪುರಂದರದಾಸರು

ಪುರಂದರದಾಸರಂತಹ ಮಹಾನುಭಾವರು ತಾತ್ವಿಕ ಕ್ಷೇತ್ರದಲ್ಲಿ ಮಾಡಿದ ಕಾರ್ಯವು ಅಸಾಧಾರಣವೂ ಚಿರಸ್ಮರಣೀಯವೂ ಆಗಿದೆ. ಪ್ರಾಚೀನ ಕಾಲದಲ್ಲಿ ಸಂಸ್ಕೃತ ಲೋಕದಲ್ಲಿ ಹೆಚ್ಚು ಪ್ರಚಲಿತವಿದ್ದುದರಿಂದ ಅದರ ಮಾಧ್ಯಮದಲ್ಲಿಯೇ ಜನತೆಯು ತತ್ತ್ವಜ್ಞಾನವನ್ನು ಪಡೆಯಲು ಶಕ್ತವಾಗಿತ್ತು. ಆದರೆ ಸಂಸ್ಕೃತವು ಪಂಡಿತರ ಭಾಷೆಯಾಗಿ ಜನ ಸಾಮಾನ್ಯರ ಸಂಪರ್ಕವು

ಅದಕ್ಕೆ ಶಿಥಿಲವಾದಾಗ ಅದರ ಪರಿಣಾಮವಾಗಿ ಸಂಸ್ಕೃತ ಭಾಷೆಯು ಹಿಮಾಲಯದಲ್ಲಿಯೇ ಹರಿಯುತ್ತಿರುವ ತತ್ತ್ವಜ್ಞಾನದ ಗಂಗೆಯು ಸಾಮಾನ್ಯ ಜನತೆಗೆ ಎಟುಕದಂತಾಗುವ ಪರಿಸ್ಥಿತಿಯು ನಿರ್ಮಿತವಾಯಿತು. ಶ್ರೀ ಪುರಂದರದಾಸರಂತಹವರ ಭಗೀರಥ ಪ್ರಯತ್ನದಿಂದ ಜ್ಞಾನಗಂಗೆಯು ಜನಸಾಮಾನ್ಯರ ಅಂತರಂಗದ ಬಟ್ಟ ಬಯಲಲ್ಲಿ ಹರಿಯುವಂತಾಯಿತು. ಪುರಂದರದಾಸರಂತಹವರು ಶಾಸ್ತ್ರೀಯ ವಿಷಯಗಳನ್ನು ತಿಳಿಗನ್ನಡದಲ್ಲಿ ರೂಪಿಸುವ ಈ ಪ್ರಯತ್ನವನ್ನು ಕೈಗೊಳ್ಳದಿದ್ದರೆ ತಾತ್ವಿಕ ವಿಚಾರಗಳಿಗೂ ಜನತೆಗೂ ಇರುವ ಸಂಬಂಧವು ಪೂರ್ಣವಾಗಿ ನಷ್ಟಗೊಂಡು ಆತ್ಮವಿಲ್ಲದ ನಿರ್ಜೀವ ಶರೀರದಂತಹ ಸ್ಥಿತಿಯು ಸಮಾಜಕ್ಕೆ ಒದಗುತ್ತಿತ್ತು. ಆದ್ದರಿಂದ ಜನತೆಗೆ ಶ್ರೀ ದಾಸವರ್ಯರು ಮಾಡಿರುವ ಉಪಕಾರವು ಅನುಪಮವಾಗಿದ್ದು ನಾವೆಲ್ಲರೂ ಎಂದೆಂದಿಗೂ ಕೃತಜ್ಞರಾಗಿರಬೇಕಾಗಿದೆ.

* * * *

# ಸದಾಚಾರ



ಚಕ್ರ-ಗದಾ-ಪದ್ಮ-ಶಂಖಧಾರಿಯಾದ **'ವೃಷಾಕಪೀ'**ಪತಿ **'ವಾಮನ'**



## ಕಲಿಯ ಪ್ರವೇಶ ದ್ವಾರ

ಅನೇಕ ದಿನಗಳಿಂದ ನಳ ಮಹಾರಾಜನನ್ನು ಆಕ್ರಮಿಸಲು ಕಲಿಯು ಹೊಂಚು ಹಾಕುತ್ತಿದ್ದ. ಧರ್ಮಮೂರ್ತಿಯಾಗಿದ್ದ ಆ ಮಹಾರಾಜನ ಛಿದ್ರರಹಿತವಾದ ಸುಭದ್ರಜೀವನದಲ್ಲಿ ಕಲಿಗೆ ಪ್ರವೇಶ ಪಡೆಯಲು ಸ್ವಲ್ಪವೂ ಅವಕಾಶ ದೊರೆಯಲಿಲ್ಲ. ಕಾಲನ್ನು ತೊಳೆಯುವ ಸಂದರ್ಭದಲ್ಲಿ ನಳನು ತೋರಿದ ಅಲಸ್ಯವೇ ಕಲಿಯ ಪ್ರವೇಶ ದ್ವಾರವಾಯಿತು. ತನ್ನ ಕಾಲನ್ನು ಪೂರ್ತಿಯಾಗಿ, ಸರಿಯಾಗಿ ತೊಳೆಯಲು ನಳ ಮಹಾರಾಜನು ಅಜಾಗರೂಕತೆಯನ್ನು ತೋರಿದಾಗಲೇ ಅವನಲ್ಲಿ ಕಲಿಯ ಪ್ರವೇಶವಾಯಿತು. ಮುಂದೆ ಕಲಿಯು ಅವನ ಇಡೀ ಜೀವನವನ್ನೇ ಆಕ್ರಮಿಸುವಂತಾಯಿತು.

ಅಲಸ್ಯಕ್ಕೆ ನಮ್ಮ ಜೀವನದಲ್ಲಿ ಅಣುಮಾತ್ರವಾದರೂ ಪ್ರವೇಶ ದೊರಕಿದರೆ ಸಕಲ ದುರ್ಗುಣಗಳಿಗೂ ಆಹ್ವಾನ ಕೊಟ್ಟಂತೆ. ಆದುದರಿಂದ ಆಲಸ್ಯವೇ ಸಕಲ ದುರ್ಗುಣಗಳಿಗೆ ಮೂಲವಾಗಿದೆ.

– ಶ್ರೀ ವಿಶ್ವೇಶತೀರ್ಥಶ್ರೀಪಾದರು

## 1. ಇಲ್ಲಿ ಎಲ್ಲರಿಗೂ ಮುಕ್ತ ಅವಕಾಶವಿದೆ

ಮಾಧ್ವಸಿದ್ಧಾಂತ ಒಂದು ಜಾತಿಗೆ, ಒಂದು ಗುಂಪಿಗೆ ಸೀಮಿತವಲ್ಲ. ಈ ಸಿದ್ಧಾಂತ ತಿಳಿಸುವಂತೆ, ಎಲ್ಲರಿಗೂ ಅಧ್ಯಾತ್ಮ ಸಾಧನೆಯಲ್ಲಿ ಮುಕ್ತ ಅವಕಾಶವಿದೆ. ಯಾವುದೇ ವೃತ್ತಿಯಲ್ಲಿದ್ದುಕೊಂಡು ತಮ್ಮ ಪ್ರಾಮಾಣಿಕ ನಿಷ್ಠೆಯ ಸೇವೆಯನ್ನು ದೇವರಿಗೆ ಅರ್ಪಿಸಬಹುದು. ಇದು ಭಗವಂತನ ಸಾಮ್ರಾಜ್ಯಕ್ಕೆ ಸೇರಿದ ಪ್ರತಿಯೊಬ್ಬನ ಕರ್ತವ್ಯ. ಸರಕಾರಕ್ಕೆ 'ಟ್ಯಾಕ್ಸ್' ನೀಡುವಷ್ಟೇ ಅನಿವಾರ್ಯವಾದ ಕೆಲಸ. ತಾವು ನಿರ್ವಹಿಸುವ ಕರ್ತವ್ಯ ಭಗವಂತನ ಸೇವೆ, ಎಂಬ ಪವಿತ್ರ ಭಾವನೆ ಇದ್ದಾಗ ಸ್ವಾರ್ಥಕ್ಕೆ ಅವಕಾಶವಾಗುವುದಿಲ್ಲ. ನಮ್ಮ ಕರ್ತವ್ಯದಲ್ಲಿ ಸ್ವಾರ್ಥಭಾವ ನುಸುಳಿದರೆ ಅಕ್ರಮ, ಅನ್ಯಾಯಗಳಿಗೆ ಅವಕಾಶವಾಗುತ್ತದೆ–

**ಈಹಂತೇ ಕಾಮಭೋಗಾರ್ಥಂ ಅನ್ಯಾಯೇನಾರ್ಥಸಂಚಯಾನ್॥ (ಭ–ಗೀ)**

ಪ್ರಜಾಪ್ರಭುತ್ವದ ಸಿದ್ಧಾಂತ 'ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರ. ಅಧ್ಯಾತ್ಮ ಸಿದ್ಧಾಂತ' ದೇವರಿಂದ, ದೇವರಿಗಾಗಿ, ದೇವರಿಗೋಸ್ಕರ. ಇಂತಹ ಅಪೂರ್ವ ದ್ವೈತಸಿದ್ಧಾಂತವನ್ನು ಸಾಧಕರಿಗೆ ನೀಡಿದ ಶ್ರೀಮಧ್ವಾಚಾರ್ಯರು ನಮ್ಮ ಕರ್ನಾಟಕದ ಸುಪುತ್ರರು.

**ಸಾಬೀತುಪಡಿಸಲಿ, ಇಲ್ಲ ಕ್ಷಮೆ ಕೇಳಲಿ :** ಮಾಧ್ವದರ್ಶನದಲ್ಲಿ ಶೂದ್ರರಿಗೆ ಮೋಕ್ಷವೇ ಇಲ್ಲ ಎಂದು ಕೆಲವು ಬುದ್ಧಿಜೀವಿಗಳು ಪ್ರಚಾರ ಮಾಡುತ್ತಾರೆ. ಶ್ರೀಮಧ್ವಾಚಾರ್ಯರು ಹಾಗೆಂದು ಎಲ್ಲೂ ಹೇಳಲಿಲ್ಲ. ಹಾಗೆ ಅಪಪ್ರಚಾರ ಮಾಡುವವರು ಗ್ರಂಥಗಳಲ್ಲಿ ಅದಕ್ಕೆ ಆಧಾರವನ್ನು ತೋರಿಸಬೇಕು. ಇಲ್ಲವೇ ಸಾರ್ವಜನಿಕವಾಗಿ ಮಧ್ವಾಚಾರ್ಯರಲ್ಲಿ ಕ್ಷಮೆ ಯಾಚಿಸಬೇಕು.

* * *

## 2. ಪ್ರತಿಯೊಬ್ಬರೂ ನಡೆಸಬಹುದಾದ ಪದ್ಮಾವತಿ ಕಲ್ಯಾಣ ಮತ್ತು ಲಕ್ಷ್ಮೀ ಸ್ವಯಂವರ

### ನಮ್ಮ ಶಬ್ದಗಳು ಶ್ರೀನಿವಾಸನಿಗೆ

ಆಕಾಶರಾಜ ನಾರಾಯಣಪುರದಲ್ಲಿ ಶ್ರೀನಿವಾಸನಿಗೆ ಪದ್ಮಾವತಿಯನ್ನು

ಕೊಟ್ಟು ಶ್ರೀನಿವಾಸ– ಪದ್ಮಾವತಿಯರ ಕಲ್ಯಾಣೋತ್ಸವವನ್ನು ನಡೆಸಿದಂತೆ ನಾವು ಪ್ರತಿನಿತ್ಯವೂ ಈ ಕಲ್ಯಾಣೋತ್ಸವವನ್ನು ನಡೆಸಬಹುದಾಗಿದೆ.

ಪದ್ಮಾವತಿಯ ಅಪ್ಪ ಆಕಾಶರಾಜ. ಅಂತಹ ಆಕಾಶರಾಜನ ಮಗಳು ಪದ್ಮಾವತಿ ಹೇಗೋ ಹಾಗೆ ವಿರಾಜಿಸುವ (ರಾಜ) ಆಕಾಶದ ಮಗ ಶಬ್ದ **'ಶಬ್ದಗುಣಕಂ ಆಕಾಶಮ್'** ತಾನೇ? ಆಕಾಶರಾಜ ತನ್ನ ಮಗಳಾದ ಪದ್ಮಾವತಿಯನ್ನು ಬೇರೆ ಯಾರ್‍ಯಾರಿಗೋ ಕೊಡದೇ ಶ್ರೀನಿವಾಸನಿಗೆ ಕೊಟ್ಟು ಕಲ್ಯಾಣ ನಡೆಸಿದ. ನಾವೂ ಆಕಾಶದ ಪುತ್ರರಂತೆ ಇರುವ ನಮ್ಮ ಶಬ್ದಗಳನ್ನು ಇನ್ನ್ಯಾರಿಗೋ ಕೊಡದೆ, ಅರ್ಥಾತ್ ನಮ್ಮ ಮಾತುಗಳನ್ನು ಲೌಕಿಕ ಪದಾರ್ಥಗಳ ವ್ಯವಹಾರಕ್ಕಾಗಿ ಬಳಸಬಾರದು. ಶ್ರೀನಿವಾಸನಿಗೆ ಪದ್ಮಾವತಿಯನ್ನು ಕೊಟ್ಟಂತೆ ಆಕಾಶರಾಜನ ಮಗ ಶಬ್ದವನ್ನು ಶ್ರೀನಿವಾಸನ ವೈಭವವನ್ನು ಸಾರುವುದಕ್ಕಾಗಿಯೇ ವಿನಿಯೋಗಿಸಿಕೊಳ್ಳಬೇಕು. ಅಂದರೆ ಶ್ರೀನಿವಾಸನ ವೈಭವದ ಕುರಿತೇ ಮಾತನಾಡುತ್ತಿರಬೇಕು. ಇದೇ ನಾವು ನಡೆಸಬಹುದಾದ ಶ್ರೀನಿವಾಸ–ಪದ್ಮಾವತಿ ಕಲ್ಯಾಣೋತ್ಸವ.

## ಸಂಪತ್ತನ್ನು ನಾರಾಯಣನಿಗೇ ನೀಡೋಣ

ಸಮುದ್ರಮಥನದ ಸಂದರ್ಭದಲ್ಲಿ ಪ್ರಾದುರ್ಭವಿಸಿದ ಲಕ್ಷ್ಮೀದೇವಿ ಸ್ವಯಂವರದಲ್ಲಿ ತೊಡಗುವಳು. ಅದರ ಅಂಗವಾಗಿ ಒಂದು ಮಾಲೆಯನ್ನು ಹಿಡಿದುಕೊಂಡು **'ಯಾರ ಕೊರಳಿಗೆ ಹಾಕಲಿ'**– ಎಂದು ಪರ್ಯಾಲೋಚಿಸುತ್ತಿರುವಳು. ಅಸುರರು ತಮ್ಮ ಕೊರಳಿಗೆ ಮಾಲೆ ಹಾಕುವಂತಾಗಬೇಕೆಂದು ಕೊರಳನ್ನು ನೇರವಾಗಿ ಮಾಡುತ್ತ ಆಸೆ ತೋರುತ್ತಿರುವರು. ಆದರೆ ಲಕ್ಷ್ಮೀದೇವಿ ಅಸುರರ ಕಡೆಗೆ ಸುಳಿಯದೆ ಭಗವಂತನ ಕೊರಳಿಗೇ ಮಾಲೆ ಹಾಕಿ ಆತನನ್ನೇ ವರಿಸಿಕೊಳ್ಳುವಳು. ಅಂತೆಯೇ ನಮ್ಮ ಕೈಗೆ ಸಂಪತ್ತು ಬಂದಾಗ ಬೇರೆ ಬೇರೆ ವ್ಯಸನಗಳು, ಕೆಟ್ಟ ಚಟಗಳು, ಆ ಸಂಪತ್ತನ್ನು ತಾವು ಕಬಳಿಸುವಂತಾಗಬೇಕು ಎಂದು ಹಾತೊರೆಯುತ್ತಿರುವವು. ಆದರೆ ಲಕ್ಷ್ಮೀದೇವಿಯಿಂದ ಅಭಿಮನ್ಯಮಾನವಾದ ಸಂಪತ್ತನ್ನು ಕೆಟ್ಟ ಚಟಗಳಿಗೆ, ವ್ಯಸನಗಳಿಗೆ ನೀಡದೆ, ನಾರಾಯಣನಿಗೆ ಅರ್ಥಾತ್ ನಾರಾಯಣ ಮೆಚ್ಚುವ ಧರ್ಮಾದಿಗಳಿಗೇ ನೀಡಬೇಕು. ಆಗ ನಮ್ಮ ಮೂಲಕ ಲಕ್ಷ್ಮೀನಾರಾಯಣರ ಸ್ವಯಂವರ ನಡೆದಂತಾಗುವುದು.

## 4. ಜ್ಞಾನ ಕರ್ಮಗಳೆರಡೂ ಬೇಕು

ಸಾಧಕರಲ್ಲಿ ಎರಡು ವಿಧ. ಜ್ಞಾನಯೋಗಿ ಹಾಗೂ ಕರ್ಮಯೋಗಿ. ಸನ್ಯಾಸಿಗಳು ಜ್ಞಾನಯೋಗಿಗಳು. ಜ್ಞಾನಯೋಗಿಗಳು ಪಾಠ, ಪ್ರವಚನ, ತತ್ವಜ್ಞಾನ ಪ್ರಸಾರ ಮುಂತಾದ ಜ್ಞಾನಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಮಾಡಬೇಕಾಗಿದ್ದರೂ ಕರ್ತವ್ಯದ, ಸಮಾಜಸೇವೆಯ, ಅಭಯಪ್ರದಾನದ ಜವಾಬ್ದಾರಿಯೂ ಅವರಿಗಿದೆ. ಜ್ಞಾನಕಾರ್ಯವನ್ನು ವಿಶೇಷವಾಗಿ ಮಾಡುವವರಾದುದರಿಂದ ಜ್ಞಾನಯೋಗಿಗಳೆಂದು ಕರೆಯಲ್ಪಡುತ್ತಾರೆ. ಕರ್ಮಯೋಗಿಗಳೂ ವಿಶೇಷವಾಗಿ ಕರ್ತವ್ಯದ ಹೊರೆ ಹೊರುವವರಾದರೂ ಅವರಿಗೂ ಜ್ಞಾನದ ಅಗತ್ಯ ಇದೆ. ಜ್ಞಾನರಹಿತ ಕರ್ಮವಾಗಲಿ, ಕರ್ಮರಹಿತ ಜ್ಞಾನವಾಗಲಿ ಉಪಯೋಗವಿಲ್ಲ. ಈ ನಮ್ಮ ಶರೀರವನ್ನು ಪಾರ್ಥಿವ ಎನ್ನುತ್ತೇವೆ. ಜಲ ಮುಂತಾದ ಉಳಿದ ಭೂತಗಳು ಇದರಲ್ಲಿ ಇಲ್ಲವೆಂದು ಅದರ ಅಭಿಪ್ರಾಯವಲ್ಲ. ಪಂಚಭೂತಗಳಲ್ಲಿ ಪೃಥಿವೀ ಅಂಶ ಹೆಚ್ಚೆಂದಷ್ಟೇ ಆದರ ಆಶಯ. ಅದರಂತೆ ಸನ್ಯಾಸಿಗಳಾದ ನಮಗೆ ಜ್ಞಾನಪ್ರಸಾರ ಕಾರ್ಯ ವಿಶೇಷವಾಗಿ ಇದೆಯಾದರೂ ಸಮಾಜಸೇವೆಯೂ ನಮ್ಮ ಕರ್ತವ್ಯ. ಶ್ರೀಮಧ್ವರೂ ಅಪರೋಕ್ಷಜ್ಞಾನವಾಗುವ ತನಕ ಎಲ್ಲರೂ ನಾನಾ ಜನ ಶುಶ್ರೂಷೆಯನ್ನು ಮಾಡಬೇಕೆಂದು ಆದೇಶಿಸಿರುವರು.

* * * *

## 5. ತೊಟ್ಟಿಲಿನಿಂದ ಮಗುವನ್ನು ಎತ್ತಿ ಕೆಳಗಿಡುವಂತೆ

ಹನುಮಂತನಿಗೆ ಶ್ರೀರಾಮಚಂದ್ರದೇವರು ಚಿರಂಜೀವಿಯಾಗುವಂತೆ ಹರಸಿದಾಗ ಹನುಮಂತನು, ನನಗೆ ಎಷ್ಟು ದಿವಸದ ಬದುಕು? ಎನ್ನುವುದಕ್ಕಿಂತ ಬದುಕಿದ್ದಷ್ಟು ಕಾಲ ನಿನ್ನ ಸೇವೆ ಮಾಡಿ ಬದುಕುವಂತೆ ಅನುಗ್ರಹಿಸೆಂದು ಕೇಳಿದನು. ಅಂತೆಯೇ ನಾನು ದೇವರಲ್ಲಿ ದೀರ್ಘ ಜೀವನ ಬೇಡ ಎನ್ನುವುದಿಲ್ಲವಾದರೂ ಇರುವಷ್ಟು ಜೀವನ ನಿನ್ನ ಸೇವೆ ಮಾಡುವಂತೆ, ಸಮಾಜಸೇವೆ ಮಾಡುವಂತೆ ಅನುಗ್ರಹಿಸೆಂದು ಬೇಡುವೆನು. ನಮಗೆ ಒಮ್ಮೆ ಅಪಘಾತವಾದಾಗ ಮೂವತ್ತು ಅಡಿಗಳಷ್ಟು ಪ್ರಪಾತಕ್ಕೆ ಕಾರು ಉರುಳುತ್ತಿರುವಾಗ ದೇವರ ಮೇಲೆ ಭಾರ ಹಾಕಿ ಹಾಗೇ ಮಲಗಿದೆ. ಉರುಳುತ್ತಿದ್ದ ಕಾರು ಯಥಾಸ್ಥಿತಿಯಲ್ಲಿಯೇ ನಿಂತಾಗ ಸುಲಭವಾಗಿ ಬಾಗಿಲು

ತೆರೆದು ಇಳಿದು ಬಂದೆ. ತೊಟ್ಟಿಲಿನಿಂದ ಮಗುವನ್ನು ಎತ್ತಿ ಕೆಳಗಿಡುವಂತೆ ದೇವರು ಪಾರು ಮಾಡಿದ.

* * *

## 6. ಮನೆಯೊಡತಿಯ ಎಚ್ಚರ

ಜರತ್ಕಾರು ಮದುವೆಯಾಗದ ಬ್ರಹ್ಮಚಾರಿ, ತಪಸ್ವಿ, ಅವನ ವಂಶಪರಂಪರೆ ಅವನಲ್ಲೇ ಕೊನೆಯಾಗುವುದರಿಂದ ಪಿತೃಗಳು ನರಕಭಾಜನರಾಗುವ ಸಂಭವವಿತ್ತು. ಅದನ್ನು ತಿಳಿದು ಮದುವೆಯಾಗಲು ನಿರ್ಧರಿಸಿದ. ವಾಸುಕಿಯ ಮಗಳೂ ಜರತ್ಕಾರು. ಅವಳನ್ನೇ ಮದುವೆಯಾದ. ಯಾವುದೇ ಕಾರಣಕ್ಕೂ ತನಗೆ ಅಪ್ರಿಯವಾದುದನ್ನು ಮಾಡಬಾರದು, ಎಂಬ ಕರಾರಿನಿಂದ ಅವಳ ಮದುವೆ ನಡೆಯಿತು.

ಒಂದು ದಿನ ಸಂಧ್ಯಾಕಾಲ. ಜರತ್ಕಾರು ಎಚ್ಚರವಿಲ್ಲದೆ ಮಲಗಿದ್ದ. ಪತ್ನಿಗೆ ಇಬ್ಬಂದಿತನ–ಎಬ್ಬಿಸಲೋ, ಬೇಡವೋ? ಎಂದು. ಎಬ್ಬಿಸಿದರೆ, ಅವನಿಗೆ ಅಪ್ರಿಯವಾದುದನ್ನು ಮಾಡಿದಂತಾಗಿ ಕರಾರಿನಂತೆ ತನ್ನನ್ನು ಪರಿತ್ಯಜಿಸಬಹುದು. ಎಬ್ಬಿಸದಿದ್ದರೆ ಸಂಧ್ಯಾಲೋಪವಾಗಿ ಪಾಪಭಾಜನನಾಗುತ್ತಾನೆ. ಕೊನೆಗೆ ನಿರ್ಧರಿಸಿದಳು.

**ಧರ್ಮಲೋಪೋ ಗರೀಯಾನ್ ವೈ ಸ್ಯಾದಿತ್ಯತ್ರಾಕರೋನ್ಮತಿಮ್ ॥**

ಅವನು ಸಿಟ್ಟಿನಿಂದ ನನ್ನನ್ನು ಪರಿತ್ಯಜಿಸಿದರೂ ಚಿಂತಿಲ್ಲ. ಅವನ ಧರ್ಮ ಲೋಪವಾಗಬಾರದು. ಧರ್ಮಾಚರಣೆಯೇ ದೊಡ್ಡದು. ಹೀಗೆ ತಿಳಿದ ಅವನನ್ನು ಎಬ್ಬಿಸಿದಳು. ಅವನಿಗೆ ಸಿಟ್ಟು ಬಂತು. "ನಾನು ಏಳದ ಹೊರತು ಅದು ಹೇಗೆ ಸೂರ್ಯ ಅಸ್ತಮಿಸುತ್ತಾನೆ? ನನ್ನನ್ನು ಎಬ್ಬಿಸಿ ಕರಾರನ್ನು ಉಲ್ಲಂಘಿಸಿರುವಿ. ನಿನ್ನನ್ನು ಪರಿತ್ಯಜಿಸಿದ್ದೇನೆ" ಎಂದ. ಜರತ್ಕಾರು ಅಂಗಲಾಚಿದಳು. ಅವನು ಸಮಾಧಾನಿಸಿದ. "ನಾನು ಸಂತತಿಗಾಗಿಯೇ ನಿನ್ನನ್ನು ಪರಿಗ್ರಹಿಸಿದ್ದೇನೆ. ನಿನ್ನ ಗರ್ಭದಲ್ಲಿ ನನ್ನ ಮಗನಿದ್ದಾನೆ, ಚಿಂತಿಸಬೇಡ". ಜರತ್ಕಾರು ತಪೋವನಕ್ಕೆ ಹೊರಟ. ಅವನ ಮಗನು ಸರ್ಪಸತ್ರವನ್ನು ನಿಲ್ಲಿಸಿದ ಆಸ್ತೀಕ. ಇಲ್ಲಿ ಗಮನಿಸಬೇಕಾದ ಅಂಶ–ಸ್ತ್ರೀಯರು ತಮ್ಮ ಗಂಡಂದಿರ ಬಗ್ಗೆ ಎಚ್ಚರದಿಂದಿರಬೇಕು. ತಮ್ಮ ಸ್ವಾರ್ಥಕ್ಕೆ ಸ್ವಲ್ಪ

ಘಾಸಿಯಾದರೂ ಗಂಡನ ಧರ್ಮಕ್ಕೆ ಚ್ಯುತಿಯಾಗಬಾರದು. ಅವನ ಧಾರ್ಮಿಕ ಆಚರಣೆಗಳಿಗೆ ಸಹಕಾರ ನೀಡಬೇಕು. ತಪ್ಪಿದಲ್ಲಿ ಎಚ್ಚರಿಸಬೇಕು.

* * * *

## 7. ಗೋಪಿಕಾ ಸ್ತ್ರೀಯರ ಜ್ಞಾನ ಮತ್ತು ಪ್ರೇಮ

ಶ್ರೀಕೃಷ್ಣನ ಕೊಳಲ ನಾದ ಕೇಳುತ್ತ ಗೋಪಿಕಾಸ್ತ್ರೀಯರು ತಮ್ಮ ಪತಿ, ಪುತ್ರ, ಬಂಧುಗಳನ್ನೆಲ್ಲ ಬಿಟ್ಟು ಶ್ರೀಕೃಷ್ಣನೆಡೆಗೆ ಧಾವಿಸಿ ಬರುವರು. ಆಗ ಶ್ರೀಕೃಷ್ಣನು 'ನಿಮ್ಮ ನಿಮ್ಮ ಪತಿ, ಪುತ್ರಾದಿಗಳನ್ನು ಬಿಟ್ಟು ಯಾಕೆ ಬಂದಿರಿ? ಮರಳಿರಿ. ಅವರನ್ನು ಸೇವಿಸಿರಿ'–ಎಂದು ಉಪದೇಶಿಸುವನು. ಗೋಪಿಕಾಸ್ತ್ರೀಯರು ಇದಕ್ಕೆ ಉತ್ತರಿಸುತ್ತ–'ಅಚ್ಯುತ! ನಾವು ನಮ್ಮ ಪತಿ, ಸುತ, ಕುಲ, ಬಂಧುಗಳನ್ನೆಲ್ಲ ಮೀರಿ ನಿನ್ನಲ್ಲಿಗೆ ಬಂದವರು. **(ಪತಿಸುತಾನ್ವಯಭ್ರಾತೃಬಾಂಧವಾನತಿವಿಲಂಘ್ಯ ತೇ ಹ್ಯಚ್ಯುತಾಽಗತಾಃ)** ಆದ್ದರಿಂದ ನಮ್ಮನ್ನು ಹೀಗೆ ಮರಳಿಸಬೇಡ' ಎಂದು ಬೇಡಿಕೊಳ್ಳುವರು.

ನಮಗೆ ಪತಿ ಪುತ್ರಾದಿಗಳೆಲ್ಲ ಇರುವರು. ಆದರೆ ಅವರೆಲ್ಲ ಒಂದೊಂದು ಜನ್ಮಕ್ಕಷ್ಟೇ ಸಂಬಂಧಿಸಿರುವವರು. ಒಂದು ಜನ್ಮದಲ್ಲಿ ಒಬ್ಬ ಪತಿಯ ಹಿಂದೆ ಅಡ್ಡಾಡುವ ನಾವು ಮತ್ತೊಂದು ಜನ್ಮದಲ್ಲಿ ಮತ್ತೊಬ್ಬ ಪತಿಯ ಹಿಂದೆ ಅಲೆದಾಡಬೇಕು. ಇಂತಹ ಒಂದೊಂದೇ ಜನ್ಮಕ್ಕೆ ಸೀಮಿತವಾಗಿರುವ, ಆದ್ದರಿಂದಲೇ ಅಶಾಶ್ವತರಾದ ಬಂಧುಗಳನ್ನು ಸೇವಿಸುವ ಬದಲು ಜನ್ಮ ಜನ್ಮಾಂತರದಲ್ಲೂ ಬಂಧುವಾಗಿರುವ ನಿನ್ನನ್ನು ಸೇವಿಸುವುದಕ್ಕಾಗಿ ನಿನ್ನೆಡೆಗೆ ಬಂದಿರುವೆವು.

ಅಲ್ಲದೆ, ನಮ್ಮ ಈಗಿರುವ ಪತಿ ಪುತ್ರಾದಿ ಬಂಧಗಳ ಬಾಂಧವ್ಯ ಏಕಮುಖವಾಗಿರುವಂತಹದ್ದು. ಅಂದರೆ ಪತಿಯಾಗಿರುವವನು ಪತಿತ್ವ–ಸಂಬಂಧದ ಮೂಲಕವಷ್ಟೇ ನಮ್ಮ ಬಂಧು ಹೊರತು ಅವನು ಪುತ್ರಾದಿ ಬಂಧು ಆಗಲಾರ. ಹೀಗೆಯೇ ಪುತ್ರನಾಗಿರುವವನು ಪುತ್ರತ್ವ–ಬಾಂಧವ್ಯದ ಮೂಲಕವಷ್ಟೇ ಬಂಧು. ಅವನಲ್ಲಿ ಇತರ ಬಾಂಧವ್ಯ ಇಲ್ಲ. ಹೀಗೆ ಪ್ರತಿಯೊಬ್ಬ ಬಂಧುವೂ ಒಂದೊಂದು ರೀತಿಯ ಬಾಂಧವ್ಯವನ್ನಷ್ಟೆ ಪಡೆದುಕೊಂಡಿರುವವನು. ನೀನಾದರೋ **'ತ್ವಮೇವ ಮಾತಾ ಚ ಪಿತಾ**

ತ್ವಮೇವ.....' ಅನ್ನುವಂತೆ ತಂದೆ, ತಾಯಿ, ಪತಿ, ಪುತ್ರ ಮೊದಲಾದ ಎಲ್ಲ ವಿಧದ ಬಂಧುವೂ ಆಗಿರುವಿ. ಜಗತ್ತನ್ನೆಲ್ಲ ಸೃಷ್ಟಿ ಮಾಡುವ ನೀನು ಜಗದೇಕ ಪಿತೃ. ಸೃಷ್ಟಿಸಿದ ಜಗತ್ತನ್ನು ಪಾಲಿಸುತ್ತ ಜಗದೇಕ ಮಾತೃವೂ ಆಗಿರುವಿ, ತಾಯಿ ಮಕ್ಕಳನ್ನು ತೊಟ್ಟಿಲಲ್ಲಿ ಮಮತೆಯಿಂದ ತೂಗುವಂತೆ, ಸಂಹಾರ ಕಾಲದಲ್ಲಿ ಜೀವಾತ್ಮರನ್ನು ನಿನ್ನುದರದೊಳಿಟ್ಟು ಆನಂದ ಪಡಿಸುವಿ. ಜೀವಾತ್ಮರಿಂದಲೇ ಅಭಿವ್ಯಕ್ತವಾಗುವ ನೀನು ಅವರ ಪುತ್ರನೂ ಹೌದು. ಹೀಗೆ ನಿನಗೂ ನಮಗೂ ಇರುವ ಬಾಂಧವ್ಯ ಬಹುಮುಖವಾದುದು. ಆದ್ದರಿಂದಲೂ ನಮ್ಮ ಪತಿ ಪುತ್ರಾದಿಗಳನ್ನು ಬಿಟ್ಟು ನಿನ್ನಲ್ಲಿಗೆ ಬಂದೆವು.

ಎಂಬುದಾಗಿ ಗೋಪಿಕಾಸ್ತ್ರೀಯರು ತಮ್ಮ ಪತಿಪುತ್ರಾದಿಗಳನ್ನು ಬಿಟ್ಟು ಕೃಷ್ಣನಲ್ಲಿಗೆ ಬಂದಿರುವುದನ್ನು ಸಮರ್ಥಿಸಿದಾಗ, ಅವರ ಜ್ಞಾನಭಕ್ತಿಗಳಿಗೆ ಮೆಚ್ಚಿಕೊಂಡ ಶ್ರೀಕೃಷ್ಣ ಅವರಿಗೆ ಒಲಿದು ಅನುಗ್ರಹಿಸಿದ. ನಾವೂ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರರಾಗಬೇಕಾದರೆ ಗೋಪಿಕಾಸ್ತ್ರೀಯರ ಜ್ಞಾನ-ಪ್ರೇಮಗಳನ್ನು ಶ್ರೀಕೃಷ್ಣನಲ್ಲಿ ತೋರಿಸಬೇಕು.

* * *

## 8. ನಾವೆಲ್ಲರೂ ಪರೀಕ್ಷಿತನಂತೆಯೇ

ಆಧ್ಯಾತ್ಮಿಕ ಕ್ಷೇತ್ರದಲ್ಲಿ ಭಾಗವತದ ಸ್ಥಾನವು ಮಹತ್ತರವಾದುದು, ಭಗವಂತನ ಮತ್ತು ಭಕ್ತರ ಮಹಿಮೆಯ ಗಾಥಗಳ ಜೊತೆಗೆ ಅಪೂರ್ವ ಶಾಸ್ತ್ರಾರ್ಥಗಳನ್ನು ಹೃದ್ಯ, ಗಂಭೀರ ಶೈಲಿಯಲ್ಲಿ ತಾತ್ವಿಕ ಉಪಾಖ್ಯಾನಗಳೊಂದಿಗೆ ವಿವರಿಸಿ ನಮ್ಮ ಅಂತರಂಗದಲ್ಲಿ ಭಕ್ತಿಯ ಸಂಸ್ಕಾರಗಳನ್ನು ಬಲವಾಗಿ ಮೂಡಿಸುವ ಮಹಾಗ್ರಂಥವಾಗಿದೆ. ಋಷಿಯನ್ನು ಅವಮಾನಿಸಿ ಶಾಪಗ್ರಸ್ತನಾಗಿ ತಕ್ಷಕನ ಆಕ್ರಮಣದಿಂದ ಮೃತನಾದ ಪರೀಕ್ಷಿತನಿಗಾಗಿ ಮಾತ್ರ ಈ ಭಾಗವತವು ಹೊರಟಿಲ್ಲ. ನಾವೆಲ್ಲರೂ ಪರೀಕ್ಷಿತನಂತೆಯೇ ಇರುವೆವು. ನಮ್ಮ ಪೂರ್ವಜರಾದ ಋಷಿಗಳನ್ನೆಲ್ಲಾ ನಮ್ಮ ಕೃತಿಗಳಿಂದ ಅವಹೇಳನೆ ಮಾಡಿ ನಾವೆಲ್ಲಾ ಒಂದು ರೀತಿಯಿಂದ ಶಾಪಗ್ರಸ್ತರೇ ಆಗಿರುವೆವು. ಸಂಸಾರವೆಂಬ ತಕ್ಷಕ ಹಾವು ತನ್ನ ವಿಷಜ್ವಾಲೆಯಿಂದ ಪ್ರತಿಕ್ಷಣ ನಮ್ಮನ್ನು ಕಚ್ಚುತ್ತಲೇ ಇದೆ. ನಾವೂ

ಪರೀಕ್ಷಿತನಂತೆ ವಿಷಯ ಭೋಗಗಳ ಆಸೆಯನ್ನು ತೊರೆದು ಭಗವಂತನ ಭಕ್ತಿಯ ದೀಕ್ಷೆಯನ್ನು ತೊಡಬೇಕು. ಭಗವಂತನ ಕಥಾಮೃತದಿಂದ ನಮ್ಮ ಜೀವನವನ್ನು ಆಪ್ಯಾಯಿತಗೊಳಿಸಬೇಕು.

* * *

## 9. ಸಂಪರ್ಕ ಮಾಧ್ಯಮ

ಶ್ರೀ ಮಧ್ವರು ಎಲ್ಲ ಭಕ್ತರ ದುರಿತಾಪಹಾರಕ್ಕಾಗಿ, ತತ್ವಜ್ಞಾನದ ಪ್ರಚಾರಕ್ಕಾಗಿ ಕೇಂದ್ರ ಬಿಂದುವಾಗಿ ಉಡುಪಿಯಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠೈಗೈದರು. ಹೊರತು ತಮ್ಮ ಪೂಜೆಗಾಗಿ ಅಲ್ಲ. ಅವರು ಎಲ್ಲೆಡೆ ಶ್ರೀಹರಿಯನ್ನು ಕಾಣುವ ಶ್ರೇಷ್ಠ ಅನುಭಾವಿಗಳು. ಬಾಲ್ಯದಲ್ಲಿ-ವಾಸುದೇವನಾಗಿದ್ದಾಗಲೇ ಮನೆ, ಮರ, ಗುಡ್ಡ, ಗದ್ದೆಗಳಲ್ಲಿ ಶ್ರೀಹರಿಯನ್ನು ಕಂಡು ನಮಿಸುತಿದ್ದವರು. ಯಾರಿಗೂ ತಿಳಿಸದೇ ಮನೆ ಬಿಟ್ಟು ಕಾಡೆಲ್ಲ ತಿರುಗಿ ದೇವಾಲಯಗಳೆಲ್ಲ ನೋಡಿ ಹಿಂತಿರುಗಿದ ವಾಸುದೇವನು ತಂದೆ "ಏಕಾಕಿಯಾಗಿ ಕಾಡೆಲ್ಲ ಅಲೆಯಲು ಹೆದರಿಕೆಯಾಗ ಯಾಗಲಿಲ್ಲವೇ?" ಎಂದು ಕೇಳಿದರೆ, "ಶ್ರೀಹರಿ ಎಲ್ಲೆಡೆ ಸಹಚರನಾಗಿರುವಾಗ ನಾನು ಏಕಾಕಿ ಹೇಗೆ?" ಎಂದು ಪ್ರಶ್ನಿಸಿದ ಭಗವತ್ಪ್ರಜ್ಞೆ ಅವರದ್ದು.

ವಿಶ್ವವ್ಯಾಪಿಯಾದ ಭಗವಂತನ ಸಂಪರ್ಕ ಪಡೆಯಲು ಒಂದು ಮಾಧ್ಯಮವನ್ನಾಗಿ ಶ್ರೀಕೃಷ್ಣನನ್ನು ಸ್ಥಾಪಿಸಿದರು.

ಆಕಾಶವಾಣಿ ಕೇಂದ್ರದಿಂದ ಬಿತ್ತರಿಸಿದ ಸಂಗೀತ ಎಲ್ಲೆಡೆ ತರಂಗಗಳಾಗಿ ಹರಡಿದ್ದರೂ ಅದನ್ನು ಕೇಳಲು ನಮಗೆ ಟ್ರಾನ್ಸಿಸ್ಟರ್ ಬೇಕಾಗುವಂತೆ.

* * *

## 10. ಶ್ರೀಕೃಷ್ಣನನ್ನು ದೂರೀಕರಿಸುವ ಬದುಕು ಸುಟ್ಟುಹೋದೀತು

ಮಹಾಭಾರತದ ಯುದ್ಧವೆಲ್ಲ ಮುಗಿದ ಬಳಿಕ ರಥದಿಂದ ಮೊದಲು ಅರ್ಜುನನ್ನು ಇಳಿಸಿ, ಆಮೇಲೆ ಸಾರಥಿಯಾದ ಕೃಷ್ಣ ಕೆಳಗಿಳಿದ. ಕೃಷ್ಣ ಇಳಿದಾಕ್ಷಣ ರಥ ಸುಟ್ಟುಹೋಯಿತು. ಒಂದು ವೇಳೆ ಅರ್ಜುನನಿಗಿಂತ ಮೊದಲೇ ಕೃಷ್ಣ ಇಳಿದಿದ್ದಲ್ಲಿ ಆರ್ಜುನಸಹಿತವಾಗಿಯೇ ಆ ರಥ ಸುಟ್ಟು

ಹೋಗುತ್ತಿತ್ತು. ಅದಕ್ಕಾಗಿಯೇ ಅರ್ಜುನನ್ನು ಮೊದಲು ಇಳಿಸಿ, ಮತ್ತೆ ಕೃಷ್ಣ ಇಳಿದನು ಎಂಬುದಾಗಿ ಕಥೆಯೊಂದಿದೆ. ಇದರಲ್ಲಿಯ ತಾತ್ವಿಕಾಂಶವನ್ನು ನಾವು ಗ್ರಹಿಸಬೇಕು. ನಮ್ಮ ಜೀವನ ರಥವೂ ಸುಡದೆ, ನಾಶವಾಗದೆ ಸುರಕ್ಷಿತವಾಗಿರಬೇಕೆಂದರೆ ಅದರಲ್ಲಿ ಭಗವಂತನಿರಬೇಕು. ಭಗವಂತನಿಲ್ಲದ ಬದುಕು ಶಾಂತಿ, ನೆಮ್ಮದಿಗಳಿಲ್ಲದೆ ಸುಟ್ಟು ಹೋದಂತೆಯೇ. ಭಗವಂತನಿಲ್ಲದ ಬದುಕಲ್ಲಿ ಶಾಂತಿ, ನೆಮ್ಮದಿಗಳು ದೊರಕಲು ಸಾಧ್ಯವೇ ಇಲ್ಲ. ಎಂಬುದಾಗಿ ಶ್ರೀಮದಾಚಾರ್ಯರೂ ಒತ್ತಿ ಹೇಳಿರುತ್ತಾರೆ. ಭಗವಂತನನ್ನು ನಮ್ಮ ಬದುಕಿಂದ ಹೊರಹಾಕಲು ಯತ್ನಿಸುತ್ತಿರುವ ನಾವು ಈ ಕುರಿತು ಎಚ್ಚರದಿಂದಿರಬೇಕು.

* * *

## 11. ಸ್ವೀಕರಿಸುವುದಿಲ್ಲ

ಶ್ರೀಹರಿ ತನ್ನ ನಡೆ-ನುಡಿಗಳಿಂದ ನಾವು ಹೇಗೆ ನಡೆದುಕೊಳ್ಳಬೇಕೆಂಬುದನ್ನು ತೋರಿಸಿಕೊಟ್ಟಿರುವನು. ಹೀಗೆ ಅವನು ನೀಡಿದ ಸಂದೇಶವನ್ನು ಜೀವನದಲ್ಲಿ ಅಳವಡಿಸಿಕೊಳ್ಳದೆ ಅವನಿಗೆ ಎಷ್ಟೆಷ್ಟು ಪೂಜೆ ಪುರಸ್ಕಾರಾದಿಗಳನ್ನು ಸಮರ್ಪಿಸಿದರೂ ಅದರಿಂದ ಅವನು ತೃಪ್ತನಾಗಲಾರ.

ಶ್ರೀಕೃಷ್ಣ ಸಂಧಾನಕ್ಕಾಗಿ ಹಸ್ತಿನಾಪುರಕ್ಕೆ ಹೋದಾಗ ಅಲ್ಲಿ ದುರ್ಯೋಧನಾದಿಗಳು ಅವನನ್ನು ತಮ್ಮ ಪಕ್ಷಕ್ಕೆ ಎಳೆದುಕೊಳ್ಳಬೇಕೆಂದು ಏನೇನೋ ಉಪಚಾರಗಳನ್ನು ವ್ಯವಸ್ಥೆಗೊಳಿಸಿದ್ದರು. ಆದರೆ ಶ್ರೀಕೃಷ್ಣನು ತಾನು ಯಾವ ಶಾಂತಿ ಸಂದೇಶವನ್ನು ಹೊತ್ತು ತಂದಿರುವನೋ ಅದನ್ನು ಸ್ವೀಕರಿಸಲು ಸಿದ್ಧರಿಲ್ಲದ ಅವರ ಯಾವುದೇ ಉಪಚಾರ, ಸತ್ಕಾರಗಳನ್ನು ಸ್ವೀಕರಿಸಿಲ್ಲ.

ಇಂದು ನಾವು ಶ್ರೀಕೃಷ್ಣನಿಗೆ ಅರ್ಪಿಸುವ ಉಪಚಾರಾದಿಗಳೂ ದುರ್ಯೋಧನನ ಉಪಚಾರದಂತವುಗಳೇ, ಶ್ರೀಕೃಷ್ಣ ನಮಗೆ ನೀಡಿದ ಸಂದೇಶವನ್ನು ಜೀವನದಲ್ಲಿ ಪಾಲಿಸದ ನಾವು, ಶ್ರೀಕೃಷ್ಣನಿಗೆ ಪೂಜೆ ಪುನಸ್ಕಾರಾದಿಗಳನ್ನಷ್ಟೇ ಸಲ್ಲಿಸುವೆವು. ಆದರೆ ಇಂತವುಗಳನ್ನು ಸ್ವೀಕರಿಸುವವನು ಅವನಲ್ಲ.

## 12. ನಾವೂ ದುರ್ಯೋಧನರೇ

ಅರ್ಜುನ ಮತ್ತು ದುರ್ಯೋಧನರಿಬ್ಬರೂ ಶ್ರೀಕೃಷ್ಣನಲ್ಲಿ ಸಹಾಯವನ್ನು ಕೇಳಲು ಹೋಗುವರು. ಇವರಲ್ಲಿ ಅರ್ಜುನ ಶ್ರೀಕೃಷ್ಣನನ್ನು ಆರಿಸಿಕೊಂಡರೆ, ದುರ್ಯೋಧನ ಶ್ರೀಕೃಷ್ಣನನ್ನು ಹೊರತಾಗಿ ಸೈನಿಕರನ್ನು ಆರಿಸಿಕೊಂಡ. ನಾವೂ ದುರ್ಯೋಧನರೇ. ಒಂದೆಡೆ ಶ್ರೀಕೃಷ್ಣನನ್ನು ಮತ್ತೊಂದೆಡೆ ಭೌತಿಕ ಭೋಗಭಾಗ್ಯಗಳನ್ನು ಇಟ್ಟರೆ ನಾವು ಭೋಗಭಾಗ್ಯಗಳನ್ನೇ ಆರಿಸಿಕೊಳ್ಳುವೆವು.

ಜೀವನದಲ್ಲಿ ಜಯಶೀಲರಾಗಬೇಕಾದರೆ ಹೀಗಾಗಬಾರದು.

* * *

## 13. ಅಧ್ಯಾತ್ಮ ಸಂಪತ್ತು ನಿಜವಾದ ಸಂಪತ್ತು

ಕಾತ್ಯಾಯಿನೀ ಮತ್ತು ಮೈತ್ರೇಯೀ ಇವರಿಬ್ಬರು ಯಾಜ್ಞವಲ್ಕ್ಯರ ಪತ್ನಿಯರು. ತಾವು ಸರ್ವಸಂಗ ಪರಿತ್ಯಾಗಕ್ಕೆ ಸಂಕಲ್ಪ ಮಾಡಿ ಯಾಜ್ಞವಲ್ಕ್ಯರು ತಮ್ಮ ಆಸ್ತಿಯನ್ನು ಇಬ್ಬರೂ ಪತ್ನಿಯರಿಗೂ ಸಮಪಾಲು ಹಂಚಿದರು. ಅವರಿಬ್ಬರಲ್ಲಿ ಮೈತ್ರೇಯೀ ಕೇಳಿದಳು- 'ಪೂಜ್ಯರೇ, ಸರ್ವಸಂಪದ್ಭರಿತವಾದ ಈ ಭೂಲೋಕವೇ ನನಗೆ ದೊರೆತರೆ ಅದರಿಂದ ಮೋಕ್ಷ ದೊರಕಬಹುದೆ?' ಎಂದು. ಯಾಜ್ಞವಲ್ಕ್ಯರಂದರು- ಸಕಲ ಭೋಗ ಸಂಪತ್ತುಗಳನ್ನು ಹೊಂದಿರುವ ಭಾಗ್ಯವಂತನ ಜೀವನದಂತೆ ನಿನ್ನ ಐಹಿಕ ಜೀವನವೂ ಅದರಿಂದ ಸುಖಮಯವಾದೀತು. ಅದರಿಂದ ಮೋಕ್ಷ ಖಂಡಿತಾ ದೊರಕದು-**ಅಮೃತತ್ವಸ್ಯ ತು ನಾಶಾಸ್ತಿ ವಿತ್ತೇನೇತಿ**-ಮೋಕ್ಷವನ್ನು ಹಣದಿಂದ ಖರೀದಿಸಲಾಗದು ಎಂದು. ಮೈತ್ರೇಯೀ ಹೇಳಿದಳು-

**'ಯೇನಾಹಂ ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಮ್ ।**
**ಯದೇವ ಭಗವಾನ್ ವೇತ್ಥ ತದೇವ ಮೇ ಬ್ರೂಹಿ ॥'**

'ಅಮೃತತ್ವವನ್ನು ದೊರಕಿಸಿಕೊಡದ ಈ ಸಂಪತ್ತು ನನಗೇಕೆ? ನೀವು ತಿಳಿದಿರುವ ತತ್ವಜ್ಞಾನವನ್ನು ನನಗೆ ಉಪದೇಶಿಸಿರಿ'. ಈ ಸಂವಾದದಿಂದ ಜೀವನದ ಅತ್ಯಂತ ಮುಖ್ಯವಾದ ಉದ್ದೇಶವನ್ನು ನಾವು ತಿಳಿದುಕೊಳ್ಳಬಹುದು. ಮನೆ, ಮಠ, ಭೋಗಸಂಪತ್ತು ಇದಿಷ್ಟೇ ಮಾನವನ ಜೀವನದ ಪರಮೋದ್ದೇಶವಲ್ಲ. ನಚಿಕೇತ ಹೇಳಿದಂತೆ ಅವೆಲ್ಲ -

'ಶ್ವೋಽಭಾವಾಃ' – ನಶ್ವರವಾದವು. ಶಾಶ್ವತವಾದ ಮೋಕ್ಷವನ್ನು ಕೊಡುವ ಸಂಪತ್ತನ್ನು ನಾವು ಪಡೆಯಬೇಕು. ಅದು ಅಧ್ಯಾತ್ಮಸಂಪತ್ತು,

* * *

## 14. ಭರತ– ಪ್ರಹ್ಲಾದರನ್ನು ಕೊಡಿ

"ಈ ದೇಹ ನಶ್ವರವಾದುದು. ಇದರಿಂದ ನಾವು ಮೂರನ್ನು ಸಾಧಿಸಬೇಕು–ಮೊದಲನೆಯದು ವಿದ್ಯೆ. ಈ ಜನ್ಮದಲ್ಲಿ ನಾವು ಗಳಿಸಿದ ವಿದ್ಯೆ ಸಂಸ್ಕಾರದ ರೂಪದಲ್ಲಿ ಜನ್ಮ ಜನ್ಮಾಂತರಕ್ಕೂ ಮುಂದುವರಿಯುತ್ತದೆ. ಎರಡನೆಯದು ಕರ್ಮ. ನಾವು ಮಾಡಿದ ಸತ್ಕರ್ಮದಿಂದ ಹುಟ್ಟಿದ ಪುಣ್ಯ ಮುಂದಿನ ಜನ್ಮಗಳಲ್ಲಿ ಫಲ ಕೊಡುತ್ತದೆ. ಮೂರನೆಯದು ಸಂತತಿ. ಒಳ್ಳೆಯ ಸಂಸ್ಕಾರ ನೀಡಿ ಸಂತತಿಯನ್ನು ಮುಂದುವರಿಸಬೇಕು. ಇವು ಮೂರನ್ನು ಈ ಮನುಷ್ಯ ದೇಹದಿಂದ ಸಾಧಿಸಬೇಕು" ಎಂದು ಆಚಾರ್ಯರು ಸಂದೇಶ ನೀಡಿದ್ದಾರೆ. ನಾವು ನಮ್ಮ ಸಮಾಜದ ಗೃಹಿಣಿಯರಿಂದ ಭರತನಂತಹ ಗುಣವಂತ ಮಕ್ಕಳನ್ನು ನಿರೀಕ್ಷಿಸುತ್ತೇವೆ. ಕೈಕೇಯಿ ರಾಮನನ್ನು ಕಾಡಿಗೆ ಕಳುಹಿಸುವಂತಹ ಕೆಲಸವನ್ನು ಮಾಡಿದರೂ ಬ್ರಹ್ಮದೇವರು ಅವಳಿಗೆ ಉತ್ತಮಲೋಕವನ್ನೇ ನೀಡಿದ್ದರು.

ಏಕೆಂದರೆ, ಅವಳು ಕೆಟ್ಟವಳಾದರೂ ಭರತನಂತಹ ಮಗನನ್ನು ಕೊಟ್ಟಿದ್ದಾಳೆ. ಅದಕ್ಕಾಗಿ ಅವಳು ಮಾಡಿದ ತಪ್ಪಿನಿಂದಾದ ಪಾಪ ಕಳೆಯಿತು. ಆದ್ದರಿಂದ ಗೃಹಿಣಿಯರು ಭರತನಂತಹ ಸಂಸ್ಕಾರ ಭರಿತ ಮಕ್ಕಳನ್ನು ನೀಡಬೇಕು.

ಗೃಹಸ್ಥರು ಪ್ರಹ್ಲಾದನಂತಹ ಮಕ್ಕಳನ್ನು ಕೊಡಬೇಕು. ಹಿರಣ್ಯಕಶಿಪು ದುಷ್ಟನಾದರೂ ಅವನು ಪ್ರಹ್ಲಾದನಂತಹ ಭಗವದ್ಭಕ್ತನ ತಂದೆಯಾಗಿದ್ದ. ಅವನಿಗೆ ಸದ್ಗತಿಯಾಗಲು ಇದೂ ಒಂದು ಕಾರಣ.

* * *

## 15. ಲಕ್ಷ್ಮೀನಾರಾಯಣರು

ಸಂಸ್ಕೃತಿ ಉಳಿದಾಗ ಲಕ್ಷ್ಮೀ ನಲಿಯುತ್ತಾಳೆ. ನಾರಾಯಣನು ಅಲ್ಲಿ ಸನ್ನಿಹಿತನಾಗುತ್ತಾನೆ. ಸಂಸ್ಕೃತಿಯನ್ನು ಮನೆ ಮನೆಯಲ್ಲಿ ಉಳಿಸುವ ಜವಾಬ್ದಾರಿ ನಿಮ್ಮ ಮೇಲಿದೆ.

ನರಕಾಸುರನ ಜೊತೆಗೆ ಹೋರಾಟ ಮಾಡುವಾಗ ಶ್ರೀಕೃಷ್ಣ ಸ್ವಲ್ಪ ಮೂರ್ಛಿತನಾದಂತೆ ತೋರಿದಾಗ ಸತ್ಯಭಾಮೆ ಬಿಲ್ಲು ಹಿಡಿದು ನರಕಾಸುರನ ವಿರುದ್ಧ ಹೋರಾಡುತ್ತಾಳೆ.

ಅದರಂತೆ ನರಕಾಸುರ-ಕಲಿ-ದುಷ್ಟಜನಗಳ ವಿರುದ್ಧದ ಹೋರಾಟದಲ್ಲಿ ಗಂಡಸರು ಸ್ತಬ್ಧರಾದಾಗ ಸತ್ಯಭಾಮೆಯರಂತೆ ಸ್ತ್ರೀಯರೂ ಹೋರಾಟ ಮಾಡಬೇಕು.

ಲಕ್ಷ್ಮೀ ಮಾಲೆ ಹಿಡಿದು ಬಂದಾಗ ಅಲ್ಲಿ ಅಸುರರು ಕೊರಳು ಚಾಚಿ ತಮಗೇ ಮಾಲೆ ಹಾಕುವಂತೆ ಮುಂದೆ ಬಂದರು. ಅವರೆಡೆಗೆ ಗಮನಕೊಡದೆ ಲಕ್ಷ್ಮೀ ನಾರಾಯಣನ ಕೊರಳಿಗೆ ಮಾಲೆ ಹಾಕಿದಳು.

ಹಾಗೆ ಸಂಪತ್ತು ಬಂದಾಗ ದುರ್ವ್ಯಸನಗಳು ತಮಗೆ ಖರ್ಚು ಮಾಡುವಂತೆ ಮುಂದೆ ಬರುತ್ತವೆ. ಆದರೆ ನಾವು ನಮ್ಮ ಸಂಪತ್ತನ್ನು ನಾರಾಯಣನ ಸೇವೆಗೆ ಅರ್ಪಿಸಬೇಕು, ದುರ್ವ್ಯಸನಗಳಿಗಲ್ಲ.

* * *

## 16. ಯಜ್ಞೋಪವೀತ ಏಕೆ?

ಒಂದು ಶಾಲೆಯ ವಿದ್ಯಾರ್ಥಿಗಳಿಗೆ ಒಂದೇ ರೀತಿಯ ಸಮವಸ್ತ್ರವಿದೆ. ನಮ್ಮ ದೇಶದ ಸಿಪಾಯಿಗಳಿಗೆ ಸಮವಸ್ತ್ರವಿದೆ. ನಾವೆಲ್ಲ ಒಂದು ಸಂಸ್ಥೆಗೆ ಸೇರಿದವರು. ಒಂದೇ ದೇಶದ ರಕ್ಷಕರು ಎಂಬ ಭಾವನೆಯನ್ನೇ ಸದಾ ಜಾಗೃತವಾಗಿರಿಸುವುದು ಸಮವಸ್ತ್ರದ ಹಿನ್ನೆಲೆ.

ರಾಷ್ಟ್ರೀಯ ಗೌರವವನ್ನು ಹೆಚ್ಚಿಸಲು ರಾಷ್ಟ್ರೈಕ್ಯಭಾವವನ್ನು ಮೂಡಿಸಲು ರಾಷ್ಟ್ರಧ್ವಜ. ಅದರಂತೆ ಯಜ್ಞೋಪವೀತ. ಶಾಸ್ತ್ರವಿಹಿತ ಸತ್ಕರ್ಮಗಳೇ ಯಜ್ಞ, ಆ ಯಜ್ಞದ ದೀಕ್ಷೆಯನ್ನು ನಮ್ಮ ಮನಸ್ಸಿನಲ್ಲಿ ಜಾಗೃತಗೊಳಿಸುವುದೇ

ಉಪವೀತದ ಉದ್ದೇಶ. ನಿಷಿದ್ಧ ಕಾರ್ಯದಲ್ಲಿ ತೊಡಗಿದಾಗ ಈ ಉಪವೀತ ಎಚ್ಚರಿಕೆಯನ್ನು ನೀಡುತ್ತದೆ. ಯತಿಗಳಿಗೆ ಕಾಷಾಯ ವಿರಕ್ತಿಯ ಸಂಕೇತವಾಗಿರುವಂತೆ, ವೈದಿಕರಿಗೆ ಯಜ್ಞೋಪವೀತ ವೇದವಿಹಿತ ಕರ್ಮಾಚರಣೆಯ ಸಂಕೇತ.

* * *

## 17. ಜನಸೇವೆ ಅಂತರ್ಯಾಮಿಯ ಆರಾಧನೆಯಾಗಬೇಕು

ಪ್ರಹ್ಲಾದ ಹೇಳುತ್ತಾನೆ– **'ನಹ್ಯಚ್ಯುತಂ ಪ್ರೀಣಯತಃ ಬಹ್ವಾಯಾಸಃ'** ಭಗವದಾರಾಧನೆಗೆ ಆಯಾಸಪಡಬೇಕಿಲ್ಲ. **'ಆತ್ಮತ್ವಾತ್ ಸರ್ವಭೂತಾನಾಂ'** ಸರ್ವಜೀವಿಗಳಿಗೂ ಅವನು ಆತ್ಮ. ಆತ್ಮನಿಲ್ಲದೇ ಶರೀರದಲ್ಲಿ ಚಟುವಟಿಕೆಗಳಿಲ್ಲ. ಭಗವಂತನಿಲ್ಲದೆ ನಮ್ಮಲ್ಲಿ ಕ್ರಿಯೆಯಿಲ್ಲ. ಸರ್ವಭೂತಗಳಲ್ಲೂ ಅವನಿದ್ದು ನಮ್ಮ ಸೇವಾಸ್ವೀಕಾರಕ್ಕೆ, ಕಣ್ಣಮುಂದೆ ಸದಾಸಿದ್ಧ. ಆದ್ದರಿಂದ ಮೂರ್ತಿಯಲ್ಲಿ ಹೇಗೋ ಹಾಗೆ ಸಕಲ ಪ್ರಾಣಿಗಳಲ್ಲಿ ಅವನನ್ನು ಕಂಡು ಅವುಗಳನ್ನು ಉಪಕರಿಸಬೇಕು. ಅದರಿಂದ ಅಂತರ್ಯಾಮಿ ತೃಪ್ತನಾಗಬೇಕು. ಸಮಾಜಸೇವೆ ನಮ್ಮ ಕೀರ್ತಿ, ಐಶ್ವರ್ಯಗಳ ಗಳಿಕೆಯ ಕಾರ್ಯವಲ್ಲ. ಅದಕ್ಕೆ ಕರುಣೆ ಬೇಕು. ಕಳಕಳಿ ಬೇಕು. ಭಗವಂತನಲ್ಲಿ ಭಕ್ತಿಯಿಂದ ಆರಾಧನಾ ಮನೋಭಾವ ಇರಬೇಕು. ತ್ಯಾಗ ಬೇಕು. ಇದಿಲ್ಲದ ಸೇವೆ ಸೇವೆಯಲ್ಲ.

* * *

## 18. ಸ್ಮರಣೆಯ ಬೇರೆ ಬೇರೆ ಹಂತ

**'ಖಂಡಸ್ಮೃತಿರ್ಧಾರಣಾ ಸ್ಯಾತ್'**– ಆಗಾಗ್ಗೆ ವಿಚ್ಛೇದಕ್ಕೊಳಗಾಗುವ ಸ್ಮರಣೆ ಧಾರಣೆ ಎನಿಸಿದರೆ **'ಅಖಂಡಾ ಧ್ಯಾನಮುಚ್ಯತೇ'** – ಅವಿಚ್ಛಿನ್ನವಾಗಿ ನಡೆಸುವ ಸ್ಮರಣೆ ಧ್ಯಾನ ಎನಿಸುವುದು. **'ಅಪ್ರಯತ್ನಾತ್ ಸಮಾಧಿಶ್ಚ......'** ಧ್ಯಾನವನ್ನು ವಿಶೇಷವಾಗಿ ನಡೆಸುತ್ತ ಅನಾಯಾಸವಾಗಿ ಭಗವಂತನನ್ನು ಧ್ಯಾನಿಸುವ ಹಂತಕ್ಕೆ ತಲುಪಿತೆಂದರೆ ಅದು **'ಸಮಾಧಿ'** ಎನಿಸುವುದು.

ಹೀಗೆ ಭಗವಂತನ ಸ್ಮರಣೆಯ ಹಂತ ಹಂತವನ್ನು ಗುರುತಿಸಿ ತೋರಿಸಿದ ಆಚಾರ್ಯರು **'ಯತತೋಽಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು**

**ಲಯಂ ವ್ರಜತಿ'**- ಭಗವಂತನ ಸ್ಮರಣೆ ಮಾಡಲಾಗದೆ, ಸ್ಮರಣೆಗಾಗಿ ಯತ್ನಿಸಿದರೂ ಅಷ್ಟರಿಂದಲೇ ಸಕಲ ಪಾಪಗಳ ಪರಿಹಾರ ರೂಪವಾದ ಫಲ ದೊರಕುವುದೆಂದು ಸಾರುವುದರ ಮೂಲಕ ಸಾಧಕರಿಗೆ ಸಾಧನೆಯ ವಿಷಯದಲ್ಲಿ **'ಆತ್ಮವಿಶ್ವಾಸ'** ಮೂಡುವಂತೆ ಮಾಡಿ ಈ ಸಾಧನೆಯ ವಿಷಯದಲ್ಲಿ ಔದಾರ್ಯವನ್ನು ವ್ಯಕ್ತಪಡಿಸಿದ್ದಾರೆ.

* * *

## 19. ಧ್ಯಾನದ ಸಮಯದಲ್ಲಿ ಕಾಣಿಸುವುದು ವಾಸನಾಮಯ ಪ್ರತಿಮೆಯಷ್ಟೇ

ಜಡವಾದ ಪ್ರತಿಮೆಯೇ ದೇವರಲ್ಲ. ಅಂತೆಯೇ ಧ್ಯಾನದ ಸಂದರ್ಭದಲ್ಲಿ ಮನಸ್ಸಿನಲ್ಲಿ ಕಾಣಿಸುವ ರೂಪವೂ ದೇವರಲ್ಲ, ಅದು ಮನಸ್ಸಿನ ಸಂಸ್ಕಾರಗಳಿಂದ ರೂಪುಗೊಂಡ ವಾಸನಾಮಯವಾದ ಪ್ರತಿಮೆ. ಅದರಲ್ಲಿ ದೇವರು ಇದ್ದಾನೆಂದು ಅನುಸಂಧಾನ ಮಾಡಬೇಕೇ ಹೊರತು ಅದೇ ದೇವರೆಂದು ಚಿಂತಿಸಬಾರದು.

### ಧ್ಯಾನಂ ನಿಶ್ಚಿತತತ್ವಸ್ಯ

ನೀರು ಕಲುಷಿತವಾಗಿದ್ದರೆ, ಅಥವಾ ಅಲ್ಲೋಲಕಲ್ಲೋಲವಾಗಿದ್ದರೆ- ಅಂತಹ ನೀರಿನಲ್ಲಿ ಪ್ರತಿಬಿಂಬ ಕಾಣಿಸುವುದಿಲ್ಲ. ಅಂತೆಯೇ ಅತಃಕರಣ ಅಜ್ಞಾನ ವಿಪರೀತಜ್ಞಾನಗಳಿಂದ ಕಲುಷಿತವಾಗಿದ್ದಲ್ಲಿ, ಸಂಶಯಗಳಿಂದ ತೊಳಲಾಡುತಿದ್ದಲ್ಲಿ ಅಂತಹ ಅಂತಃಕರಣದಲ್ಲಿ ದೇವರ ರೂಪವನ್ನು ಧ್ಯಾನಿಸಲು ಸಾಧ್ಯವಿಲ್ಲ. ಅದಕ್ಕಾಗಿಯೇ ಶ್ರೀಮದಾಚಾರ್ಯರು **'ಧ್ಯಾನಂ ನಿಶ್ಚಿತತತ್ವಸ್ಯ....'**-ಎಂಬುದಾಗಿ ಶ್ರವಣಮನನಗಳಿಂದ ಸಂಶಯ, ಅಜ್ಞಾನಗಳನ್ನು ಪರಿಹರಿಸಿ ತತ್ವನಿಶ್ಚಯದಿಂದ ಪ್ರಶಾಂತವಾಗುವ ಅಂತಃಕರಣದಲ್ಲಿ ಭಗವದ್ರೂಪವನ್ನು ಧ್ಯಾನಿಸಬೇಕು ಎಂದು ಸಂದೇಶಿಸಿರುವರು.

* * *

## 20. ಯಾವತ್ತೂ ಏಕಾಂತದಲ್ಲಿ ಇರಬಾರದು

ಮನಸ್ಸು ಕೆಟ್ಟ ವಿಚಾರಗಳ ಬಗ್ಗೆ ಹರಿಯದೆ, ಸದ್ವಿಚಾರಗಳನ್ನೇ ಚಿಂತಿಸುವಂತೆ ಮಾಡಬೇಕು. ಅದಕ್ಕಾಗಿ ಕೆಟ್ಟ ವಿಚಾರಗಳ ಬಗ್ಗೆ ಹರಿಯಲು

ಅವಕಾಶವನ್ನೇ ನೀಡಬಾರದು. ಯಾವತ್ತೂ ಒಂದಿಲ್ಲ ಒಂದು ಚಟುವಟಿಕೆಯಲ್ಲಿ ವ್ಯಾಪ್ತರಾಗಿಯೇ ಇದ್ದಲ್ಲಿ ಮನಸ್ಸಿಗೆ ಅವಕಾಶವಾದರೂ ಹೇಗೆ ದೊರಕುತ್ತದೆ? ನಮ್ಮ ಗುರುಗಳು ನೋಡಿ..... ಒಂದು ನಿಮಿಷ ಸುಮ್ಮನಿರದೆ, ಪಾದರಸದಂತೆ ಯಾವಾಗಲೂ ಒಂದಲ್ಲ ಒಂದು ಚಟುವಟಿಕೆಯಲ್ಲಿ ಮಗ್ನರಾಗಿಯೇ ಇರುತ್ತಾರೆ. ಹೀಗಿರುವುದರಿಂದ ಅವರ ಮನಸ್ಸಿಗೆ ಅಡ್ಡದಾರಿ ಹಿಡಿಯಲು ಪುರುಸೊತ್ತೇ ಇಲ್ಲದಂತಾಗಿದೆ. ಸನ್ಯಾಸಿಯಾದವರು ಯಾವತ್ತೂ ಏಕಾಂತದಲ್ಲಿರಬಾರದು. ಹಾಗಿದ್ದರೆ ಏನೇನೋ ಯೋಚನೆಗಳು ಪ್ರಾರಂಭವಾಗುತ್ತವೆ. ಅದಕ್ಕಾಗಿ ಶಿಷ್ಯರ ಜೊತೆಗೋ, ಸಹಪಾಠಿಗಳ ಜೊತೆಗೋ ಏನಾದರೂ ಶಾಸ್ತ್ರಚರ್ಚೆ ನಡೆಸುತ್ತಲೇ ಇರಬೇಕು, ಅಷ್ಟೇ ಅಲ್ಲದೆ, ಆಹಾರವೂ ವಿಚಾರದ ಮೇಲೆ ಪ್ರಭಾವ ಬೀರುವುದರಿಂದ, ಅದರ ಮೇಲೂ ನಿಯಂತ್ರಣ ತಂದುಕೊಂಡು ಹೆಚ್ಚಾಗಿ ಸಾತ್ವಿಕ ಆಹಾರವನ್ನೇ ಸೇವಿಸಬೇಕು. ಇದು ನಮ್ಮ ಗುರುಗಳು ಯಶಸ್ವಿಯಾಗಿ ಸನ್ಯಾಸವನ್ನು ಪಾಲಿಸಲು ಅಳವಡಿಸಿಕೊಂಡ ಸೂತ್ರ. ಅದರಂತೆ ನಾವೂ ನಡೆಯುತ್ತಿದ್ದೇವೆ. ಇತರ ಸಂನ್ಯಾಸಿಗಳು ನಡೆಯಬೇಕು.

* * *

## 21. ಅಶೌಚದ ಅವಧಿಯ ಕರ್ತವ್ಯಗಳು

ಜಾತಾಶೌಚ ಮೃತಾಶೌಚಗಳಿದ್ದಾಗ ಮಂತ್ರಪಠನ, ವೇದಾಧ್ಯಯನಗಳನ್ನು ನಡೆಸಿದಲ್ಲಿ, ಅಂತಹವನ ಪಾಲಿಗೆ ವೇದ, ಮಂತ್ರಗಳೆಲ್ಲ ನಿರ್ವೀರ್ಯಗಳಾಗುವುದು. ಹಾಗಾಗದಿರಲೆಂದೇ ಬ್ರಾಹ್ಮಣ್ಯದ ಉಳಿವಿಗೆ ಅತ್ಯವಶ್ಯಕವಾದ ಸೂರ್ಯಾರ್ಘ್ಯ ಹತ್ತು ಗಾಯತ್ರಿ ಮಂತ್ರಜಪ ಇವನ್ನು ಹೊರತುಪಡಿಸಿ ಉಳಿದೆಲ್ಲ ಅಧ್ಯಯನ ಪಾರಾಯಣಾದಿಗಳನ್ನು ಆ ಅವಧಿಯಲ್ಲಿ ನಿಷೇಧಿಸಲಾಗಿದೆ. ಹತ್ತು ದಿನಗಳ ಅವಧಿಯಲ್ಲಿ ಅಧ್ಯಯನಾದಿಗಳನ್ನು ನಿಲ್ಲಿಸಿ, ಜೀವನವಿಡೀ ನಡೆಸಬೇಕಾದ ಅಧ್ಯಯನ ಪಾರಾಯಣಗಳಲ್ಲಿ ವೀರ್ಯವತ್ತರ ಮಂತ್ರಗಳು ವಿನಿಯೋಗವಾಗುವಂತೆ ಎಚ್ಚರವಹಿಸುವುದು ಉತ್ತಮ ತಾನೇ?

ಆ ಅವಧಿಯಲ್ಲಿ ಅಧ್ಯಯನ ಪಾರಾಯಣಾದಿಗಳನ್ನು ನಡೆಸ-ಬಾರದಾದರೂ ಹರಿಸ್ಮರಣೆ, ಭಜನೆ ಮುಂತಾದುವನ್ನು ನಡೆಸಿ ಸಮಯವನ್ನು ಸಾರ್ಥಕಪಡಿಸಿಕೊಳ್ಳಬಹುದು.

ಶಾಸ್ತ್ರದಲ್ಲಿ ಗೃಹಸ್ಥನಿಗಿಂತ ಸನ್ಯಾಸಿಗಳಿಗೆ, ಬ್ರಹ್ಮಚಾರಿಗಳಿಗೆ ಅಧಿಕ ವಿಧಿನಿಷೇಧಗಳನ್ನು ವಿಧಿಸಲಾಗಿದೆ. ಆದುದರಿಂದ ಗೃಹಸ್ಥರಿಗಿಂತಲೂ ಹೆಚ್ಚು ಕಟ್ಟುನಿಟ್ಟಾಗಿ ಸನ್ಯಾಸಿಗಳು ಹೇಗೋ ಹಾಗೆ ಬ್ರಹ್ಮಚಾರಿಗಳು ಶಾಸ್ತ್ರವಿಧಿನಿಷೇಧಗಳನ್ನು ಪಾಲಿಸಬೇಕು. ಜಾತಾಶೌಚಮೃತಾಶೌಚಗಳಲ್ಲೂ ನಿಷೇಧಗಳನ್ನು ಹೆಚ್ಚೆಚ್ಚು ಕಟ್ಟುನಿಟ್ಟಾಗಿ ಪಾಲಿಸಬೇಕು; ಹೊರತು ಸಡಿಲಿಸಬಾರದು.

ಅಲ್ಲದೆ, ಅಶೌಚದ ಅವಧಿಯಲ್ಲಿ ಅಧ್ಯಯನಾದಿಗಳಿಗೆ ಅವಕಾಶವಿಲ್ಲದಿದ್ದರೂ **'ನಾನಾಜನಸ್ಯ ಶುಶ್ರೂಷಾ ಕರ್ತವ್ಯಾ ಕರವನ್ಮಿತೇಃ .....'** ಎಂದು ಶ್ರೀಮದಾಚಾರ್ಯರು ಸಂದೇಶಿಸಿರುವ ನಾನಾಜನರ ಶುಶ್ರೂಷೆಯನ್ನು ವಿಶೇಷವಾಗಿ ನಡೆಸಿ, ಆ ಅವಧಿಯನ್ನು ಸಾರ್ಥಕ ಪಡಿಸಿಕೊಳ್ಳಬಹುದು.

* * *

## 22. ರಾಮಾಯಣದಿಂದ ಭಗವದ್ಭಕ್ತಿ ಮತ್ತು ಮಾನವೀಯತೆ

ಭಗವಂತನು ಮಾನವ ಜನತೆಗೆ ತನ್ನ ನಡತೆಯಿಂದ ನೀಡಲು ರಾಮನಾಗಿ ಅವತರಿಸಿದಾಗ ವೇದವೇ ರಾಮಾಯಣ ವಾಙ್ಮಯದ ರೂಪದಲ್ಲಿ ಅವತರಿಸಿತು ಎಂಬುದಾಗಿ ರಾಮಾಯಣದ ಮಹಿಮೆಯನ್ನು ಕೊಂಡಾಡಲಾಗಿದೆ. ಮಾನವಜನತೆಗೆ ಉತ್ತಮ ಶಿಕ್ಷಣ ನೀಡುವುದೇ ಭಗವಂತನ ಅವತಾರದ ಉದ್ದೇಶವಾಗಿದೆ. ಬರೇ ರಾವಣ ಮೊದಲಾದ ದುಷ್ಟ ಜನತೆಯನ್ನು ಕೊಲ್ಲುವುದೇ ಭಗವಂತನ ಅವತಾರದ ಉದ್ದೇಶವಲ್ಲ. ತನ್ನ ನಡೆ ನುಡಿಗಳಿಂದ ಜನತೆಗೆ ಉತ್ತಮ ಜೀವನದ ಆದರ್ಶವನ್ನು ತೋರುವುದಕ್ಕಾಗಿಯೇ ಶ್ರೀರಾಮನ ಅವತಾರವಾಗಿದೆ. ತಾಯಿಯು ವೇಗದಿಂದ ನಡೆಯಬಲ್ಲಳು. ಆದರೆ ಮಗುವನ್ನು ನಡೆಸುವಾಗ ತನ್ನ ವೇಗವನ್ನು ಮೊಟಕುಗೊಳಿಸಿ ಮಗುವಿನ ಹೆಜ್ಜೆಗೆ ತಕ್ಕಂತೆ ತಾಯಿಯು

ಹೆಜ್ಜೆಯನ್ನಿಡುವಳು, ಅದರಂತೆ ನಮಗೆ ಉತ್ತಮ ಜೀವನದ ಮಾದರಿಯನ್ನು ತೋರಿಸುವುದಕ್ಕಾಗಿ ತನ್ನ ಮಹಾಶಕ್ತಿಯನ್ನು ಸೀಮಿತಗೊಳಿಸಿ ಮಾನವನಂತೆಯೇ ನಡೆದುಕೊಂಡು ಭಗವಂತನ ನಮಗೆ ಉತ್ತಮ ನೈತಿಕ ಮೌಲ್ಯಗಳನ್ನು ತೋರಿಸಿಕೊಡುವನು. ಮಾನವನನ್ನು ದೇವತ್ವಕ್ಕೆ ಏರಿಸುವುದಕ್ಕಾಗಿ ದೇವನು ಮಾನವನಾಗಿ ಅವತರಿಸಿದ್ದಾನೆಂದು ಹೇಳಬಹುದು. ಶ್ರೀರಾಮನ ಅವತಾರದಲ್ಲಿ ಇಂತಹ ಉದಾತ್ತ ಸ್ಫೂರ್ತಿಯನ್ನು ನಾವು ಪಡೆಯುತ್ತಿದ್ದೇವೆ. ನಮ್ಮ ದೇಶವು ರಾಮರಾಜ್ಯವಾಗಬೇಕೆಂದು ನಾವು ಬಯಸುತ್ತಿದ್ದೇವೆ. ಒಬ್ಬ ಪ್ರಧಾನ ಮಂತ್ರಿಯಿಂದಾಗಲಿ ರಾಷ್ಟ್ರಪತಿಯಿಂದಾಗಲಿ ನಮ್ಮ ರಾಜ್ಯವು ರಾಮರಾಜ್ಯವಾಗಲಾರದು. ಇದು ಪ್ರಜಾರಾಜ್ಯವಾಗಿದೆ. ಪ್ರಜೆಗಳಲ್ಲಿ ರಾಮನ ಉಚ್ಚ ಸದ್ಗುಣಗಳು ಪ್ರತಿಬಿಂಬಿತವಾದಾಗ ಮಾತ್ರ ಇದು ರಾಮರಾಜ್ಯವನಿಸಬಲ್ಲದು. ಹಿಂದೆ **'ಯಥಾ ರಾಜಾ ತಥಾ ಪ್ರಜಾಃ'** ರಾಜನಂತೆ ಪ್ರಜೆಗಳು ಎಂಬ ಸೂಕ್ತಿ ಪ್ರಚಲಿತವಿತ್ತು. ಇಂದು ಈ ನಾಣ್ಣುಡಿಯನ್ನು **'ಯಥಾ ಪ್ರಜಾಃ ತಥಾ ರಾಜಾ'** ಪ್ರಜೆಗಳು ಹೇಗೋ ಹಾಗೆಯೇ ರಾಜನು ಎಂದು ಬದಲಾಯಿಸಬೇಕಾಗಿದೆ. ಪ್ರಜೆಗಳೆಲ್ಲರೂ ರಾಮನಂತಿದ್ದರೆ ಮಾತ್ರ ಇದು ರಾಮರಾಜ್ಯವಾಗಲು ಸಾಧ್ಯ.

ಪ್ರಜೆಗಳಲ್ಲಿ ರಾಮನ ಆದರ್ಶವನ್ನು ತುಂಬಲು ರಾಮಾಯಣದ ಸಂದೇಶವನ್ನು ನಾಡಿನ ಮೂಲೆ ಮೂಲೆಗಳಲ್ಲಿ ನಾವು ಹರಡಿಸಬೇಕಾಗಿದೆ. ಶ್ರೀರಾಮನ ಅದ್ಭುತ ಮಹಿಮೆ ಮತ್ತು ಅಮಿತ ಸದ್ಗುಣಗಳನ್ನು ನಾವು ಅರ್ಥಮಾಡಿಕೊಂಡಂತೆ ಭಗವದ್ಭಕ್ತಿ ಮತ್ತು ಮಾನವೀಯತೆ ಇವೆರಡೂ ನಮ್ಮಲ್ಲಿ ಮೂಡಲು ಅವಕಾಶವಾಗುವುದು.

* * *

## 23. ದೇವರಿಗೆ ಸ್ವಲ್ಪ ಜಾಗ ಕೊಡಿ!

ಬಲಿ ಚಕ್ರವರ್ತಿಯ ಯಜ್ಞದಲ್ಲಿ ಭಗವಂತನು ವಾಮನನಾಗಿ ಬಂದ ಬಲಿಯ ಬಳಿ ಮೂರು ಹೆಜ್ಜೆ ಜಾಗ ಕೇಳಿದ. ಬಲಿ ನೀಡಿದ ಕೂಡಲೇ ವಾಮನ ತನ್ನ ಎರಡು ಪಾದಗಳಿಂದ ಬ್ರಹ್ಮಾಂಡವನ್ನೇ ವ್ಯಾಪಿಸಿದ. ಮೂರನೇ ಕಾಲನ್ನು ಎಲ್ಲಿ ಇಡಲಿ? ಎಂದು ಮತ್ತೆ ಬಲಿಯನ್ನೇ ಕೇಳಿದ.

ಈ ವಾಮನಾವತಾರದ ಕಥೆಯಲ್ಲಿ ಉತ್ತಮ ಸಂದೇಶ ಅಡಗಿದೆ. ಬಲಿಯು ಭಗವಂತನಿಗೆ ಸ್ವಲ್ಪ ಜಾಗ ಕೊಟ್ಟಾಗ ಭಗವಂತ ಬ್ರಹ್ಮಾಂಡವನ್ನೇ ವ್ಯಾಪಿಸಿದ. ಅದರಂತೆ ನಾವೂ ನಮ್ಮ ಜೀವನದಲ್ಲಿ ಭಗವಂತನಿಗೆ ಸ್ವಲ್ಪ ಜಾಗವನ್ನು ಕೊಡಬೇಕು. ಭಗವಂತ ಹೆಚ್ಚೇನೂ ಬಯಸುವುದಿಲ್ಲ. ದಿನದ ಇಪ್ಪತ್ನಾಲ್ಕು ಗಂಟೆಗಳಲ್ಲಿ ಹತ್ತುನಿಮಿಷವಾದರೂ ಭಗವಂತನಿಗಾಗಿ ಮೀಸಲಿಡಬೇಕು. ಸ್ವಲ್ಪ ಸಮಯ ಧ್ಯಾನ ಮಾಡಿದರೂ ಸಾಕು ವಾಮನ ಬಲಿಯ ಸಾಮ್ರಾಜ್ಯವನ್ನೇ ವ್ಯಾಪಿಸಿದಂತೆ ಸಮಗ್ರ ಜೀವನವನ್ನೇ ವ್ಯಾಪಿಸಿ ಬಿಡುತ್ತಾನೆ. ನಮ್ಮ ಜೀವನ ಭಗವನ್ಮಯವಾಗುತ್ತದೆ. ಭಕ್ತಿಯ ಜೀವನ ನಡೆಯುವಂತೆ ಅನುಗ್ರಹಿಸುತ್ತಾನೆ.

ಹೀಗಿದ್ದರೂ ನಾವು ದೇವರಿಗೆ ಜಾಗ ಕೊಡುವುದಿಲ್ಲ. ಸೈತಾನನಿಗೆ ಜಾಗ ಕೊಡುತ್ತೇವೆ. ಅವನಿಗೂ ಸ್ವಲ್ಪ ಜಾಗ ಸಿಕ್ಕಿದರೂ ಸಾಕು, ನಮ್ಮ ಸಮಗ್ರ ಜೀವನವನ್ನೇ ನುಂಗಿಬಿಡುತ್ತಾನೆ. ನಲಮಹಾರಾಜ ಎಷ್ಟೆಲ್ಲಾ ಎಚ್ಚರಿಕೆಯಿಂದ ಇದ್ದರೂ, ಸ್ವಲ್ಪ ಧರ್ಮ ಲೋಪವಾದಾಗ, ಅವನ ಜೀವನವನ್ನೇ ನುಂಗಿದ ಕಲಿಯ ಪ್ರಭಾವ ಯಾರಿಗೆ ತಿಳಿದಿಲ್ಲ?! ಜಿರಲೆಗೆ ಮೀಸೆ ತೂರಿಸಲು ಅವಕಾಶ ಸಿಕ್ಕರೂ ಸಾಕು, ದೇಹವನ್ನೇ ತೂರಿಸುತ್ತದೆ. ಹಾಗೆ ಕಲಿಗೆ ಸ್ವಲ್ಪ ಜಾಗ ಸಿಕ್ಕಿತೋ ಇಡೀ ನಾಡನ್ನೇ ಹಾಳುಗೆಡಹುತ್ತಾನೆ.

ಭಗವಂತನಿಗೆ ಸ್ವಲ್ಪ ಜಾಗ ಕೊಟ್ಟು ಆತ್ಮೋನ್ನತಿಗೆ ನಾವು ಕಾರಣವಾಗಬೇಕೋ? ಕಲಿಗೆ ಜಾಗ ಕೊಟ್ಟು ನಿರಯಗಾಮಿಗಳಾಗಬೇಕೋ? ನಾವೆಲ್ಲರೂ ವಿಚಾರ ಮಾಡಬೇಕಾಗಿದೆ.

* * *

## 24. ಧರ್ಮರಕ್ಷಣೆ, ಸ್ತ್ರೀ-ಪುರುಷರ ಕರ್ತವ್ಯ

ನರಕಾಸುರನ ಒಟ್ಟಿಗೆ ಶ್ರೀಕೃಷ್ಣ ಪರಮಾತ್ಮ ಕದನಕ್ಕೆ ಇಳಿದ. ಈ ಮೂಲಕ ಅಧರ್ಮಗಾಮಿಯಾದ ಮಗ ಮಗನಲ್ಲವೆಂದು ತಿಳಿಸಿದ. ಕದನ ಭಯಂಕರವಾಯಿತು. ನರಕ ದಾರಿ ಕಾಣದೆ ಬ್ರಹ್ಮದತ್ತವಾದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ. ಈ ಸಂದರ್ಭದಲ್ಲಿ ಕೃಷ್ಣ ಪರಮಾತ್ಮ, ತನ್ನ ಭಕ್ತನಾದ ಬ್ರಹ್ಮದೇವನಿಗೆ ಸ್ವಲ್ಪ ಮಹತ್ವ ಬರಲೆಂದು ಮೂರ್ಛಿತನಂತೆ ನಟಿಸಿದ್ದ.

ಹನುಮಂತನೂ ಇಂದ್ರಜಿತ್ತು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದಾಗ ಹೀಗೆ ನಟಿಸಿದ್ದ. ಕೃಷ್ಣ ಮೂರ್ಛಿತನಾದಾಗ ಜೊತೆಗಿದ್ದ ಸತ್ಯಭಾಮಾ ಕದನದ ಕಣಕ್ಕಿಳಿದಳು. ನರಕನ ವಿರುದ್ಧ ಹೋರಾಡಿದಳು. ಇಲ್ಲಿ ಒಂದು ಸಂದೇಶವಡಗಿದೆ. ಎಲ್ಲಾ ಪುರುಷರು ನರಕ ಮುರನಂತಿರುವ ಅಧರ್ಮ, ಅನ್ಯಾಯಗಳ ವಿರುದ್ಧ ಸೆಣಸಾಡಬೇಕು. ಹೋರಾಟದಲ್ಲಿ ಪುರುಷರೇನಾದರೂ ಆಲಸ್ಯ ತೋರಿಸಿದರೆ, ಕೃಷ್ಣ ಮೂರ್ಛಿತನಾದಾಗ ಸತ್ಯಭಾಮ ಸಿಡಿದೆದ್ದಂತೆ, ನಮ್ಮ ಸ್ತ್ರೀಸಮಾಜ ಜಾಗ್ರತೆ ವಹಿಸಬೇಕು. ಸನಾತನ ಹಿಂದೂ ಧರ್ಮದ ರಕ್ಷಣೆ ಪುರುಷ ಮತ್ತು ಸ್ತ್ರೀ ಇಬ್ಬರ ಕರ್ತವ್ಯವೂ ಆಗಿದೆ ಎಂದು ಕೃಷ್ಣ-ಸತ್ಯಭಾಮೆಯರು ನರಕನ ಸಂಹಾರದ ಮೂಲಕ ಸೂಚಿಸಿದ್ದಾರೆ ಎಂದು ಸಂದೇಶ ನೀಡಿದರು.

* * *

## 25. ಭಾಗವತ ಶ್ರವಣ ಮಾಡಿ

ಭಾಗವತ ಗ್ರಂಥ ಎಂದರೆ ಹಿಮಾಲಯ ಪರ್ವತವಿದ್ದಂತೆ. ಹಿಮಾಲಯದಿಂದ ಜಲಧಾರೆ ಹರಿದು ಬಂದರೆ, ಭಾಗವತವೆಂಬ ಹಿಮಾಲಯದಿಂದ ಅಂತಃಕರಣವನ್ನು ತೊಳೆಯುವ ಜ್ಞಾನವೆಂಬ ಅಮೃತರಸಧಾರೆ ಹರಿದು ಬರುತ್ತಿದೆ. ಇಂತಹ ಪರಮ ಪವಿತ್ರವಾದ ಗ್ರಂಥದ ಶ್ರವಣವನ್ನು ಪರೀಕ್ಷಿತ ಶುಕಮುನಿಗಳಿಂದ ನಡೆಸಿದ ಏಳು ದಿನಗಳ ಬಳಿಕ ಪರೀಕ್ಷಿತ ಮೃತನಾದ. ಭಾಗವತ ಶ್ರವಣದಿಂದ ಪವಿತ್ರಾತ್ಮನಾದ ಪರೀಕ್ಷಿತನ ಮೇಲೆ ದೇವತೆಗಳು ಹೂಮಳೆ ಸುರಿಸಿದರು. ಪರೀಕ್ಷಿತ ಭೌತಿಕ ತನು ತೊರೆದರೂ ಭಾಗವತ ಶ್ರವಣದಿಂದ ಅಮೃತಾತ್ಮನಾಗಿ ಭಗವಂತನ ಸನಿಹ ಸೇರಿದ.

ಕೆಲವರು, ಪರೀಕ್ಷಿತ ಭಾಗವತ ಕೇಳಿ ಸತ್ತ. ನಮಗೆ ಹಾಗೆ ಆದರೆ! ಎನ್ನುತ್ತಾರೆ. ಅದಕ್ಕೆ ವ್ಯಾಸರು ಕೊನೆಗೆ ಮಾರ್ಕಂಡೇಯ ಕಥೆ ಹೇಳಿದ್ದಾರೆ. ಮಾರ್ಕಂಡೇಯರು ಭಾಗವತ ಕೇಳಿ ಉದ್ಧಾರವಾದರು. ಜೀವನದಲ್ಲಿ ನಾವು ಸಹ ಭಕ್ತಿ ಪ್ರಚೋದಕವಾದ ಭಾಗವತ ಗ್ರಂಥದ ಶ್ರವಣ, ಮನನ, ಪಠಣಗಳನ್ನು ನಡೆಸಿ, ಭಗವಂತನ ಅನುಗ್ರಹಕ್ಕೆ ಭಾಗಿಗಳಾಗೋಣ! ಎಲ್ಲರ

ಮನೆಮನೆಗಳಲ್ಲಿ ಮನಮನಗಳಲ್ಲಿ ಭಾಗವತದ ಭಕ್ತಿ ಸಂದೇಶಗಳು ಹೊಕ್ಕು ಕಮರಿಹೋದ ಭಕ್ತಿಲತೆಯು ಮತ್ತೆ ಚಿಗುರುವಂತಾಗಲಿ.

* * *

## 26. ಪುರೋಹಿತರು ಮೂರು ಅಂಶಗಳ ಬಗ್ಗೆ ಗಮನ ಹರಿಸಲಿ!

ಪುರೋಹಿತರು ಬರೇ ಬ್ರಾಹ್ಮಣ ಸಮಾಜದ ಮೇಲಷ್ಟೇ ಅಲ್ಲದೆ, ಸಮಗ್ರ ಹಿಂದೂ ಸಮಾಜದ ಮೇಲೆಯೇ ತಮ್ಮ ಗಾಢ ಪ್ರಭಾವವನ್ನು ಬೀರಬಲ್ಲವರಾಗಿರುವರು. ಆದ್ದರಿಂದ ಅವರು ಮೂರು ಅಂಶಗಳ ಬಗ್ಗೆ ಗಮನಹರಿಸಬೇಕು.

1) ಪೌರೋಹಿತ್ಯ ಕರ್ಮಗಳನ್ನು ಆದಷ್ಟು ಪರಿಶುದ್ಧವಾಗಿ, ಶಾಸ್ತ್ರೀಯವಾಗಿ ನಡೆಸಬೇಕು. ಸ್ಪಷ್ಟವಾದ ಮಂತ್ರೋಚ್ಚಾರಣೆ, ಕ್ರಮಬದ್ಧವಾದ ತಂತ್ರಗಾರಿಕೆ ಇವನ್ನೆಲ್ಲ ಚೆನ್ನಾಗಿ ಅಳವಡಿಸಿಕೊಳ್ಳುವಂತಾಗಬೇಕು.

2) ಸಮಾಜದ ಉಳಿದೆಲ್ಲರಿಗೆ ಆದರ್ಶ ರೀತಿಯಿಂದ ನಡೆದುಕೊಳ್ಳಬೇಕು. ವೈಯಕ್ತಿಕ ಬದುಕು ಆದಷ್ಟು ಪರಿಶುದ್ಧವಾಗಿ, ಧಾರ್ಮಿಕವಾಗಿ ಎಲ್ಲರಿಗೆ ಧರ್ಮದಲ್ಲಿ, ಪೌರೋಹಿತ್ಯ ಕರ್ಮಗಳಲ್ಲಿ ಶ್ರದ್ಧೆ, ವಿಶ್ವಾಸ ಹೆಚ್ಚುವಂತೆ ವರ್ತಿಸಬೇಕು.

3) ಸಮಾಜದಲ್ಲಿಯ ವ್ಯಕ್ತಿಗಳ ಸ್ತರಗಳನ್ನು ಪರಿಶೀಲಿಸಿ ಉತ್ತಮ ಮಟ್ಟದ, ಮಧ್ಯಮ ಮಟ್ಟದ ಹಾಗೂ ಕೆಳಮಟ್ಟದ– ಹೀಗೆ ಮೂರು ವ್ಯವಸ್ಥೆಗಳನ್ನು ಹಾಕಿಕೊಂಡು ಸಮಾಜದಲ್ಲಿ ಅತ್ಯಂತ ಬಡವರೂ ತಮ್ಮ ಸ್ಥಿತಿಗತಿಗಳಿಗೆ ಅನುಗುಣವಾಗಿ ಪೌರೋಹಿತ್ಯ ಕರ್ಮವನ್ನು ನಡೆಸುವಂತೆ ಸೌಕರ್ಯವನ್ನು ಕಲ್ಪಿಸಿಕೊಡಬೇಕು.

* * *

## 27. ಯಾಜ್ಞಿಕರ ಸ್ಥಾನಮಾನ

ಸಾಧನ ಮಾರ್ಗದಲ್ಲಿ ಕರ್ಮಗಳಿಗೆ ಪ್ರಧಾನವಾದ ಸ್ಥಾನವಿದೆ. ಕೆಲವು ಧಾರ್ಮಿಕ ಕ್ರಿಯೆಗಳು ಅಂತಃಕರಣಶುದ್ಧಿಯ ಮೂಲಕ ಧ್ಯಾನಕ್ಕೆ ಸಹಕಾರಿಗಳಾದರೆ, ಮತ್ತೆ ಕೆಲವು ಕರ್ಮಗಳು ಸಾಧನಯೋಗ್ಯತೆಯನ್ನು

ಗಳಿಸಿಕೊಳ್ಳಲು ಅನಿವಾರ್ಯವಾಗುತ್ತವೆ. ಉದಾಹರಣೆಗೆ- ಷೋಡಶ ಸಂಸ್ಕಾರಗಳು. ಇವುಗಳನ್ನು ಮಾಡಿದರೆ ಅಧ್ಯಯನಾದಿ ಕರ್ಮಗಳಲ್ಲಿ ವಿಶೇಷ ಅರ್ಹತೆಯನ್ನು ಗಳಿಸಿಕೊಳ್ಳಬಹುದಾಗಿದೆ. ಇಂತಹ ಕೆಲವು ಕರ್ಮಗಳು ಅನಿವಾರ್ಯ ಕರ್ಮಗಳೆನಿಸಿವೆ. ಈ ಎರಡೂ ವಿಧದ ಕರ್ಮಗಳಲ್ಲಿ ಯಾಜ್ಞಿಕರ ಸ್ಥಾನ ಬಹುಮುಖ್ಯವಾದುದು. ಧಾರ್ಮಿಕ ಕುಟುಂಬಗಳು ಇಂತಹ ಯಾಜ್ಞಿಕರೊಂದಿಗೆ ತಲೆತಲಾಂತರದಿಂದ ಸಂಪರ್ಕವನ್ನು ಪಡೆದು ಅವರನ್ನು ಕುಲಪುರೋಹಿತರು ಎಂದು ಗೌರವಿಸಿವೆ. ಮನೆಯ ಧಾರ್ಮಿಕ ಆಗುಹೋಗುಗಳಲ್ಲಿ ಅವರ ಪಾತ್ರ ಪ್ರಮುಖವಾಗಿರುತ್ತದೆ. ಅಂತಹವರ ಪ್ರಭಾವ ಧಾರ್ಮಿಕ ಸಮಾಜದ ಮೇಲೆ ಅಗಾಧವಾದುದು. ಹೀಗಾಗಿ ಪುರೋಹಿತರು ಎಷ್ಟು ಆಚಾರ- ವಿಚಾರಸಂಪನ್ನರಾಗಿರುತ್ತಾರೋ ಅಷ್ಟು ಧಾರ್ಮಿಕ ಸಮಾಜ ಆರೋಗ್ಯಪೂರ್ಣವಾಗುತ್ತದೆ.

ಪೌರೋಹಿತ್ಯ ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಸೇರಿರುವ ಒಂದು ಕರ್ತವ್ಯ. ಅದನ್ನು ನಿಷ್ಠೆಯಿಂದ ಶಾಸ್ತ್ರೋಕ್ತವಾಗಿ ನಿರ್ವಹಿಸುವುದರಿಂದ ಅವನ ವೈಯಕ್ತಿಕ ಏಳ್ಗೆಯೊಂದಿಗೆ ಸಮಾಜದ ಉನ್ನತಿಯೂ ಸಾಧ್ಯವಾಗುತ್ತದೆ. ಸ್ವಾರ್ಥ, ವಂಚನೆಗಳಿಲ್ಲದ ಪರಿಶುದ್ಧಭಾವದಿಂದ ಈ ಪೌರೋಹಿತ್ಯ ಕರ್ಮವನ್ನು ನಡೆಸಬೇಕು. ಅಂತಹ ಆದರ್ಶ ಪುರೋಹಿತರ ಜೀವನದ ಹೊಣೆಯನ್ನು ಸಮಾಜ ಹೊರಬೇಕು. ಹೀಗೆ ಪರಸ್ಪರ ಸಹಕಾರದಿಂದ ನಮ್ಮ ಧಾರ್ಮಿಕ ಸಮಾಜ ಕ್ರಿಯಾಶೀಲವಾಗಿ ಬೆಳೆಯಬೇಕು.

ಯಾಜ್ಞಿಕವೃತ್ತಿಗೆ ಸಂಬಂಧಿಸಿದ ಅನೇಕ ವಿಷಯಗಳು ಸಂಪ್ರದಾಯಬದ್ಧವಾಗಿರುತ್ತವೆ. ಅವುಗಳನ್ನು ಸಂಪ್ರದಾಯ ಬಲ್ಲ ಹಿರಿಯರಿಂದಲೇ ಕೇಳಿ ತಿಳಿಯಬೇಕು.

* * * *

# ಸಾಮಾಜಿಕ ರಾಷ್ಟ್ರೀಯ



ಚಕ್ರ-ಗದಾ-ಶಂಖ-ಪದ್ಮಧಾರಿಯಾದ 'ಧನ್ಯಾ'ಪತಿ 'ಶ್ರೀಧರ'



## ತಂದೆಯ ಆದರ್ಶ

ಒಂದು ದೊಡ್ಡ ಬಂಗಲೆ, ಅದರಲ್ಲಿ ಆಡಂಬರದ ಬದುಕು. ಬಂಗಲೆಯ ಹಿಂದೆ ಒಂದು ಮುರುಕಲು ಗುಡಿಸಲು. ಅದರಲ್ಲಿ ಮುದಿ ತಂದೆ ತಾಯಂದಿರು. ಅವರಿಗಾಗಿ ಹಿತ್ತಾಳೆಯ ಬಟ್ಟಲುಗಳು. ಅವುಗಳಲ್ಲಿಯೇ ಅವರಿಬ್ಬರಿಗೂ ಊಟ. ಆ ಮುದಿಯರಿಬ್ಬರೂ ಒಂದು ದಿನ ಕಣ್ಣುಮುಚ್ಚಿದರು. ಅವರ ಹೆಣವನ್ನು ಸುಡುವಾಗ, ಜೊತೆಗೆ ಅವರ ಬಟ್ಟಲುಗಳನ್ನೂ ಎಸೆಯಲು ಆದೇಶ. ಕೂಡಲೇ ಐದು ವರ್ಷ ವಯಸ್ಸಿನ ಮಗು ತಡೆಯುತದೆ. "ಅಪ್ಪ! ಆ ಬಟ್ಟಲುಗಳು ಇರಲಿ. ಎಸೆಯುವುದು ಬೇಡ. ನೀನೂ ಮುದಿಯಾದ ಮೇಲೆ ಬೇಕು ತಾನೆ?"

ಮಗುವಿನ ತೊದಲು ನುಡಿಯನ್ನು ಕೇಳಿ ಶಾಕ್ ಹೊಡೆದಂತಾಯಿತು. "ಎಂತಹ ತಪ್ಪು ಮಾಡಿಬಿಟ್ಟೆ! ನಾನು ಮುದಿ ತಂದೆತಾಯಿಯಂದಿರನ್ನು ತಿರಸ್ಕಾರ ದೃಷ್ಟಿಯಿಂದ ನೋಡಿಕೊಂಡರೆ, ಮುಂದೆ ನನ್ನ ಮಗನೂ ನನ್ನ ಆ ಆದರ್ಶವನ್ನೇ ಅಳವಡಿಸಿಕೊಂಡಾನು!" ಎಂಬ ಯೋಚನೆಯೇ ನನಗೆ ಯಾಕೆ ಹೊಳೆದಿಲ್ಲ?" ಎಂದು ಪರಿತಪಿಸಿದನು.

– ಶ್ರೀ ವಿಶ್ವೇಶತೀರ್ಥಶ್ರೀಪಾದರು

## 1. ಮಾಧ್ವಸಿದ್ಧಾಂತದಿಂದ ರಹಿತವಾದ ಹಿಂದೂ ಧರ್ಮಕ್ಕೆ ಅಸ್ತಿತ್ವವೇ ಕೂಡದು

ಶ್ರೀಮಧ್ವಾಚಾರ್ಯರು ಪ್ರಸ್ತುತಪಡಿಸಿರುವ ಮಾಧ್ವಸಿದ್ಧಾಂತದಿಂದಾಗಿ ಹಿಂದೂಮತಕ್ಕೆ ಭದ್ರವಾದ ಬುನಾದಿ ದೊರಕಿದಂತಾಗಿದೆ. ಮಾಧ್ವಸಿದ್ಧಾಂತದಲ್ಲಿ ಸಾರಲಾಗುವ ದೇವರು ಎಲ್ಲರಲ್ಲೂ ಅಂತರ್ಯಾಮಿಯಾಗಿರುವನು. ಎಲ್ಲ ಹೆಸರುಗಳಿಂದಲೂ, ಶಬ್ದಗಳಿಂದಲೂ ಅವನೇ ಮುಖ್ಯವಾಗಿ ಪ್ರತಿಪಾದ್ಯನು- ಎಂಬ ತತ್ವಗಳಿಂದಾಗಿ ಹಿಂದೂಮತದ ಬಹುದೇವತಾವಾದದಿಂದಾಗಿ ತೋರಿಬರುವ ಸಮಸ್ಯೆಗಳಿಗೆ, ಗೊಂದಲಗಳಿಗೆಲ್ಲ ಸೂಕ್ತ ಪರಿಹಾರವನ್ನು ಒದಗಿಸಿಕೊಟ್ಟಂತಾಗಿದೆ.

ಹೀಗೆ ಮಾಧ್ವಸಿದ್ಧಾಂತದಿಂದ ಮೈನಸ್ ಆದ, ವಿರಹಿತವಾದ ಹಿಂದೂಮತಕ್ಕೆ ಅಸ್ತಿತ್ವಕ್ಕೇ ಕೂಡಲಾರದು ಎಂಬಷ್ಟೂ ವ್ಯಾಪಕವಾದ ಕೊಡುಗೆ ಹಿಂದೂ ಮತಕ್ಕೆ ಮಾಧ್ವಸಿದ್ಧಾಂತದಿಂದ ಸಂದಂತಾಗಿದೆ.

* * *

## 2. ರಾಮರಾಜ್ಯ

ಶ್ರೀರಾಮ ಪ್ರತಿಷ್ಠೆ, ರಾಮಾಯಣ ಮಂಗಲ, ಮುಂತಾದ ಪವಿತ್ರ ಕಾರ್ಯಕ್ರಮಗಳು ನಡೆಯುತ್ತಿರುವ ಶುಭ ದಿವಸ ಬಂದರಷ್ಟೇ ಸಾಲದು. ರಾಮನ ಪ್ರತಿಷ್ಠೆಯಾದುದರಿಂದ ಇಲ್ಲಿ ರಾಮರಾಜ್ಯ ಆಗಬೇಕು. ರಾಮರಾಜ್ಯ ಎಂದರೆ ಕೇವಲ ಭೋಗಸಮೃದ್ಧಿ ಅಲ್ಲ. ನೈತಿಕತೆಯ ಅಭಿವೃದ್ಧಿ ಆಗಬೇಕು. ಇಂದು ನಮ್ಮದು ರಾಮರಾಜ್ಯವಾಗದೆ ರಾವಣ ರಾಜ್ಯವಾಗಿದೆ. ಎಲ್ಲ ಭೋಗ ಪದಾರ್ಥಗಳೂ ನನಗೆ ಬೇಕು. ಎಲ್ಲದರ ಮೇಲೆ ತನಗೆ ಅಧಿಕಾರ ಬೇಕು- ಎಂಬ ಸ್ವಾರ್ಥ ಲಾಲಸೆಯದೇ ಸಾಮ್ರಾಜ್ಯವಾಗಿದೆ. ಅಧಿಕಾರದ ಆಕಾಂಕ್ಷೆ, ಸ್ವಾರ್ಥ ಲಾಲಸೆಗಳ ಪ್ರತೀಕವೇ ರಾವಣ. ಅಂತೆಯೇ ಕುಂಭಕರ್ಣನೂ ನೆಲೆಸಿದ್ದಾನೆ. ಊಟ, ನಿದ್ರೆ-ಎರಡೇ ಕೆಲಸ ಕುಂಭಕರ್ಣನದು. ಭೋಗ, ನಿಷ್ಕ್ರಿಯತೆ, ಮೈಗಳ್ಳತನವೇ ನಮ್ಮಲ್ಲಿ ಹೆಚ್ಚಾಗಿದೆ. ರಾವಣ ವಿಭೀಷಣನನ್ನು ಹೊರ ಹಾಕಿದಂತೆ ನಾವೂ ನಮ್ಮ ಹೃದಯದಿಂದ ಸತ್ವ ಗುಣವನ್ನು ಉಚ್ಚಾಟಿಸಿದ್ದೇವೆ. ಶ್ರೀರಾಮ ಬಂದು ರಾವಣ, ಕುಂಭಕರ್ಣರನ್ನು ಕೊಂದು

ವಿಭೀಷಣನಿಗೆ ಪಟ್ಟಾಭಿಷೇಕ ಮಾಡಿದಂತೆ ನಮ್ಮ ಹೃದಯಕ್ಕೆ ಶ್ರೀರಾಮ ಬಂದರೆ ಸ್ವಾರ್ಥಪರತೆ, ಮೈಗಳ್ಳತನಗಳ ರಜಸ್-ತಮೋ ಗುಣಗಳ ನಿವಾರಣೆಯಾಗಿ ಸತ್ವಗುಣಕ್ಕೆ ಅಭಿಷೇಕವಾಗುವುದು.

ರಾವಣ ಸಾವೇ ಬೇಡವೆಂದು ಕೇಳಿದನು. ಕುಂಭಕರ್ಣನೂ ಏನನ್ನೋ ಕೇಳಲು ಹೋಗಿ ನಿದ್ರೆಯನ್ನು ಕೇಳಿದನು. ವಿಭೀಷಣನು ಭಗವದ್ಭಕ್ತಿಯನ್ನು ಮಾತ್ರ ಬೇಡಿದನು. ಆದರೆ ಭಗವಂತನ ಸಾವು ಬೇಡದವರನ್ನು ಸಂಹಾರಗೊಳಿಸಿ ತನ್ನಲ್ಲಿ ಭಕ್ತಿಯನ್ನು ಬೇಡಿದ ವಿಭೀಷಣನನ್ನು ಚಿರಂಜೀವಿಗೊಳಿಸಿದನು. ಅವರು ಬೇಡಿದ್ದು ಇವನಿಗೆ ಬೇಡದೆ ದೊರೆಯಿತು! ದೇವರಲ್ಲಿ ಏನನ್ನು ಬೇಡಬೇಕು? ಎನ್ನುವುದರ ಬಗ್ಗೆ ನಮ್ಮನ್ನು ರಾಮಾಯಣ ಇದರ ಮೂಲಕ ಎಚ್ಚರಿಸುತ್ತಿದೆ.

ಶ್ರೀರಾಮನ ದರ್ಶನದಿಂದ ಶಿಲೆಯಲ್ಲಿ ಚೈತನ್ಯ ತುಂಬಿ ನಾರಿಯಾದಂತೆ ಜಾಡ್ಯ ತುಂಬಿದ ನಮ್ಮ ಹೃದಯದಲ್ಲಿಯೂ ಶ್ರೀರಾಮ ಬಂದರೆ ಚೈತನ್ಯ ಮೂಡುವುದು.

* * *

## 3. ಹಿಂದೂ ಧರ್ಮದ ರಕ್ಷಣೆಯು ಅನಿವಾರ್ಯ

ರಾಮಾಯಣದಲ್ಲಿ ಒಂದು ಕಥೆ. ಸುಗ್ರೀವ ಒಂದು ಸಲ ವಾಲಿಯೊಂದಿಗೆ ಯುದ್ಧ ಮಾಡಿ ಪೆಟ್ಟು ತಿಂದು ರಾಮನಿಗೆ ಕೇಳಿದ-ವಾಲಿಯನ್ನು ಕೊಲ್ಲುತ್ತೇನೆಂದು ಹೇಳಿ? ಏಕೆ ಸುಮ್ಮನಿದ್ದು ನನಗೆ ತೊಂದರೆ ನೀಡಿದಿ?

ರಾಮ ಹೇಳಿದ-ನೀನು ಮತ್ತು ವಾಲಿ ಒಂದೇ ರೀತಿ ಕಾಣುತ್ತಿದ್ದೀರಿ. ನಾನು ತಪ್ಪಾಗಿ ನಿನಗೆ ಹೊಡೆಯಬಾರದೆಂದು ಸುಮ್ಮನಿದ್ದೆ. ನಂತರ ಹನುಮಂತನ ಹಾರ ಧರಿಸಿ ಸುಗ್ರೀವ ತೆರಳಿದಾಗ ರಾಮ ಸುಗ್ರೀವನನ್ನು ಗುರುತಿಸಿ ವಾಲಿಯನ್ನು ಸಂಹರಿಸಿದ.

ನಾವೂ ವಾಲಿ-ಸುಗ್ರೀವರಂತೆ ಕಚ್ಚಾಡುತ್ತಿರುತ್ತೇವೆ. ನಮ್ಮನ್ನು ಭಗವಂತ ಹೇಗೆ ಗುರುತಿಸಬೇಕು? ಹನುಮಂತನ ಮೂರನೆಯ ಅವತಾರರಾದ ಶ್ರೀಮಧ್ವಾಚಾರ್ಯರ ಸಂದೇಶ ಎಂಬ ಹಾರವನ್ನು ನಾವು ಧರಿಸಬೇಕು.

**'ಸತಿ ಕುಡ್ಯೇ ಚಿತ್ರಲೇಖನಮ್'** ಗೋಡೆ ಇದ್ದರೆ ಅದರಲ್ಲಿ ಚಿತ್ರವನ್ನು ಬರೆಯಬಹುದು. ಗೋಡೆಯೇ ಇಲ್ಲದಿದ್ದರೆ?

ಅದರಂತೆ, ಧರ್ಮ ಗೋಡೆ ಇದ್ದರೆ ಅದರಲ್ಲಿ ದ್ವೈತ-ಅದ್ವೈತ-ವಿಶಿಷ್ಟಾದ್ವೈತಗಳೆಂಬ ಚಿತ್ರ ಬರೆಯಲು ಸಾಧ್ಯ. ಆದ್ದರಿಂದ, ದಲಿತರ ಉದ್ಧಾರ, ಮತಾಂತರದ ಪಿಡುಗುಗಳನ್ನು ನಿವಾರಿಸಿ ಹಿಂದೂ ಸಮಾಜವನ್ನು ಉದ್ಧರಿಸಿದಾಗ ಮಾತ್ರ ಮಾಧ್ವ ತತ್ತ್ವಜ್ಞಾನದ ಸಂರಕ್ಷಣೆ ಸಾಧ್ಯ.

ಶ್ರೀಮದಾಚಾರ್ಯರು ಕೇವಲ ಭಕ್ತಿಯ ಸಿದ್ಧಾಂತವನ್ನು ಅಲ್ಲ ಕರ್ತವ್ಯದ ಸಿದ್ಧಾಂತವನ್ನೂ ಘೋಷಿಸಿದ್ದಾರೆ. **'ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ'** ಎಂದು ಸಮಾಜಸೇವೆಯನ್ನು ಒತ್ತು ಕೊಟ್ಟು ಹೇಳಿದ್ದಾರೆ.

ಈ ಹಿನ್ನಲೆಯಲ್ಲಿ ಇಂದಿನ ಕಾಲದಲ್ಲಿ ತತ್ತ್ವಪ್ರಸಾರಕ್ಕೆ ಬ್ರಹ್ಮಚಾರಿಗಳು-ವಾನಪ್ರಸ್ಥರು-ಸಂನ್ಯಾಸಿಗಳು (ಪೀಠಾಧಿಪತ್ಯ ಇಲ್ಲದೆಯೂ ಸಂನ್ಯಾಸ ಸ್ವೀಕರಿಸಿದವರು. ಸ್ವೀಕರಿಸುವವರು) ಮುಂದೆ ಬರಬೇಕು ಎಂದು ಆಹ್ವಾನಿಸುತ್ತಿದ್ದೇವೆ.

* * *

## 4. ಇಂದಿನ ಸಮಾಜದಲ್ಲಿ ಧರ್ಮದ ಪಾತ್ರ

"ಇಂದಿನ, ವೈಜ್ಞಾನಿಕ ಪ್ರಗತಿಯನ್ನು ಹೊಂದುತ್ತಿರುವ ಜಗತ್ತಿನಲ್ಲಿ ಅನ್ನ ನೀಡದ ಧರ್ಮಕ್ಕೆ ಏಕೆ ಸ್ಥಾನ ನೀಡಬೇಕು?"

"ಧರ್ಮಕ್ಕೆ ಸ್ಥಾನವಿರಲಿ. ಆದರೆ ಈಗ ಬೇಡ. ನಮ್ಮ ಆರ್ಥಿಕ, ಭೌತಿಕ ಸಮಸ್ಯೆಗಳು ಮುಗಿದ ಮೇಲೆ ಧರ್ಮವನ್ನು ಆಚರಿಸೋಣ. ಹೊಟ್ಟೆ ತುಂಬಿದ ಮೇಲೆ ಧರ್ಮ."

ಮೇಲೆ ಮಂಡಿಸಿದ ಎರಡು ಬಗೆಯ ವಾದಗಳನ್ನು ಪ್ರಸ್ತುತ ಸಮಾಜದಲ್ಲಿ ನಾವು ಕೇಳುತ್ತೇವೆ. ಈ ಎರಡು ವಾದಗಳೂ ಸರಿಯಲ್ಲ.

ಜೀವನಕ್ಕೆ ಅನ್ನವೊಂದೇ ಮುಖ್ಯವಲ್ಲ. ಜೀವನಕ್ಕೆ ಬೇಕಾದ ಬೆಳಕು ಧರ್ಮದಿಂದ. ಭೌತಿಕ ಸಮಸ್ಯೆಗಳ ಪರಿಹಾರದ ನಂತರ ಧರ್ಮವಲ್ಲ. ಆ ಸಮಸ್ಯೆಗಳ ಪರಿಹಾರಕ್ಕಾಗಿ ಧರ್ಮ. ನಮ್ಮ ಹಿರಿಯರು ಅನೇಕ

ಶತಮಾನಗಳಿಂದ ಧರ್ಮದ ಪ್ರಜ್ಞೆಯನ್ನು ನಮ್ಮ ಹೃದಯದಲ್ಲಿ ರೂಢಿಸಿರುವುದರಿಂದಲೇ ಇಂದು ಸಮಾಜದಲ್ಲಿ ಸುವ್ಯವಸ್ಥೆ ಇರುವುದು. ಧರ್ಮವೇ ಇಲ್ಲದಿದ್ದರೆ ಸ್ವಾರ್ಥಕ್ಕಾಗಿ ಏನನ್ನೂ ಮಾಡಬಹುದೆಂಬ ಪ್ರಜ್ಞೆ ಬೆಳೆದು ಪ್ರಬಲರು ದುರ್ಬಲರ ಮೇಲೆ ಆಕ್ರಮಣ ಮಾಡುವರು. ಶಾಂತಿಯೇ ಇಲ್ಲದಂತಾಗುವುದು. ಸಾಕಷ್ಟು ಸಂಪತ್ತಿದ್ದರೂ ಪ್ರಾಮಾಣಿಕತನ, ಕರ್ತವ್ಯನಿಷ್ಠೆಯಿಲ್ಲದಿದ್ದರೆ ಸರಿಯಾಗಿ ವಿತರಣೆಯಾಗದ ಸುಖ ಪಡಲೂ ಆಗದು. ಇಂದು ವಿದೇಶದಲ್ಲಿ ಬೇಕಾದಷ್ಟು ಸಂಪತ್ತಿದೆ. ಆದರೆ ಧರ್ಮವಿರದ ಶಾಂತಿ ಸಿಗದೆ ತೊಳಲಾಡುವುದನ್ನು ಕಾಣುತ್ತಿದ್ದೇವೆ. ಎಲ್ಲ ಸಮಸ್ಯೆಯ ಪರಿಹಾರಕ್ಕೆ ಮೂಲಭೂತ ಸಮಷ್ಟಿಯ ಪ್ರೇರಣೆ ಧರ್ಮದಿಂದ. ಸುವ್ಯವಸ್ಥೆಗಳು ಕಾನೂನುಗಳ ಮೂಲಕ ದೊರೆಯಲಾರವು. ಸರ್ಕಾರ ಕಾನೂನುಗಳನ್ನು ಮಾಡಿದಷ್ಟು ಅದರಿಂದ ಪಾರಾಗುವ ಪದ್ಧತಿಯ ಅನ್ವೇಷಣೆ ನಡೆದು ಕಾನೂನು ತಪ್ಪಿಸಿ ಅನ್ಯಾಯ, ಅಕ್ರಮಗಳನ್ನು ನಡೆಸುವ ಪ್ರವೃತ್ತಿ ಬೆಳೆಯುತ್ತದಷ್ಟೆ.

ಜೀವನದ ಎಲ್ಲ ಸಮಸ್ಯೆಗಳು ಪರಿಹಾರವಾದ ಬಳಿಕ ಧರ್ಮವನ್ನು ಆಚರಿಸುವ ಎಂದರೆ ಸಮುದ್ರದ ಅಲೆಗಳೆಲ್ಲ ಮುಗಿದ ಮೇಲೆ ಸ್ನಾನ ಮಾಡುವೆ, ನದಿಯ ನೀರೆಲ್ಲ ಬತ್ತಿದ ಮೇಲೆ ದಾಟುತ್ತೇವೆ ಎಂದಂತೆಯೇ.

ಆದುದರಿಂದ ಸಾಮಾಜಿಕ ಶಿಸ್ತಿಗಾಗಿ ಧಾರ್ಮಿಕ ಪ್ರಜ್ಞೆ, ನೈತಿಕ ಪ್ರಜ್ಞೆಗಳು ಅಗತ್ಯ. ಧರ್ಮಕ್ಕೆ ಜೀವನದಲ್ಲಿ ಮಹತ್ವದ ಪಾತ್ರವಿದೆ.

* * *

## 5. ಧಾರ್ಮಿಕ ಪುನರುಜ್ಜೀವನದಲ್ಲಿ ಮಹಿಳೆಯರ ಪಾತ್ರ

ಒಮ್ಮೆ ಶ್ರೀಕೃಷ್ಣ ಗೋವಳರೊಂದಿಗೆ ಹಸುಗಳನ್ನು ಮೇಯಿಸುತ್ತಾ ಬಹುದೂರ ಹೋಗಿದ್ದ. ಮಧ್ಯಾಹ್ನದ ಸಮಯ ಗೋಪ ಬಾಲಕರು ಹಸಿದಿದ್ದರು. ಶ್ರೀಕೃಷ್ಣ ಸಮೀಪದಲ್ಲಿ ನಡೆಯುತ್ತಿದ್ದ ಯಜ್ಞವಾಟಿಕೆಗೆ ಗೊಲ್ಲರನ್ನು ಕಳಿಸಿದ. ಬಂದ ಗೊಲ್ಲರು ಯಜ್ಞದೀಕ್ಷಿತರಾದ ಬ್ರಾಹ್ಮಣರಲ್ಲಿ ಅನ್ನ ಕೇಳಿದರು. ಬ್ರಾಹ್ಮಣರು ಅದನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಶ್ರೀಕೃಷ್ಣನ

ಸೂಚನೆಯಂತೆ ವಿಪ್ರಪತ್ನಿಯರಲ್ಲಿ ಬಂದು ಕೇಳಿದರು. ಅವರು ಸಂಭ್ರಮದಿಂದ ಭಕ್ಷ್ಯ ಭೋಜ್ಯಗಳನ್ನು ತಂದು ಶ್ರೀಕೃಷ್ಣನಿಗೆ ಅರ್ಪಿಸಿದರು.

ನಾವೂ ಶ್ರೀಕೃಷ್ಣನ ಪ್ರತಿನಿಧಿಗಳಾಗಿ ಬಂದಿದ್ದೇವೆ. ನಿಮ್ಮಲ್ಲಿ ಕೃಷ್ಣನಿಗಾಗಿ ಅನ್ನ ಬೇಡುತ್ತಿದ್ದೇವೆ. ದೇವರಿಗೆ ಹಸಿವಿಲ್ಲ.

ಅವನಿಗೆ ನಾವು ಉಣ್ಣುವ ಅನ್ನ ಬೇಕಿಲ್ಲ, **'ಸುಖಂ ಪಿಬತ್ಯಸೌ ನಿತ್ಯಂ'**- ನಮ್ಮ ಸತ್ಕರ್ಮಗಳೇ ಅವನಿಗೆ ಅನ್ನ, ಆಚಾರ-ವಿಚಾರಗಳ ಉಪೇಕ್ಷೆಯಿಂದ ಸತ್ಕರ್ಮಗಳ ಅನುಷ್ಠಾನವಿಲ್ಲದೆ ದೇವತೆಗಳು ಹಸಿದಿದ್ದಾರೆ. ಆಸ್ತಿಕ ಜನತೆ ಸತ್ಕರ್ಮಾನುಷ್ಠಾನದಿಂದ ದೇವತೆಗಳನ್ನು ತೃಪ್ತಿಪಡಿಸಬೇಕಾಗಿದೆ. ಶ್ರೀಕೃಷ್ಣ ಸೂಚಿಸಿದಂತೆ ನಾವೂ ಮಹಿಳೆಯರಲ್ಲಿ ಈ ಬೇಡಿಕೆಯನ್ನು ವಿಶೇಷವಾಗಿ ಇಡುತ್ತಿದ್ದೇವೆ. ಭಗವಂತನನ್ನೇ, ಯಜ್ಞದ ಮೂಲಕ ಆರಾಧಿಸುತ್ತಿದ್ದ ಬ್ರಾಹ್ಮಣರು ಆ ಭಗವಂತನೇ ಬಂದು ಕೇಳಿದರೂ ಅವನ ಬೇಡಿಕೆಯನ್ನು ಉಪೇಕ್ಷಿಸಿದರು. ಆದರೆ ಬ್ರಾಹ್ಮಣ ಪತ್ನಿಯರು ಅದನ್ನು ಈಡೇರಿಸಿದರು. ಆದ್ದರಿಂದ ನಾವೂ ಮಹಿಳಾವರ್ಗದಿಂದ ಧರ್ಮರಕ್ಷಣೆಯಲ್ಲಿ ಹೆಚ್ಚಿನ ಕೊಡುಗೆಯನ್ನು ನಿರೀಕ್ಷಿಸಿದ್ದೇವೆ. ಹೆಚ್ಚಿನ ಭರವಸೆ ನಮಗೆ ಅವರ ಮೇಲಿದೆ. ಏಕಾದಶೀ ಉಪವಾಸ, ಹಬ್ಬಹರಿದಿನಗಳ ಆಚರಣೆಯಲ್ಲಿ ಪುರುಷವರ್ಗ ಉಪೇಕ್ಷೆ ತೋರಿದರೂ ಮಹಿಳೆಯರು ಪ್ರೋತ್ಸಾಹಿಸಿ ಸಮಾಜದಲ್ಲಿ ಧಾರ್ಮಿಕ ಪುನರುಜ್ಜೀವನವನ್ನು ಸಾಧಿಸಬೇಕು. ಮಕ್ಕಳಲ್ಲಿ ಧಾರ್ಮಿಕ ಆಸಕ್ತಿ ಮೂಡುವಂತೆ ಪ್ರಯತ್ನಿಸಬೇಕು.

* * *

## 6. ದೇವರಿಗಾಗಿ ದೇವರಿಂದ

ನದಿಯ ದಡದಲ್ಲೇ ಕುಳಿತರೆ ದಾಟಿ ಆ ಕಡೆ ಹೋಗಲಾಗದು. ನೀರಿಗೆ ಹಾರಿದರೆ ಮುಳುಗಿ ಸಾಯಬೇಕು. ನೀರಿಗೆ ಹಾರಬೇಕು, ಆದರೆ, ಮುಳುಗಬಾರದು, ಈಜುವ ಕಲೆ ಇದ್ದರೆ ಇದು ಸಾಧ್ಯ. ಅದರಂತೆ, ಕರ್ಮ ಮಾಡಬೇಕು, ಪಾಪದ ನಂಟು ಅಂಟಬಾರದು. ಅದಕ್ಕಾಗಿ ಭಗವದ್ಗೀತೆ ಹೇಳಿದ ಉಪಾಯ ಯೋಗ, ಕರ್ಮದ ಜೊತೆ ಯೋಗವನ್ನು ಸೇರಿಸಿದಾಗ ಕರ್ಮಯೋಗವೆನಿಸುತ್ತದೆ. **'ಯೋಗಃ ಕರ್ಮಸು ಕೌಶಲಮ್'** ಕ್ರಿಯೆಯಲ್ಲಿ ತೋರುವ ಕೌಶಲವೇ ಯೋಗ.

ಅರ್ಜುನನಲ್ಲಿ ಎರಡು ದುರ್ಗುಣಗಳಿದ್ದವು ಅಹಂಕಾರ, ಮೋಹ. "ನಾನು ಯುದ್ಧ ಮಾಡುತ್ತೇನೆ" ಎನ್ನುವ ಅಹಂಕಾರ, ಬಂಧುಗಳು ಸಾಯುತ್ತಾರೆ, ಎನ್ನುವ ಮೋಹ– ತಪ್ಪು ಗ್ರಹಿಕೆ. ಶ್ರೀಕೃಷ್ಣ ಹೇಳಿದ– **'ನಾಯಂ ಹಂತಿ ನ ಹನ್ಯತೇ'** ನೀನು ಕೊಲ್ಲುವುದೂ ಅಲ್ಲ, ಅವರು ಸಾಯುವುದೂ ಇಲ್ಲ. ನಿನ್ನೊಳಗಿದ್ದು ಕೊಲ್ಲುವವನು ನಾನು, ನಿನ್ನ ಬಂಧುಗಳು ನಿತ್ಯರು, ಅವರಿಗೆ ಸಾವಿಲ್ಲ. ನಮ್ಮ ಕ್ರಿಯೆಗಳಲ್ಲೂ ಅಹಂಕಾರ ಮೋಹ ಇವೆರಡೂ ದೂರವಾಗಬೇಕು. 'ನಾನು ಮಾಡಿದೆ' ಎನ್ನುವುದು ಅಹಂಕಾರ. ದೇವರ ಬಗ್ಗೆ ತಪ್ಪುತಿಳುವಳಿಕೆ, ಭಕ್ತಿ, ಜ್ಞಾನಗಳಿಂದ ಇವೆರಡನ್ನು ಕಳೆದುಕೊಳ್ಳಬಹುದು. ದೇವರ ಮೇಲಿನ ಭಕ್ತಿಯಿಂದ ಕರ್ತವ್ಯವನ್ನು ನೆರವೇರಿಸಿದಾಗ ಅಹಂ ಭಾವ ಹೋಗುತ್ತದೆ. ಭಗವಂತನ ಜ್ಞಾನದಿಂದ ಮೋಹ ಕಳಚುತ್ತದೆ. ಇವೆರಡು ಆದರ್ಶಗಳನ್ನು ಅಳವಡಿಸಿಕೊಳ್ಳುವುದೇ ಯೋಗ, **'ಫಾರ್ ದಿ ಪೀಪಲ್ಸ್, ಬೈ ದಿ ಪೀಪಲ್ಸ್'** ಇದು ಪ್ರಜಾಪ್ರಭುತ್ವದ ಘೋಷಣೆ. **'ಫಾರ್ ದಿ ಗಾಡ್, ಬೈ ದಿ ಗಾಡ್'** ಇದು ಭಗವದ್ಗೀತೆಯ ಘೋಷಣೆ.

ಬರೀ ಹಿಟ್ಟನ್ನು ಮುಕ್ಕಲಾಗದು, ಅದು ಕಸ. ಸಕ್ಕರೆ ತುಪ್ಪ ಸೇರಿದರೆ ಅದಕ್ಕೆ ರಸ ಬರುತ್ತದೆ. ಅದನ್ನು ನಾವು

ತಿನ್ನಬಹುದು, ಬೇರೆಯವರಿಗೂ ಕೊಡಬಹುದು. ಅದರಂತೆ ಅನುಸಂಧಾನವಿಲ್ಲದ ಕರ್ಮ ವ್ಯರ್ಥ. ಭಕ್ತಿ ಜ್ಞಾನಗಳಿಂದ ಸಹಿತವಾದ ಕರ್ಮ ನಮಗೂ ಶ್ರೇಯಸ್ಕರ, ಭಗವಂತನಿಗೂ ಪ್ರಿಯ. ಇದು ಶ್ರೀಕೃಷ್ಣ ಗೀತೆಯಲ್ಲಿ ನೀಡಿದ ಸಂದೇಶ.

* * *

## 7. ಯುವಕರ ಮೂರು ಕರ್ತವ್ಯಗಳು

ಈ ಪ್ರಪಂಚದ ಒಂದಕ್ಕೊಂದು ವ್ಯವಸ್ಥೆಗಳಿಗೂ ಇರುವ ನಿಖರವಾದ ಕೊಂಡಿ ಭಗವಂತನ ಅಸ್ತಿತ್ವವನ್ನು ಸಾರಿ ಹೇಳುವಂತಿದೆ. ಒಂದು ಮಗು ಗರ್ಭದಲ್ಲಿ ಬೆಳೆಯಬೇಕಾದರೆ ನೂರಾರು ವ್ಯವಸ್ಥೆಗಳು. ಅದರಲ್ಲಿ ಒಂದು ಕೊಂಡಿ ತಪ್ಪಿದರೂ ಮಗುವಿನ ಬೆಳವಣಿಗೆಯಲ್ಲಿ ಕುಂದು. ಇಂತಹ ಅದ್ಭುತ ವ್ಯವಸ್ಥೆ ಆಕಸ್ಮಿಕವಾಗಲು ಸಾಧ್ಯವೇ? ಇದರ ಹಿಂದೆ ಅಗಾಧ ಮೇಧಾಶಕ್ತಿಯ ಕೈವಾಡ ಇರಲೇಬೇಕು ಎನಿಸುವುದಿಲ್ಲವೇ?

ಈ ಭಗವತ್ಪ್ರಜ್ಞೆ ನಮ್ಮ ಕರ್ತವ್ಯ ನಿಷ್ಠೆಯನ್ನು ಬೆಳೆಸುತ್ತದೆ. ನಮ್ಮ ಜೊತೆಯಲ್ಲಿ, ನಮ್ಮ ಪಕ್ಕದಲ್ಲೇ ಅನೀತಿ ಅವ್ಯವಹಾರಗಳನ್ನು ನಡೆಸಿ ಸಮೃದ್ಧ ಜೀವನವನ್ನು ಸಾಗಿಸುವ ವ್ಯಕ್ತಿಗಳನ್ನು ಕಂಡು ಪ್ರಾಮಾಣಿಕವಾಗಿ ಕರ್ತವ್ಯವನ್ನು ಪೂರೈಸುವ ನಮಗೆ ಸಹಜವಾಗಿ ಕೆಲವೊಮ್ಮೆ ನಿರಾಶೆ ಮೂಡುತ್ತದೆ. ಆದರೆ ಎಲ್ಲವನ್ನೂ ನೋಡುವ ದೇವರು ನಮ್ಮ ಕರ್ತವ್ಯ ನಿಷ್ಠೆಯನ್ನು ಮೆಚ್ಚುತ್ತಾನೆ ಎಂಬ ತೃಪ್ತಿ ನಿರಾಶೆಯನ್ನು ಮೆಟ್ಟಿ ಹಾಕಿ ಕರ್ತವ್ಯದಲ್ಲಿ ಪ್ರೇರಣೆ ನೀಡುತ್ತದೆ.

ಇಂದಿನ ಯುವಕರಿಂದ ನಾವು ಮೂರು ಕರ್ತವ್ಯಗಳನ್ನು ಬಯಸುತ್ತೇವೆ. ಧಾರ್ಮಿಕ, ನೈತಿಕ ಮತ್ತು ಸಾಮಾಜಿಕ ಕರ್ತವ್ಯಗಳು, ಧಾರ್ಮಿಕವಾಗಿ ಪ್ರತಿನಿತ್ಯದ ಸಂಧ್ಯಾವಂದನೆ ಮತ್ತು ಹದಿನೈದು ದಿನಗಳಿಗೊಮ್ಮೆ ಬರುವ ಏಕಾದಶೀ ಉಪವಾಸ. ನೈತಿಕವಾಗಿ ಚಟಗಳಿಗೆ ಬಲಿಯಾಗದೆ ದೂರವಿರುವುದು. ಸಾಮಾಜಿಕವಾಗಿ ವರದಕ್ಷಿಣೆಯನ್ನು ಬೇಡದಿರುವುದು. ಎಲ್ಲಾ ಯುವಕರೂ ಈ ಮೂರು ಕರ್ತವ್ಯಗಳನ್ನು ತಪ್ಪದೆ ಪಾಲಿಸುವ ಪ್ರತಿಜ್ಞೆ ತೊಡಬೇಕು.

* * *

## 8. ಜೀವನದ ಗುರಿ

ಶ್ರೀಮಧ್ವಾಚಾರ್ಯರು, ನಶ್ವರವಾದ ಈ ದೇಹದಿಂದ ಸ್ಥಿರವಾದ ಮೂರು ಫಲಗಳನ್ನು ಪಡೆಯಬಹುದೆಂದು ಸಂದೇಶಿಸಿದ್ದಾರೆ.

**ಪತಿತಸ್ಯಾಸ್ಯ ದೇಹಸ್ಯ ಕಾಷ್ಠವಿಷ್ಟಾ ಸಮಸ್ಯ ಚ ।**
**ಫಲಾನಿ ತ್ರೀಣಿ ಶಿಷ್ಯಂತೇ ವಿದ್ಯಾಕರ್ಮಸುತಾ ಇತಿ ॥**

ಈ ದೇಹ ಒಂದೊಮ್ಮೆ ಮಣ್ಣಲ್ಲಿ–ಮಣ್ಣಾಗುತ್ತದೆ. ಆದರೂ ಅದರ ಅಮೃತ ಫಲಗಳು ಮೂರು, ಜ್ಞಾನ–ಸತ್ಕರ್ಮ–ಸಂತತಿ.

ವಿದ್ಯಾ– ಈ ದೇಹದಿಂದ ಆಧ್ಯಾತ್ಮಿಕ ಜ್ಞಾನವನ್ನು ಸಾಧ್ಯವಾದಷ್ಟು ಗಳಿಸಿಕೊಳ್ಳಬೇಕು. ದೇಹ ಬಿದ್ದು ಹೋದರೂ ನಾವು ಗಳಿಸಿದ ಜ್ಞಾನ ಸಂಸ್ಕಾರದ ರೂಪದಲ್ಲಿ ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯುತ್ತದೆ. ಹೀಗಾಗಿ

ಈ ಜೀವನವನ್ನು ಮಾತ್ರ ಬೆಳಗುವುದಲ್ಲದೆ ಜನ್ಮ ಜನ್ಮಾಂತರಗಳನ್ನೂ ತತ್ತ್ವಜ್ಞಾನವು ಬೆಳಗಬಲ್ಲದು.

ಕರ್ಮ– ನಾವು ಮಾಡುವ ಒಳ್ಳೆಯ ಕೆಲಸಗಳು ನಶಿಸಬಹುದು. ಆದರೆ, ಅವರಿಂದ ಹುಟ್ಟಿದ ಪುಣ್ಯ ನಶಿಸುವುದಿಲ್ಲ. ಅದು ಮುಂದಿನ ಜನ್ಮ ಜನ್ಮಾಂತರಗಳಲ್ಲಿ ಫಲವನ್ನು ಕೊಡುತ್ತದೆ.

ಸುತಾ– ಇದು ಮೂರನೆಯ ಅಮೃತಫಲ, ಮುಂದಿನ ಪೀಳಿಗೆ ಧರ್ಮ, ಜ್ಞಾನ–ಸಂಸ್ಕೃತಿಗಳಿಂದ ಕೂಡಿದ ಪೀಳಿಗೆಯನ್ನು ಸಿದ್ಧಪಡಿಸುವುದೂ ನಮ್ಮ ಜೀವನದ ಗುರಿಯಾಗಬೇಕು. ಅದರಲ್ಲಿಯೇ ನಮ್ಮ ಜೀವನದ ಭವಿಷ್ಯ ಅಡಗಿದೆ.

* * *

## 9. 'ಯುವಕರಿಗೆ ನೀಡಿದ ವಿಶ್ವಸಂದೇಶ'

ಯುವ ಪೀಳಿಗೆ ಇದನ್ನು ಮಾಡಬಾರದು. ಇಂದು ಮದ್ಯ–ಮಾಂಸದಂತಹ ತಾಮಸ ಆಹಾರಗಳು ಎಲ್ಲರನ್ನು ಆಕರ್ಷಿಸುತ್ತವೆ. ನಮ್ಮ ಯುವಕರು ಅದಕ್ಕೆ ದಾಸರಾಗಬಾರದು. ಅದು ಕಲಿಯ ವಾಸಸ್ಥಾನ, ಎಂದು ಭಾಗವತದಲ್ಲಿ ಹೇಳಿದೆ. ಅದರಂತೆ ಪರಸ್ತ್ರೀಯರ ಬಗ್ಗೆ ಕೆಟ್ಟ ಭಾವನೆಗಳನ್ನು ಬೆಳೆಸಿಕೊಳ್ಳಬಾರದು. ಪುಂಡ ಪೋಕರಿಗಳನ್ನು ನಡೆಸಿ ಸಮಾಜಕ್ಕೆ ಹಿಂಸೆ ಆಗುವಂತೆ ನಡೆದುಕೊಳ್ಳಬಾರದು. ಅನ್ಯಾಯದ ಲಂಚರುಷುವತ್ತುಗಳಿಗೆ ಆಸೆ ಪಡಬಾರದು. ಹೀಗೆ ಅನಾಚಾರ, ಹಿಂಸಾಚಾರ, ವ್ಯಭಿಚಾರ, ಭ್ರಷ್ಟಾಚಾರ ಈ ನಾಲ್ಕು ದುರಾಚಾರಗಳಿಂದ ಯುವ ಸಮಾಜ ದೂರ ಉಳಿಯಬೇಕು.

ಇದಲ್ಲದೆ ಪ್ರಾಚೀನ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ ಬೆಳೆಸಬೇಕು ಕನಿಷ್ಠ ಪ್ರಮಾಣದಲ್ಲಾದರೂ ಧರ್ಮಾಚರಣೆಯನ್ನು ರೂಢಿಸಿಕೊಳ್ಳಬೇಕು. ತತ್ತ್ವಜ್ಞಾನದ ಅಧ್ಯಯನವನ್ನು ಸ್ವಲ್ಪವಾದರೂ ನಡೆಸಬೇಕು. ಜೊತೆಯಲ್ಲಿ ರಾಷ್ಟ್ರ ಸೇವೆಯಲ್ಲೂ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಬೇಕು. ಹೀಗೆ ಯುವಕರು ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ ಈ ಮೂರು ಕ್ಷೇತ್ರಗಳಲ್ಲೂ ತಮ್ಮನ್ನು ತೊಡಗಿಸಿಕೊಳ್ಳಬೇಕು.

ನಮಗೆ ನಮ್ಮ ಮತದಲ್ಲಿ ನಿಷ್ಠೆ ಇರಬೇಕು. ಆದರೆ ಪರಮತವನ್ನು ನಾವು ಸಹಿಸಿಕೊಳ್ಳಬೇಕು. ನಾಸ್ತಿಕತೆಯನ್ನು ಎದುರಿಸುವಾಗ ನಾವೆಲ್ಲರೂ ಒಂದೇ ಎಂದು ಶ್ರೀ ವಾದಿರಾಜರು ಹೇಳಿದ್ದಾರೆ. ಆದ್ದರಿಂದ ಸಮಾನ ವಿಷಯದಲ್ಲಿ ಇತರ ಮತೀಯರೊಂದಿಗೆ ಪರಸ್ಪರ ಸಹಕಾರ ಧೋರಣೆಯನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು.

ಸಮಾಜದ ಹಿರಿಯರು ಬಿಲ್ಲಾಗಿರಬೇಕು; ಯುವಕರು ಬಾಣದಂತಿರಬೇಕು. ಬಾಣದಂತೆ ಯುವಕರು ಮುಂದೆ ಮುಂದೆ ಸಾಗಿ ಗುರಿ ಮುಟ್ಟಬೇಕು. ಆದರೆ ಬಾಣ ಗುರಿ ಮುಟ್ಟಬೇಕಾದರೆ ಬಿಲ್ಲಿನ ಆಸರೆ ಬೇಕು. ಅದರಂತೆ ಹಿರಿಯರ ಮಾರ್ಗದರ್ಶನವಿಲ್ಲದೆ ಕಿರಿಯರು ಸ್ವಚ್ಛಂದವಾಗಿ ನಡೆಯಬಾರದು.

ಹೀಗೆ ದುರ್ವ್ಯಸನ ಮುಕ್ತ, ಸದಾಚಾರಯುಕ್ತ, ಶೀಲಯುಕ್ತ, ಭಗವದ್ಭಕ್ತ, ಶಕ್ತ ಯುವ ಸಮಾಜವನ್ನು ನಾವು ನೀರಿಕ್ಷಿಸುತ್ತೇವೆ.

* * *

## 10. ದೇವಾಲಯ ದೀಪಸ್ತಂಭ

ದೇವಾಲಯಗಳು ಸಮುದ್ರದ ದೀಪಸ್ತಂಭವಿದ್ದಂತೆ. ದೀಪಸ್ತಂಭ ದಾರಿ ತಪ್ಪಬಹುದಾದ ಹಡಗುಗಳಿಗೆ ದಾರಿ ದೀಪವಾಗುವಂತೆ ಸಮಾಜಕ್ಕೆ ಮಾರ್ಗದರ್ಶನ ನೀಡುವ ಧಾರ್ಮಿಕ ನಿಲಯ ದೇವಾಲಯ. ಅದು ಒಂದು ಸಾರ್ವಜನಿಕ ಸಂಸ್ಥೆಯಾಗಿದ್ದು ಅಲ್ಲಿ ನಡೆವ ಧಾರ್ಮಿಕ ಆಗುಹೋಗುಗಳು ರಾಷ್ಟ್ರದ ಮೇಲೆ ಪ್ರಭಾವ ಬೀರುತ್ತವೆ. ನಮ್ಮ ಪ್ರಾಚೀನ ಋಷಿಮುನಿಗಳು ಭಗವಂತನನ್ನು ಅಪರೋಕ್ಷೀಕರಿಸಿ ರಚಿಸಿದ ಶಾಸ್ತ್ರಗಳ- ನಿಯಮದಂತೆ ನಡೆಯುವ ದೇವಾಲಯಗಳು ಭಗವಂತನ ಪೂರ್ಣ ಸನ್ನಿಧಾನ ಪಾತ್ರವಾಗಿ ಭಜಿಸಿದ ಭಕ್ತರ ಅಭೀಷ್ಟಗಳನ್ನು ಕೈಗೂಡಿಸುವವು.

* * *

## 11. ಪ್ರಾಚೀನರ ನಿರ್ವಹಣಾ ಕೌಶಲ

ಶ್ರೀರಾಮ ಅಯೋಧ್ಯೆಯ ಅರಸನಾಗಬೇಕಾದಾಗ ದಶರಥನ ಉಪದೇಶದ ಮಾತು-

**'ಭೂಯೋ ನಿಯಮಮಾಸ್ಥಾಯ ಭವ ನಿತ್ಯಂ ಜಿತೇಂದ್ರಿಯಃ ।'**

'ಮಗೂ ರಾಜ್ಯದ ಅಧಿಕಾರ ನಿನಗೆ ಬರಲಿದೆ ಇದನ್ನು ಭೋಗದ ಸಾಧನೆ ಎಂದು ತಿಳಿಯದಿರು. ಮತ್ತಷ್ಟು ಆತ್ಮ ಸಂಯಮದಿಂದಿರು. ಇನ್ನಷ್ಟು ಕಟ್ಟುನಿಟ್ಟಿನಿಂದ ಇರಲು ಪ್ರಯತ್ನಿಸು.' ಆಳ್ವಿಕೆಯ ಅಧಿಕಾರ ಭೋಗಕ್ಕಲ್ಲ ತ್ಯಾಗಕ್ಕೆ. ಎಲ್ಲರಿಗೆ ಮಾರ್ಗದರ್ಶಕ ಸ್ಥಾನದಲ್ಲಿರುವ ರಾಜ ಎಲ್ಲರಿಗಿಂತ ಹೆಚ್ಚು ಶಿಸ್ತುಬದ್ಧನಾಗಿರಬೇಕು.

**'ಕ್ಷತ್ರಿಯೈಃ ಧ್ರಿಯತೇ ಚಾಪಃ ನಾರ್ತಶಬ್ದೋ ಭವೇದಿತಿ'** – ಪ್ರಜೆಗಳ ದುಃಖಪರಿಹಾರಕ್ಕಾಗಿಯೇ ರಾಜ ಅಧಿಕಾರದ ದಂಡವನ್ನು ಹಿಡಿದಿದ್ದಾನೆ. ದೇಶದ ಪ್ರಜೆಗಳು 'ತ್ರಾಹಿ' ಎಂದು ಆರ್ತರಾಗದಂತೆ ರಾಜನ ಆಳ್ವಿಕೆ ನಡೆಯಬೇಕು. ರಾಜ ಇದ್ದಿಲು ತಯಾರಿಸುವವನಂತೆ ಕರವನ್ನು ಸ್ವೀಕರಿಸಬಾರದು. ಇದ್ದಿಲು ಮಾಡುವವನು ತನ್ನ ಅಲ್ಪ ಸ್ವಾರ್ಥಕ್ಕೆ ಕಾಡಿನ ಮರಗಳಿಗೆ ಬೆಂಕಿ ಹಚ್ಚುತ್ತಾನೆ. ಈ ರೀತಿ ಹಿಂಸಿಸಿ ಕರವಸೂಲಿ ಮಾಡಬಾರದು. ಅವನು ಮಾಲಾಕಾರನಂತಿರಬೇಕು, ಮಾಲಾಕಾರ ಒಂದೊಂದು ಗಿಡಗಳಿಂದಲೂ ಅವುಗಳಿಗೆ ಹಿಂಸೆಯಾಗದಂತೆ ಹೂವನ್ನು ಕೀಳುತ್ತಾನೆ. ಅದರಂತೆ ರಾಜ ಕರ ವಸೂಲಿ ಮಾಡಬೇಕು. ಅವನು ತಿಗಣೆಯಾಗಬಾರದು, ಮಕರಂದ ಹೀರುವ ದುಂಬಿಯಾಗಬೇಕು.

ಶ್ರೀರಾಮ ಪ್ರಜೆಗಳಿಗಾಗಿ ನಿರ್ದೋಷಿಯೆಂದು ತಿಳಿದೂ ತನ್ನ ಪತ್ನಿಯನ್ನು ಪರಿತ್ಯಾಗ ಮಾಡಿದ. ಶ್ರೀಕೃಷ್ಣ ತನ್ನ ಮೇಲೆ ಬಂದ ಸ್ಯಮಂತಕ ಮಣಿಯ ಅಪಹಾರದ ಅಪವಾದದ ಪರಿಹಾರಕ್ಕಾಗಿ ತಾನೇ ಪ್ರಯತ್ನಿಸಿ ಜನರಿಗೆ ಸತ್ಯದರ್ಶನ ಮಾಡಿಸಿದ. ಇದೇ ನಮ್ಮ ಪ್ರಾಚೀನ ರಾಜರ ಆದರ್ಶ.

ಅಗಸ್ತ್ಯರು ತಮ್ಮ ಕುಟುಂಬ ನಿರ್ವಹಣೆಗಾಗಿ ರಾಜರ ಮುಂದೆ ಕೈಚಾಚಿದರು. ಆದರೆ ಅವರದ್ದು ಒಂದು ಕರಾರು– "ಪ್ರಜಾಕ್ಷೇಮಕ್ಕಾಗಿ ಮೀಸಲಾದ ಹಣ ತನಗೆ ಕೊಡಬಾರದು" ಎಂದು. ಆದರೆ ಎಲ್ಲಾ ಕ್ಷತ್ರಿಯರಲ್ಲೂ ಆಯಕ್ಕೆ ಸಮನಾದ ವ್ಯಯವಿತ್ತು. ಅಗಸ್ತ್ಯರಿಗೆ ಕೊಡಬಹುದಾದ ಹಣ ಇರಲಿಲ್ಲ. ಕೊನೆಗೆ ಅಗಸ್ತ್ಯರು, ಇಲ್ವಲ ವಾತಾಪಿಯರು ದೋಚಿ ಕೂಡಿಟ್ಟ ನಿರರ್ಥಕ ಹಣವನ್ನು, ಅವರ ಸಂಹಾರ ಮಾಡಿ ಪಡೆದುಕೊಂಡರು. ಹೀಗಿತ್ತು ನಮ್ಮ ಪ್ರಾಚೀನ ರಾಜರ ಬಜೆಟ್ಟು.

ಭೀಮಸೇನ ಕೌರವರ ವೈಭವದ ಉತ್ತರಕ್ರಿಯೆಗಾಗಿ ಬೊಕ್ಕಸದ ಹಣವನ್ನು ನಿರಾಕರಿಸಿದ. ಧರ್ಮರಾಜ ತನ್ನ ಸ್ವಂತ ಹಣವನ್ನು ಕೊಟ್ಟು ಉತ್ತರಕ್ರಿಯೆ ನಡೆಸಿದ. ಹೀಗೆ ನಮ್ಮ ಪ್ರಾಚೀನ ರಾಜರಿಗೆ ತಮ್ಮ ವಯಕ್ತಿಕ ಗಳಿಕೆ ಮತ್ತು ರಾಜ್ಯದ ಸಂಪತ್ತಿನ ಬಗ್ಗೆ ಸ್ಪಷ್ಟವಾದ ವಿವೇಕವಿತ್ತು. ನಮ್ಮ ರಾಜಕಾರಣಿಗಳು ಇತಿಹಾಸದ ಕಡೆಗೆ ಒಮ್ಮೆ ನೋಡಬೇಕು. ಧಾರ್ಮಿಕ ಹಿನ್ನೆಲೆಯ ರಾಜಮಹಾರಾಜರ ಸನ್ನಡತೆಗಳನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸಬೇಕು.

* * *

## 12. ಪತ್ರಿಕೆಗಳ ಕೆಲಸವೇನು

ಇಂದು ಪತ್ರಿಕೆಗಳು ಸಾಮಾಜಿಕ ಜೀವನದಲ್ಲಿ ಬಹಳ ಪ್ರಭಾವಕಾರಿಯಾಗಿವೆ. ಅವುಗಳಿಂದ ಉತ್ತಮ ಹಾಗೂ ತಪ್ಪು ದಾರಿಗೆಳೆಯುವಂತಹ ಕಾರ್ಯವೆರಡೂ ನಡೆಯಬಹುದು. ಹೇಗೆಂದರೆ ಒಂದು ದೀಪವಿದೆ ಆ ದೀಪ ಬೆಳಕನ್ನು ನೀಡುವುದರ ಮೂಲಕ ಅನೇಕ ರೀತಿಯ ಉಪಯೋಗಕ್ಕೆ ಬರುವುದು. ಅದೇ ದೀಪ ವಿಧ್ವಂಸಕ ಕೃತ್ಯಕ್ಕೂ ಉಪಯೋಗವಾಗಬಹುದು. ಆ ದೀಪ ಬೆಳೆದು ಇಡೀ ಪ್ರಪಂಚವೇ ಸುಡಲೂಬಹುದು. ಅದರಂತೆ ಪತ್ರಿಕೆ ಜನರ ವ್ಯಕ್ತಿತ್ವವನ್ನು ವಿಕಾಸಗೊಳಿಸುವಂತಹ ಜ್ಞಾನದ ಕಾರ್ಯವನ್ನು ಮಾಡಬಹುದು. ಅಥವಾ ಮನಸ್ಸನ್ನು ವಿಕಾರಗೊಳಿಸಿ ಸಮಾಜವನ್ನು ಕಲುಷಿತಗೊಳಿಸುವಂತಹ ಕಾರ್ಯವೂ ಸಹ ಪತ್ರಿಕೆಗಳಿಂದ ಸಾಧ್ಯ. ಭಾಗವತದಲ್ಲಿ ಒಂದು ಮಾತು ಬರುತ್ತದೆ, **'ತದ್ವಾಯಸಂ ತೀರ್ಥಮುಷಂತಿ'** ಎಂಬುದಾಗಿ ಯಾವುದು ಭಗವಂತನೆಡೆಗೆ ನಮ್ಮನ್ನು ಎಳೆಯುವುದೋ ಅದು ನಿಜವಾದ ಸಾಹಿತ್ಯ. ಆ ರೀತಿ ಮಾಡದೇ ಇರುವುದಿಲ್ಲವೋ ಅದು ಕಾಗೆ ಮೀಯುವ ಕೊಳಚೆ ನೀರು ಇದ್ದಂತೆ. ಇದರಂತೆ ಪತ್ರಿಕೆಯೂ ಕೂಡ. ಆದರೆ ಯಾವುದು ನಮ್ಮನ್ನು ಭಗವಂತನೆಡೆಗೆ ಕರೆದೊಯ್ಯುವುದೋ ಅದು ಮಾನಸ ಸರೋವರದಂತೆ ಕಲುಷಿತವಾಗದೇ ಇರಬೇಕು. ಇಂತಹ ಪತ್ರಿಕೆಗಳಿಂದ ಸನ್ಯಾಸಿಗಳೂ ನೋಡುವಂತಹ ಸಾಹಿತ್ಯ ಪ್ರಕಟವಾಗಬೇಕು. ಆಗ ಮಾತ್ರ ಸಮಾಜಕ್ಕೆ ಕ್ಷೇಮ. ಮಾನಸಹಂಸರು, ಸನ್ಯಾಸಿಗಳು ನೋಡುವಂತಹ ಸಾಹಿತ್ಯ ಇರಬೇಕೇ ಹೊರತು ಕಾಗೆಗಳು ಮೀಯುವಂತಹ ಸಾಹಿತ್ಯ ಇರಬಾರದು

ಎಂದು ಭಾಗವತದ ಉಲ್ಲೇಖ. ಇಂದು ಇಂತಹ ಪತ್ರಿಕೆಗಳು ಬೇಕಾಗಿದೆ. ಆಚಾರ್ಯರ ತತ್ತ್ವಜ್ಞಾನ, ಸಿದ್ಧಾಂತ, ಭಕ್ತಿ ಹಾಗೂ ಭಗವಂತನ ಬಗ್ಗೆ ತಿಳಿಸಿಕೊಡುವ ಪತ್ರಿಕೆ ಬೇಕು. ಆಚಾರ್ಯರು ನಮ್ಮ ಕಲ್ಪನೆಗೆ ಮೀರದ ತತ್ವವನ್ನು ತಿಳಿಸದೇ ನಮ್ಮತನವನ್ನು, ಆತ್ಮಜ್ಞಾನವನ್ನು ಪಡೆಯುವ ಬಗೆ ತಿಳಿಸಿಕೊಟ್ಟರು. ನಮ್ಮ ಆತ್ಮ ಚೈತನ್ಯ ಸ್ವರೂಪಿ. ಜ್ಞಾನಸ್ವರೂಪಿ. ಆದರೆ ಅದು ಜ್ಞಾನಹೀನವಾಗಿದೆ.

ಗಾಳಿಬಂದಾಗ ಬೂದಿಹಾರಿಹೋಗಿ ಕೆಂಡದ ಶಕ್ತಿ, ಬೆಳಕು ಗೊತ್ತಾಗುವಂತೆ ನಮಗೆ ಆಚಾರ್ಯರ ತತ್ತ್ವಜ್ಞಾನವೆನ್ನುವ ಗಾಳಿ ಬೀಸಿದಾಗ ನಮ್ಮ ಅಜ್ಞಾನ ಕಳೆದು ಶುದ್ಧ ಜ್ಞಾನ, ಚೈತನ್ಯ, ಆನಂದ ಪ್ರಕಟವಾಗುತ್ತದೆ. **'ಮುಕ್ತಿಃನೈಜಸುಖಾನುಭೂತಿಃ'** ಮುಕ್ತಿಯ ಸುಖವು ಹೊರಗಿನಿಂದ ಬರುವುದಿಲ್ಲ. ಒಳಗಿನಿಂದಲೇ ಬರಬೇಕು. ಅದಕ್ಕಾಗಿ ನಾವು ನಾವಾಗಬೇಕು. ನಮ್ಮತನವನ್ನು ಪಡೆಯಬೇಕು. ಇದೇ ಮೋಕ್ಷದ ಸ್ವರೂಪ.

* * *

## 13. ನಮಗೇಕೆ ದುರ್ವಾಸನೆ ಬರುತ್ತಿಲ್ಲ ?

"ನಿನ್ನ ಅರಮನೆಯ ದುರ್ವಾಸನೆಯನ್ನು ನಾನು ಸಹಿಸಲಾರೆ."

ರಾಜನೊಬ್ಬನು ಓರ್ವ ಯೋಗಿಯನ್ನು ತನ್ನ ಅರಮನೆಯಲ್ಲಿ ವಾಸ್ತವ್ಯ ಕೈಗೊಳ್ಳುವಂತೆ ಕೇಳಿಕೊಂಡಾಗ ಆ ಯೋಗಿ ನೀಡಿದ ಉತ್ತರವಿದು.

ರಾಜನಿಗೆ ಆಶ್ಚರ್ಯ. ತಾನು ಇಪ್ಪತ್ತನಾಲ್ಕು ತಾಸೂ ಯಾವ ಅರಮನೆಯಲ್ಲೇ ಇರುವೆನೋ ಅಂತಹ ಅರಮನೆಯಲ್ಲಿ ದುರ್ವಾಸನೆ! ಒಮ್ಮೆಯಾದರೂ ಆ ದುರ್ವಾಸನೆ ತನ್ನ ಮೂಗಿಗೆ ಬಡಿಯಬೇಕಿತ್ತಲ್ಲ! ರಾಜ ಹೀಗೆ ಯೋಗಿಯನ್ನು ಕೇಳುವನು. ಇದಕ್ಕೆ ಕೆಲವು ದಿನಗಳ ಬಳಿಕ ಉತ್ತರಿಸುವುದಾಗಿ ಯೋಗಿಯು ತಿಳಿಸುವನು.

ಈ ಘಟನೆ ಸಂಭವಿಸಿ ಕೆಲವು ದಿನಗಳ ಬಳಿಕ ಆ ರಾಜ ಮತ್ತು ಯೋಗಿ ಚಮ್ಮಾರರ ಓಣಿಯ ಮೂಲಕ ಹಾದು ಹೋಗಬೇಕಾದ ಸಂದರ್ಭವೊಂದು ಒದಗಿ ಬಂತು. ರಾಜನು ಆ ಚಮ್ಮಾರರ ಓಣಿಯ ಮಧ್ಯೇ ಹಾದು ಹೋಗಲು ಒಪ್ಪುವುದಿಲ್ಲ. ಚರ್ಮದ ಕೆಲಸ ಮಾಡುತ್ತಿರುವ

ಅಲ್ಲಿ ಚರ್ಮದ ದುರ್ವಾಸನೆ ತುಂಬಿ ಕೊಂಡಿರುವುದು. ಅದನ್ನು ಸಹಿಸಿಕೊಳ್ಳಲಾಗಲಿಕ್ಕಿಲ್ಲೆಂದು ರಾಜನು ಉಪಪಾದಿಸುವನು.

'ಹಾಗಾದರೆ ಆ ಚಮ್ಮಾರರು ಹೇಗೆ ಅಲ್ಲಿ ಬದುಕುತ್ತಿದ್ದಾರೆ?'- ಯೋಗಿ.

'ಅವರಿಗೆ ಆ ದುರ್ವಾಸನೆ ಒಗ್ಗಿ ಹೋಗಿದೆ'

"ರಾಜ! ನಿನ್ನೀ ಉತ್ತರ ಅಂದು ನನಗೆ ಕೇಳಿದ ಪ್ರಶ್ನೆಯನ್ನೂ ಸಮಾಧಾನಿಸಬಲ್ಲದು. ನಿನ್ನ ಅರಮನೆಯ ವಿಷಯ - ಪದಾರ್ಥಗಳ ದುರ್ವಾಸನೆಯಿಂದ ತುಂಬಿ ತುಳುಕುತ್ತಿದೆ. ಆದರೆ ಇಡೀ ದಿನ ಅವುಗಳ ನಡುವೆಯೇ ಮುಳುಗಿರುವ ನಿನಗೆ ಅದು ದುರ್ವಾಸನೆಯೇ ಅಲ್ಲ ಅನ್ನುವಷ್ಟೂ ಒಗ್ಗಿ ಹೋಗಿದೆ. ಆದರೆ ವಿಷಯ-ಪದಾರ್ಥಗಳ ಸಂಪರ್ಕ ಕಡಿಮೆಯಾಗಿರುವ ವನಾದಿಗಳಲ್ಲಿ ಹೆಚ್ಚಾಗಿ ವಾಸಿಸುವ ನಮಗೆ ಅರಮನೆಯ ವಾತಾವರಣದ ದುರ್ವಾಸನೆ ಸಹಿಸಲಾಗುತ್ತಿಲ್ಲ"- ಎನ್ನುವನು ಯೋಗಿ.

ನಾವು ದುರ್ಗಂಧಯುಕ್ತವಾದ ಸಾಂಸಾರಿಕ-ಪದಾರ್ಥಗಳ ನಡುವೆಯೇ ಕೊಳೆಯುತ್ತಿದ್ದೇವೆ. ಆದರೆ ಅನಾದಿ ಸಂಸ್ಕಾರದಿಂದಾಗಿ ಈ ದುರ್ಗಂಧವನ್ನು ದುರ್ಗಂಧವೆಂದು ಗುರುತಿಸಿಕೊಳ್ಳಲಾರದಷ್ಟೂ, ಶಾಸ್ತ್ರದ ಸುಗಂಧವನ್ನು ಸುಗಂಧವೆಂದು ಪರಿಗಣಿಸಲಾರದಷ್ಟೂ ಸಂಸಾರದ ದುರ್ಗಂಧ ನಮಗೆ ಒಗ್ಗಿ ಹೋಗಿದೆ.

* * *

## 14. ದೂರದರ್ಶನ

ಅದೊಂದು ತುಂಬುನೀರಿನ ಸರೋವರ. ಅದರಲ್ಲಿ ತುಂಬ ಮೀನುಗಳು. ಹೆಚ್ಚು ನೀರಿದ್ದರೆ ಮೀನು ಹಿಡಿಯಲಾಗದೆಂದು ಬಲೆ ಬೀಸುವ ಬೆಸ್ತರು ತೂತುಗಳ ಮೂಲಕ ನೀರು ಹೊರಗೆ ಹರಿಸುತ್ತಿದ್ದಾರೆ. ಬರುತ್ತಿರುವ ಆಪತ್ತನ್ನು ಮೊದಲೇ ತಿಳಿದ ಮೀನೊಂದು ತನ್ನ ಮಿತ್ರ ಮೀನುಗಳಿಗೆ ಹೇಳಿತು- "ಬೆಸ್ತರು ಬಲೆ ಬೀಸುವವರಿದ್ದಾರೆ, ನಾವೂ ನೀರಿನೊಂದಿಗೆ ಈ ರಂಧ್ರಗಳ ಮೂಲಕ ಹೊರಗೆ ಹೋದರೆ ಉಳಿಯಬಹುದು. ಇಲ್ಲದಿದ್ದರೆ ಆಪತ್ತು ನಿಶ್ಚಯ".

"ಯಾರೂ ಈಗ ಬಲೆ ಹಾಕಿಲ್ಲ; ಗಾಬರಿ ಏಕೆ?" ಎಂದು ಹೇಳುತ್ತಿದ್ದವು ಇತರ ಮೀನುಗಳು. ಅದೊಂದೇ ಮೀನು ಹೊರಹೋಯಿತು. ಬೆಸ್ತರು ಬಲೆಬೀಸಿದರು. ಮೀನುಗಳೆಲ್ಲ ಸಿಕ್ಕಿಬಿದ್ದವು. ಹೊರಹೋದ ಮೀನು ಬದುಕಿತು, ಮೀನುಗಳ ಮಧ್ಯೆಯೇ ಇದ್ದ ಒಂದು ಮೀನು ಬರಲಿರುವ ಆಪತ್ತನ್ನು ತಿಳಿದು ವಿವೇಕಿಯಾಗಿ ಜೀವ ಉಳಿಸಿಕೊಂಡಿತು.

ಧರ್ಮಕ್ಕೆ, ವ್ಯಕ್ತಿಗೆ ಬರುವ ಆಪತ್ತನ್ನು ಮೊದಲೇ ತಿಳಿದು ರಕ್ಷಣೆ ಪಡೆಯಬೇಕು.

ದೇಶದಲ್ಲಿ ತೀವ್ರ ಹಿಂದೂಮತಾಂತರವಾಗುತ್ತಿದ್ದರೂ ದೂರದರ್ಶಿತ್ವವಿಲ್ಲದೆ ಈಗ ಆಪತ್ತು ಬಂದಿಲ್ಲ ತಾನೆ ಎಂದು ನಿಶ್ಚಿಂತೆಯಿಂದ ಕೂಡುವುದು ದೊಡ್ಡ ತಪ್ಪು. ಎಲ್ಲರೂ ಹೀಗೆ ಮತಾಂತರಗೊಳ್ಳುತ್ತಿದ್ದರೆ ಮುಂದೆ ನಮ್ಮ ದೇಶಕ್ಕೆ, ಹಿಂದೂಗಳಿಗೆ ಎಂತಹ ಅನರ್ಥ ಒದಗೀತು! ಎಂಬುದನ್ನು ಈಗಲೇ ಮನವರಿಕೆ ಮಾಡಿಕೊಂಡು ರಕ್ಷಣೆಯ ಮಾರ್ಗ ಹುಡುಕುವುದು ಅಗತ್ಯ.

* * * *

# ಪರಮತ ವಿಮರ್ಶೆ



ಚಕ್ರ-ಪದ್ಮ-ಶಂಖ-ಗದಾಧಾರಿಯಾದ 'ವೃದ್ಧಿ'ಪತಿ 'ಹೃಷೀಕೇಶ'



## ಸತ್ಯ ದಾರಿ ಒಂದೇ

ಯಾವ ಮಾರ್ಗವಾದರೇನು? ಎಲ್ಲವೂ ಒಂದೇ ಗುರಿಗೆ ನಮ್ಮನ್ನು ಒಯ್ಯುವುರೆಂದು ಭಾವಿಸಿಕೊಂಡು ಯಾವ ವಿಮರ್ಶೆಯೂ ಇಲ್ಲದೆ ತಮಗೆ ತೋರಿದ ದಾರಿಯಲ್ಲಿ ಕೆಲವರು ಸಾಗುವರು.

ಇದರಿಂದ ಸತ್ಯವನ್ನು ಬಹುಲಘುವಾಗಿ ಭಾವಿಸಿಕೊಂಡಂತಾಗುವುದು. ಒಂದೇ ವಿಷಯದ ಬಗ್ಗೆ ಪರಸ್ಪರ ವಿರುದ್ಧವಾದ ಎರಡೂ ಮಾತುಗಳು ಸತ್ಯವೆನಿಸಲಾರವು. ಅವೆರಡರಿಂದಲೂ ನಮಗೆ ಒಂದೇ ಫಲವು ದೊರೆಯುವುದಾದರೆ ಅಸತ್ಯ ಮಾರ್ಗದಿಂದಲೂ ಮುಕ್ತಿಯು ಲಭಿಸುವುದೆಂದು ಹೇಳಿದಂತಾಗುವುದು. ಸತ್ಯ ಅಸತ್ಯ ಇವೆರಡನ್ನೂ ಒಂದೇ ಮಟ್ಟದಲ್ಲಿ ನೋಡುವುದರಿಂದ ಸತ್ಯದ ಪವಿತ್ರತೆ ಹಾಗೂ ಮಹತ್ವವನ್ನು ಅಲ್ಲಗಳೆದಂತಾಗುವುದು. ಇದರಿಂದ ಲೋಕದಲ್ಲಿ ಸತ್ಯಾನ್ವೇಷಣೆಯ ದೃಷ್ಟಿಯೇ ಕುಂಠಿತವಾಗುವುದು.

– ಶ್ರೀ ವಿಶ್ವೇಶತೀರ್ಥಶ್ರೀಪಾದರು

## 1. ತತ್ತ್ವಮಸಿ – ಸಂದೇಶದ ಜಾಗೃತಿ

ತಾನೂ ಸಿಂಹನಾಗಿರುವೆನೆಂದು ಅರಿಯದ ಸಿಂಹದ ಮರಿಯೊಂದು ಸಿಂಹವೊಂದರ ಭಯಂಕರ ರೂಪವನ್ನು ಕಂಡು 'ತಾನೂ ಹಾಗಿದ್ದಿದ್ದರೆ!' ಎಂದು ಆಸೆ ಪಡುತ್ತಿತ್ತು. ಒಂದು ದಿನ ಆ ಸಿಂಹದ ಮರಿಗೆ ಬಾವಿಯಲ್ಲಿ ಇಣಿಕಿ ತನ್ನ ಪ್ರತಿಬಿಂಬವನ್ನು ಕಾಣುವ ಸನ್ನಿವೇಶ ಒದಗಿಬಂತು. ತನ್ನ ಪ್ರತಿಬಿಂಬವನ್ನು ಕಂಡ ಅದು ವಿವೇಚಿಸಿಕೊಂಡಿತು-ತಾನು ಆಗಾಗಲೇ ಸಿಂಹನಾಗಿರುವೆನೆಂದು.

ತಾವು ಬ್ರಹ್ಮಸ್ವರೂಪಿಗಳಾಗಿದ್ದರೂ, ಅದನ್ನು ವಿವೇಚಿಸಿಕೊಳ್ಳದ ಜೀವಾತ್ಮರ ಪಾಡೂ ಇದೇ. ಎಂದಾದರೊಮ್ಮೆ ಗುರೂಪದೇಶ, ಶಾಸ್ತ್ರ ಶ್ರವಣಾದಿಗಳು ದೊರೆತವೆಂದರೆ ಆಗ ಅವರು ವಿಶ್ಲೇಷಿಸಿಕೊಳ್ಳಬಲ್ಲರು ತಾವೂ ಬ್ರಹ್ಮರೂಪಿಗಳೇ ಎಂದು.

ಅದ್ವೈತ ವೇದಾಂತಿಗಳು ತಮ್ಮ ಐಕ್ಯವಾದವನ್ನು ಮಂಡಿಸಲು ಬಳಸುವ ಈ ನಿದರ್ಶನವನ್ನು ಚೆನ್ನಾಗಿ ವಿವೇಚಿಸಿಕೊಂಡೆವೆಂದರೆ ಸತ್ಯ ತಿಳಿದೀತು.

ನೀರಲ್ಲಿ ತನ್ನ ಪ್ರತಿಬಿಂಬವನ್ನು ಕಾಣುವ ಸಿಂಹದ ಮರಿಗೆ, ಆ ಸಿಂಹದಂತೆ ತಾನೂ ಒಂದು ಸಿಂಹನಾಗಿರುವುದಾಗಿ ವಿವೇಕೋದಯ-ವಾಗುತ್ತದೆಯೇ ಹೊರತು 'ತಾನು ಆ ಸಿಂಹವೇ ಆಗಿರುವೆ'ನೆಂಬ ಐಕ್ಯಜ್ಞಾನವಲ್ಲ ತಾನೇ? ವೇದಾಂತದ ತತ್ತ್ವಜ್ಞಾನ ಉದಯಿಸಿದಾಗ ಜೀವಾತ್ಮರಿಗೆ ತಾವೂ ಪರಮಾತ್ಮನಂತೆಯೇ ಚೇತನರು, ನಿತ್ಯರು, ಎಂದು ಪರಮಾತ್ಮನ ಸಾದೃಶ್ಯದ ಪ್ರಜ್ಞೆಯೇ ಜಾಗೃತವಾಗುವುದು ಹೊರತು ಐಕ್ಯಜ್ಞಾನವಲ್ಲ. ಉದ್ದಾಲಕರು ಶ್ವೇತಕೇತುವಿಗೆ ಉಪದೇಶಿಸಿದ **'ತತ್ತ್ವಮಸಿ'** ಎಂಬ ಸಂದೇಶವೂ ಉಂಟುಮಾಡಬಲ್ಲ ಜಾಗೃತಿ. 'ಆ ಪರಮಾತ್ಮನಿಗೆ ಸದೃಶನಾದ ಚೇತನ ನೀನು ಎಂದು' ಹೊರತು ನೀನೇ ಪರಮಾತ್ಮ ಎಂದಲ್ಲ.

* * *

## 2. 'ಸಂನ್ಯಾಸಿ ಸಂಸಾರ'ದಂತೆ

ಮನೆಮಠವನ್ನೆಲ್ಲ ತ್ಯಜಿಸಿ ಅರಣ್ಯಕ್ಕೆ ತೆರಳಿದ ಸನ್ಯಾಸಿಯೊಬ್ಬ ಇಲಿಗಳ ಕಡಿತದಿಂದ ತನ್ನ ಕೌಪೀನವನ್ನು ಕಾಪಾಡುವುದಕ್ಕಾಗಿ ಒಂದು ಬೆಕ್ಕನ್ನು

ಸಾಕಲು ತೊಡಗಿದ. ಬೆಕ್ಕಿಗೆ ಬೇಕು ಹಾಲು. ಹಾಲಿಗಾಗಿ ಒಂದು ಹಸುವನ್ನೂ ಆ ಸನ್ಯಾಸಿ ಸಾಕಬೇಕಾಯಿತು. ಆದರೆ ಹಸುವಿನ ಲಾಲನೆಪೋಷಣೆಗಳಲ್ಲಿಯೇ ತೊಡಗಿದರೆ ತನ್ನ ಸಾಧನೆ ಮುಂದುವರಿವುದೆಂತು? ಅದಕ್ಕಾಗಿ ಹಸುವಿನ ಪೋಷಣೆಗಾಗಿ ಒಬ್ಬ ಸ್ತ್ರೀಯನ್ನೂ ಪೋಷಿಸಬೇಕಾಯಿತು. ಹೀಗೆ ಕೌಪೀನ ರಕ್ಷಣೆಯಲ್ಲಿ ತೊಡಗಿದ ಆ ಸನ್ಯಾಸಿಯ ಸಂಸಾರ ಕ್ರಮೇಣ ಹಿಗ್ಗಿಹಿಗ್ಗಿ ಒಬ್ಬ ಗೃಹಸ್ಥನ ಸಂಸಾರದಷ್ಟೇ ವ್ಯಾಪಕವಾಗಿ ಬೆಳೆಯುವಂತಾಯಿತು.

ಅದ್ವೈತಿಗಳು ಪ್ರಸ್ತುತಪಡಿಸುವ ಜಗನ್ಮಿಥ್ಯಾತ್ವವಾದ ಈ ಸನ್ಯಾಸಿಯ ಸಂಸಾರವನ್ನು ನೆನಪಿಸಿ ಕೊಡುವಂತಹದ್ದು. ಜಗತ್ತೆಲ್ಲ ಮಿಥ್ಯಾ-ಭ್ರಾಂತಿಕಲ್ಪಿತ ಎಂದು ಪ್ರತಿಪಾದಿಸುವ ಅವರು ತನ್ನ ಕೌಪೀನ ರಕ್ಷಣೆಗಾಗಿ ಬೆಕ್ಕನ್ನು ಸಾಕಲು ತೊಡಗಿದ ಸನ್ಯಾಸಿಯಂತೆ ತಾವು ಸಮರ್ಥಿಸುವ ಮಿಥ್ಯಾತ್ವದ-ಭ್ರಾಂತಿಕಲ್ಪಿತತ್ವದ ಸಾಧನೆಗಾಗಿ ಅಂತಹ ಭ್ರಾಂತಿಗೆ ಆಶ್ರಯವಾಗಿ ವ್ಯಕ್ತಿಯನ್ನು ಒಪ್ಪಿಕೊಳ್ಳಬೇಕು. ವ್ಯಕ್ತಿಗೆ ಶರೀರವಿದ್ದರಷ್ಟೇ, ಅವಯವಗಳಿದ್ದರಷ್ಟೇ ಭ್ರಾಂತಿ ಬರಲು ಸಾಧ್ಯವಾದುದರಿಂದ ಶರೀರ ಅವಯವಾದಿಗಳನ್ನೂ ಒಪ್ಪಬೇಕು. ಶರೀರಾದಿಗಳಿಗಾಗಿ-ಅವುಗಳಿಗೆ ಸಂಬಂಧಪಡುವ ಆಹಾರವಸತ್ಯಾದಿಗಳನ್ನು ಒಪ್ಪಿಕೊಳ್ಳಬೇಕು. ಜಗತ್ತಿನ ಭ್ರಾಂತಿ ಸಾವಿರಾರು ವ್ಯಕ್ತಿಗಳಿಗೆ ಬರುವುದೆಂದರೆ ಅಂತಹ ಸಾವಿರಾರು ವ್ಯಕ್ತಿಗಳ ಶರೀರಾದಿಗಳನ್ನೂ ಒಪ್ಪಿಕೊಳ್ಳಬೇಕಾಗುವುದು. ಹೀಗೆ ಜಗತ್ತನ್ನು ಮಿಥ್ಯಾ ಎನ್ನಬೇಕಾದರೆ ಮತ್ತೊಂದು ಜಗತ್ತನ್ನು ಪಾರಮಾರ್ಥಿಕ ಎಂದು ಒಪ್ಪಿಕೊಳ್ಳಬೇಕಾದ ಪ್ರಸಂಗ-ಅರಣ್ಯದಲ್ಲಿ ಸಂಸಾರವನ್ನು ಬೆಳೆಸಿಕೊಂಡ ಸನ್ಯಾಸಿಯ ಪ್ರವೃತ್ತಿಗೆ ಸಮಾನವಾದುದು.

ಶ್ರೀಮಧ್ವಾಚಾರ್ಯರು ತಮ್ಮ ಅನುವ್ಯಾಖ್ಯಾನದಲ್ಲಿ ಪರಮತಗಳ ಪ್ರಮೇಯಗಳನ್ನು ಎಷ್ಟು ಚಮತ್ಕಾರವಾಗಿ ನಿರಾಕರಿಸಿರುವರೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

* * *

## 3. ಸೊಸೆಯನ್ನು ಗದರಿಸಿದ ಅತ್ತೆಯಂತೆ

ಭಿಕ್ಷುಕನೊಬ್ಬನು ಭಿಕ್ಷೆ ಬೇಡುತ್ತ ಮನೆ ಬಾಗಿಲಿಗೆ ಬರುವನು. ಮನೆಯ ಸೊಸೆ ಭಿಕ್ಷುಕನನ್ನು ಮುಂದೆ ಸಾಗಲು ಹೇಳುವಳು. ಹೀಗೆ ಸೊಸೆ

ಭಿಕ್ಷುಕನನ್ನು ಭಿಕ್ಷೆ ಕೊಡದೆ ಕಳುಹಿಸಿದ್ದನ್ನು ಗಮನಿಸಿದ ಅತ್ತೆ ಬಂದು ಸೊಸೆಗೆ ಗದರಿಸುವಳು. ಸೊಸೆಯನ್ನು ಅತ್ತೆ ಗದರಿಸುತ್ತಿರುವುದನ್ನು ಕಂಡ ಭಿಕ್ಷುಕ, ಹಾಗಾದರೆ ಅತ್ತೆ ತನಗೆ ಭಿಕ್ಷೆಯನ್ನು ನೀಡುವ ಉದ್ದೇಶವನ್ನು ಹೊಂದಿರುವಳೆಂದು ಭಾವಿಸಿ ಪುನಃ ಆ ಮನೆಯ ಬಾಗಿಲಿನ ಎದುರು ಹಾಜರಾಗುವನು, ಆಗ ಅತ್ತೆ ಬಂದು, ಸೊಸೆ ಭಿಕ್ಷುಕನಿಗೆ ಹೇಳಿದಂತೆಯೇ 'ಭಿಕ್ಷೆ ಇಲ್ಲ, ಮುಂದೆ ನಡಿ' ಎಂದು ಜೋರಾಗಿ ಹೇಳುವಳು. ಪೆಚ್ಚು ಮೋರೆ ಹಾಕಿಕೊಂಡು ಭಿಕ್ಷುಕ ಮುಂದೆ ಸರಿಯುವನು.

ಅತ್ತೆಯ ಈ ಪ್ರವೃತ್ತಿಯನ್ನು ಕಾಣುತ್ತಿದ್ದ ವ್ಯಕ್ತಿಯೊಬ್ಬನು ಅವಳಲ್ಲಿ ವಿಚಾರಿಸುವನು-ಭಿಕ್ಷುಕನನ್ನು ಭಿಕ್ಷೆ ಕೊಡದೆ ಕಳುಹಿಸಿದ ಸೊಸೆಯನ್ನು ಗದರಿಸಿದ ನೀನೂ ಆ ಭಿಕ್ಷುಕನಿಗೆ ಆ ಮಾತುಗಳನ್ನೇ ಹೇಳಿ ಮುಂದೆ ಕಳುಹಿಸಿದೆ. ಹೀಗಿರುವಾಗ ಸೊಸೆಯ ಅಪರಾಧವೇನು? ಅವಳನ್ನು ಯಾಕಾಗಿ ನೀನು ಗದರಿಸಿದಿ? ಅದಕ್ಕೆ ಅತ್ತೆ ಉತ್ತರಿಸುವಳು.- 'ಈ ಮನೆಯ ಯಜಮಾನಿನಿ ನಾನು. ಆದುದರಿಂದ ಮನೆಗೆ ಬಂದ ಭಿಕ್ಷುಕನನ್ನು ಕಳುಹಿಸುವಲ್ಲಿ ನಾನು ಅಧಿಕಾರ ಉಳ್ಳವಳೇ ಹೊರತು ಸೊಸೆಗೆ ಆ ಅಧಿಕಾರವಿಲ್ಲ. ಅಧಿಕಾರವಿಲ್ಲದೆ ಆ ಕೆಲಸವನ್ನು ನಡೆಸಿದಳೆಂದು ಸೊಸೆಯನ್ನು ಗದರಿಸಿದೆನೇ ಹೊರತು ಆಕೆ ನಡೆಸಿದ ಕೆಲಸ ತಪ್ಪೆಂದಲ್ಲ'.

ಅದ್ವೈತಮತಾಚಾರ್ಯರ ಪ್ರವೃತ್ತಿ ಆ ಅತ್ತೆಯ ಪ್ರವೃತ್ತಿಗೆ ಹೋಲುವಂತಹದ್ದು. ಜಗತ್ತನ್ನು ಅಸತ್ ಎಂದೂ ಶೂನ್ಯವೇ ಪರತತ್ತ್ವ ಎಂದೂ ಸಾರಿದ ಬೌದ್ಧರನ್ನು ನಿರಾಕರಿಸಿದ ಅದ್ವೈತಮತದ ಆಚಾರ್ಯರು ತಾವಾದರೂ ಜಗತ್ತನ್ನು ಮಿಥ್ಯಾ ಎಂದು ಕರೆಯುವುದರ ಮೂಲಕ ಅಸತ್ ಎಂಬುದಾಗಿಯೂ, ಬ್ರಹ್ಮನನ್ನು ನಿರ್ಗುಣ, ನಿರಾಕಾರ ಎಂದು ಹೇಳುವ ಮೂಲಕ 'ಶೂನ್ಯ' ಎಂದೂ ಒಪ್ಪಿಕೊಂಡಂತಾಗಿದೆ. ಅತ್ತೆಯ ಉತ್ತರವೂ ಸೊಸೆ ಕೊಟ್ಟ ಉತ್ತರವೇ ಆಗಿದ್ದರೂ, ಆ ಉತ್ತರ ನೀಡಲು ತಾನೇ ಅಧಿಕಾರ ಉಳ್ಳವಳೆಂದು ಅತ್ತೆ ಭ್ರಮಿಸಿದಂತೆ, ಬೌದ್ಧರು ಹೇಳಿದ್ದನ್ನೇ ಅದ್ವೈತಿಗಳೂ ಹೇಳಿದ್ದರೂ 'ವೈದಿಕರು' ಎನಿಸಿರುವ ತಾವಷ್ಟೇ ಆ ರೀತಿಯ ಹೇಳಿಕೆಯನ್ನು ನೀಡಲು ಅರ್ಹರೆಂದು ಭ್ರಮಿಸಿಕೊಂಡಂತೆ ಇದೆ.

* * *

## 4. ಗೀತೆಯಲ್ಲಿ ಅದ್ವೈತ ಹೇಗೆ ಪ್ರತಿಪಾದ್ಯ?

ಇದೇನೂ ದ್ವೈತಿಗಳು ಮಾಡಿದ ಪ್ರಶ್ನೆ ಅಥವಾ ಆಕ್ಷೇಪ ಅಲ್ಲ. ಒಬ್ಬ ಸಾಮಾನ್ಯ ಜಿಜ್ಞಾಸು ಆಗಿದ್ದ ಅದ್ವೈತಿಯೇ ಎತ್ತಿದ್ದ ಆಕ್ಷೇಪ. 1982 ರಲ್ಲಿ ಪ್ರಯಾಗದಲ್ಲಿ ಮಧ್ವನವಮೀ ಪ್ರಯುಕ್ತ ವಿದ್ವತ್ಸಭೆ ನಡೆದಾಗ, ಆ ಸಭೆ ಸಮಾರಂಭವನ್ನೆಲ್ಲ ವ್ಯವಸ್ಥಾಪಿಸಿದ್ದ ಒಬ್ಬ ಐ.ಎ.ಎಸ್. ಅಧಿಕಾರಿ ಎತ್ತಿದ್ದ ಆಕ್ಷೇಪ ಇದು. ಆ ಅಧಿಕಾರಿಗೆ ಮಾಧ್ವಮತಕ್ಕೆ ಸೇರಿದ್ದ ಪಲಿಮಾರುಮಠದ ಶ್ರೀವಿದ್ಯಾಮಾನ್ಯತೀರ್ಥರು, ಪೇಜಾವರ ಮಠದ ಶ್ರೀವಿಶ್ವೇಶತೀರ್ಥರು ದ್ವೈತವಾದಿಗಳು; ಅವರ ಪ್ರಕಾರ ಗೀತೆಯಲ್ಲಿ ದ್ವೈತದ ಪ್ರತಿಪಾದನೆ ನಡೆದಿರುವುದು ಎಂಬುದು ಗೊತ್ತಿದ್ದಿರಲಿಲ್ಲ. ಸಾಮಾನ್ಯವಾಗಿ ಅದ್ವೈತವೇದಾಂತಿಗಳೇ ಇರುವುದರಿಂದ ಈ ಪೀಠಾಧಿಪತಿಗಳೂ ಅದ್ವೈತವಾದಿಗಳೇ ಎಂದು ಭ್ರಮಿಸಿ ಆ ಅಧಿಕಾರಿ ಹೀಗೆ ಆಕ್ಷೇಪಿಸಿದ್ದನು. **‘ನತ್ವೇವಾಹಂ ಜಾತು ನಾಽಸಂ ನ ತ್ವಂ ನೇಮೇ ಜನಾಧಿಪಾಃ ॥ ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥’** ಭಗವದ್ಗೀತೆಯ ಈ ಶ್ಲೋಕದಲ್ಲಿ ಶ್ರೀಕೃಷ್ಣನು– ‘ನಾನು ಈ ಹಿಂದೆ ಇರಲಿಲ್ಲ ಎಂದಿಲ್ಲ, ನೀನು (ಅರ್ಜುನ) ಇರಲಿಲ್ಲ ಎಂದಿಲ್ಲ. ರಣಾಂಗಣದಲ್ಲಿ ಯುದ್ಧಕ್ಕಾಗಿ ಸೇರಿದ ರಾಜರೂ ಇರಲಿಲ್ಲ ಎಂದಿಲ್ಲ. ಹಾಗೆಯೇ ಇನ್ನು ಮುಂದೆಯೂ ಎಂದೂ ನಾವೆಲ್ಲರೂ ಇಲ್ಲ ಎಂದಾಗುವುದಿಲ್ಲ’. ಎಂಬುದಾಗಿ ಜೀವೇಶ್ವರ ಭೇದ, ಹಾಗೂ ಜೀವಜೀವ ಭೇದ, ಇವುಗಳನ್ನು ಸ್ಪಷ್ಟವಾಗಿ ಪ್ರತಿಪಾದಿಸಿರುವನು. ಹೀಗಿರುವಾಗ ಗೀತೆ ಅದ್ವೈತವನ್ನು ಪ್ರತಿಪಾದಿಸುತ್ತಿರುವುದಾದರೂ ಹೇಗೆ? ಪ್ರಯಾಗದಲ್ಲಿಯ ಆ ಅಧಿಕಾರಿ ಗೀತೆಯ ಈ ಶ್ಲೋಕವನ್ನು ಉಲ್ಲೇಖಿಸಿಯೇ ಗೀತೆಯ ಅದ್ವೈತ ಪ್ರತಿಪಾದನೆಯ ಬಗ್ಗೆ ಆಕ್ಷೇಪಿಸಿದ್ದು.

ಹೀಗೆ ಯಾವುದೇ ಆಗ್ರಹವಿಲ್ಲದೆ ಕಾಣುವ ಯಾರಿಗಾದರೂ ಈ ಪದ್ಯದಲ್ಲಿ ದ್ವೈತದ ಪ್ರತಿಪಾದನೆ ನಡೆದಿದೆ ಎಂಬುದು ಎದ್ದು ಕಾಣಿಸಬಲ್ಲದು.

* * *

## 5. ಯಾವುದು ಮೊದಲು

‘ಸಾಮಾನ್ಯವಾಗಿ ದ್ವೈತ ಮೊದಲ ಹಂತ, ಅದ್ವೈತ ಕೊನೆಯ ಹಂತ ಎನ್ನುವ ವಾಡಿಕೆ ಇದೆ. ಆದರೆ ನಿಜವಾಗಿ ನೋಡಿದರೆ ಅದ್ವೈತ ಮೊದಲ

ಹಂತ, ದ್ವೈತ ಕೊನೆಯ ಹಂತವಾಗಿದೆ. ದೂರದಿಂದ ನೋಡಿದಾಗ ಒಂದೇ ಮರ ಎನಿಸುತ್ತದೆ. ಸ್ವಲ್ಪ ಹತ್ತಿರ ಹೋದಾಗ ಒಂದಲ್ಲ ಅನೇಕ ಮರಗಳಿವೆ ಎನಿಸುತ್ತದೆ. ಇನ್ನೂ ಹತ್ತಿರ ಹೋದಾಗ ಇದು ಮಾವು, ಅದು ಬೇವು ಎನ್ನುವ ವ್ಯತ್ಯಾಸ ತಿಳಿಯುತ್ತದೆ. ಅದರಂತೆ ಅವಿಚಾರ ದೆಸೆಯಲ್ಲಿ ನಾವೆಲ್ಲರೂ ಒಂದೇ ಎನಿಸುತ್ತದೆ. ಪರಸ್ಪರ ಮೂಲಭೂತ ಸ್ವಭಾವ ಭೇದವನ್ನು ಗಮನಿಸಿದಾಗ ಒಂದಲ್ಲ, ಬೇರೆ ಬೇರೆ ಎಂದು ತಿಳಿಯುತ್ತದೆ'.

* * *

## 6. ಒಂದು ಸುಳ್ಳಾಗಬೇಕಾದರೆ ಎರಡು ಸತ್ಯ ಬೇಕು

**'ನ ಚ ಅಭೇದೇ ಕಶ್ಚಿದಾಗಮಃ ಸಂತಿ ಚ ಭೇದೇ ಸರ್ವಾಗಮಾಃ'** – ಅಭೇದವನ್ನು ಹೇಳುವ ಒಂದೂ ವಾಕ್ಯವಿಲ್ಲ. 'ಎಲ್ಲ ವಾಕ್ಯಗಳೂ ಭೇದವನ್ನೇ ಹೇಳುತ್ತವೆ' ಎಂದು ಶ್ರೀಮಧ್ವಾಚಾರ್ಯರು ಆತ್ಮವಿಶ್ವಾಸದಿಂದ ದೃಢವಾಗಿ ವಿಷ್ಣುತತ್ವವಿನಿರ್ಣಯದಲ್ಲಿ ಹೇಳಿದ್ದಾರೆ. ಜಗತ್ತು ಅಸತ್ಯ, ಸುಳ್ಳು ಎಂದು ಹೇಳಬೇಕಾದರೆ ಎರಡು ಸತ್ಯವಾದ ಜಗತ್ತನ್ನು ಒಪ್ಪಿಕೊಳ್ಳಬೇಕಾಗುವುದು. ಹಾವನ್ನೇ ನೋಡದ ಮಗುವಿಗೆ ಹಗ್ಗವನ್ನು ನೋಡಿ ಹಾವು ಎಂಬ ಭ್ರಾಂತಿ ಬರುವುದಿಲ್ಲ. ಅದರಂತೆ ಹಗ್ಗವನ್ನೇ ಕಂಡು ಹಾವೆಂಬ ಭ್ರಮೆ ಬರುತ್ತದೆಯೇ ಹೊರತು ಕಲ್ಲು ಬಂಡೆಯನ್ನು ನೋಡಿ ಹಾಗೆ ಭ್ರಮೆ ಬರುವುದಿಲ್ಲ. ಶುದ್ಧ ಬ್ರಹ್ಮ ನಿರ್ಗುಣ ನಿರಾಕಾರನಾದುದರಿಂದ ಅವನನ್ನು ನೋಡಿ ಪ್ರಪಂಚದ ಭ್ರಾಂತಿ ಬರಲಾರದು. ಆದ್ದರಿಂದ ಪ್ರಪಂಚಕ್ಕೆ ಸದೃಶವಾದ ಒಂದು ಸತ್ಯವಸ್ತುವನ್ನು ಒಪ್ಪಿಕೊಳ್ಳಬೇಕು. ಅಂತಹ ಸತ್ಯವಸ್ತುವನ್ನು ನೋಡಿ ಪ್ರಪಂಚವೆಂದು ಭ್ರಮಿಸಬೇಕಾದರೆ ಮೊದಲು ಸತ್ಯವಾದ ಅಂತಹ ಇನ್ನೊಂದು ಪ್ರಪಂಚದ ಜ್ಞಾನಬೇಕು. ಹೀಗೆ ಒಂದು ಸತ್ಯವನ್ನು ನಿರಾಕರಿಸಬೇಕಾದರೆ ಎರಡು ಸತ್ಯಗಳನ್ನು ಒಪ್ಪಿಕೊಳ್ಳಬೇಕು. ಹೀಗೆ ಯುಕ್ತಿಗಳಿಂದ ಪ್ರಮೇಯಗಳನ್ನು ದೃಢಪಡಿಸುವ ಜೊತೆಗೆ ಪ್ರಮಾಣಗಳ ಸ್ವರೂಪವಿವೇಚನೆಯನ್ನು ಮಾಡುವ ಗ್ರಂಥ ವಿಷ್ಣುತತ್ವವಿನಿರ್ಣಯ.

* * * *

# ವಿಶ್ವೇಶತೀರ್ಥರು ನಡೆಸಿಕೊಟ್ಟ ಅಪೂರ್ವ ಸಂವಾದಗಳು



ಪದ್ಮ-ಚಕ್ರ-ಗದಾ-ಶಂಖಧಾರಿಯಾದ **'ಯಜ್ಞಾ'**ಪತಿ **'ಪದ್ಮನಾಭ'**



## ಸಚ್ಛಾಸ್ತ್ರಪಾಠ ಪ್ರವಚನದ ದೀಕ್ಷೆ

ನಮ್ಮ ಗುರುಗಳಾದ ಶ್ರೀ ವಿದ್ಯಾಮಾನ್ಯತೀರ್ಥರು ನಮಗೆ ವಿದ್ಯೆಯನ್ನು ಉಪದೇಶಿಸಿ ಸಚ್ಛಾಸ್ತ್ರ ಪಾಠಪ್ರವಚನದ ದೀಕ್ಷೆಯನ್ನು ತೊಡುವಂತೆ ಮಾಡಿದ್ದರು. 'ಯಾವುದೇ ಸಂದರ್ಭದಲ್ಲಿ ಸಚ್ಛಾಸ್ತ್ರದ ಪಾಠಪ್ರವಚನವನ್ನು ನಡೆಸದೆ ಇರಬಾರದು' ಎಂದು ಅವರು ಅನುಗ್ರಹಪೂರ್ವಕವಾಗಿ ನೀಡಿದ ಆ ದೀಕ್ಷೆಯಿಂದಾಗಿಯೇ ನಾವು ಅನೇಕ ಬಾರಿ ಸುಧಾ ಪ್ರವಚನ ಮಂಗಲೋತ್ಸವವನ್ನು ನಡೆಸುವಂತಾಗಿದೆ.

– ಶ್ರೀ ವಿಶ್ವೇಶತೀರ್ಥಶ್ರೀಪಾದರು

## 1. ಜೀವೇಶ್ವರಾಭೇದ-ಒಂದು ಸಂವಾದ (ಶ್ರೀವಿದ್ಯಾಮಾನ್ಯತೀರ್ಥರು ಮತ್ತು ಶ್ರೀ ವಿಶ್ವೇಶತೀರ್ಥರುಗಳಿಂದ)

ಜೀವ ಮತ್ತು ಈಶ ಪರಸ್ಪರ ಅತ್ಯಂತ ಭಿನ್ನರು. ಅವರಿಬ್ಬರೂ ಎಂದೂ ಒಂದಾಗಲಾರರು. ಜೀವರೆನಿಸಿರುವ ನಮ್ಮಲ್ಲಿ ದುಃಖ, ರಾಗ, ದ್ವೇಷ ಮೊದಲಾದ ಗುಣಗಳು ಪ್ರತ್ಯಕ್ಷ ಸಿದ್ಧವಾಗಿವೆ. ಆದರೆ ಪರಮಾತ್ಮನಲ್ಲಿ ಇವಕ್ಕೆ ತೀರಾತೀರಾ ವಿರುದ್ಧವಾದ ಗುಣಗಳಿವೆ. ನಾವು ಅಸ್ವತಂತ್ರರಾದರೆ ಅವನು ಸ್ವತಂತ್ರ. ನಾವು ದೋಷವುಳ್ಳವರಾದರೆ ಆತ ನಿರ್ದೋಷಿ. ನಾವು ಸಾಮಾನ್ಯ ಶಕ್ತಿವಂತರಾದರೆ ಅವನು ಜಗತ್ಸೃಷ್ಟಿಯಂತಹಾ ಅದ್ಭುತ ಸಾಮರ್ಥ್ಯವನ್ನು ಪಡೆದವನು. ಆದ್ದರಿಂದ ಈಶ್ವರ ಜೀವನಿಗಿಂತ ಅತ್ಯಂತ ಭಿನ್ನ.

ಜೀವೇಶ್ವರರಿಗೆ ಅಭೇದವನ್ನು ಹೇಳಬೇಕಾದರೆ ಅವರಿಬ್ಬರಲ್ಲಿರುವ ಗುಣಗಳು ಅಸ್ವಾಭಾವಿಕ, ಸುಳ್ಳು ಎನ್ನಬೇಕು. ಆದರೆ ಜೀವನಲ್ಲಿರುವ ಗುಣದೋಷಗಳೆಲ್ಲವೂ ನಮ್ಮ ಪಕ್ಷಕ್ಕೆ ಗೋಚರವಾಗಿವೆ. ಪ್ರತ್ಯಕ್ಷದಂತಹಾ ಪ್ರಬಲ ಪ್ರಮಾಣದಿಂದ ಸಿದ್ಧವಾದ ವಸ್ತುವನ್ನು ಸುಳ್ಳೆನ್ನಬೇಕಾದರೆ ಬಲವಾದ ಬಾಧಕವಿರಬೇಕು. ಆದರೆ ಅಂತಹ ಬಾಧಕ ಯಾವುದೂ ಇಲ್ಲವಾದ್ದರಿಂದ ದುಃಖಾದಿಗಳನ್ನು ಸುಳ್ಳೆನ್ನಲಾಗದು.

ಅಲ್ಲದೆ ಜೀವೇಶ್ವರರಲ್ಲಿರುವ ಗುಣಗಳೆಲ್ಲವೂ ಸುಳ್ಳಾಗಬೇಕಾದರೆ ಪ್ರಪಂಚವೂ ಸುಳ್ಳಾಗಬೇಕು. ಪ್ರಪಂಚವು ಸತ್ಯವಾಗಿದ್ದು 'ಪ್ರಪಂಚ ಕರ್ತೃತ್ವ' ಎಂಬ ಈಶನ ಗುಣವು ಸುಳ್ಳಾಗಲು ಸಾಧ್ಯವಿಲ್ಲ. ಹೀಗೆ ಜೀವೇಶ್ವರರ ಅಭೇದವನ್ನು ಒಪ್ಪಬೇಕಾದರೆ ಪ್ರತ್ಯಕ್ಷಸಿದ್ಧವಾದ ಪ್ರಪಂಚದ ಅಸ್ತಿತ್ವವನ್ನೇ ಅಲ್ಲಗಳೆಯಬೇಕಾಗುತ್ತದೆ.

ವೇದಾದಿ ಶಾಸ್ತ್ರಗಳಲ್ಲಿ ಅಭೇದಕ್ಕೆ ಪುಷ್ಟಿ ಕೊಡುವ ವಾಕ್ಯಗಳು ಕೆಲವು ಮಾತ್ರ. ಆದರೆ ಭೇದವನ್ನು ಸಾಧಿಸಲು ಬಹಳಷ್ಟು ವಾಕ್ಯಗಳು ಆಧಾರವಾಗಿವೆ. ಆದ್ದರಿಂದ ಕೆಲವು ವಾಕ್ಯಗಳಲ್ಲಿ ಕಾಣುವ ಅಭೇದ ವಾದಕ್ಕಿಂತಲೂ ಬಹುಪ್ರಮಾಣ ಸಿದ್ಧವಾದ ಭೇದ ವಾದವೇ ಶಾಸ್ತ್ರಸಮ್ಮತ.

ಶ್ರುತಿಗೆ ಅಭೇದವು ಸಮ್ಮತವಾದರೆ ಪರಮಾತ್ಮನಲ್ಲಿ ಗುಣಗಳೆಲ್ಲವೂ ಅಸ್ವಾಭಾವಿಕಗಳಾಗಬೇಕು. ಆದ್ದರಿಂದ ಅಂತಹ ಗುಣಗಳನ್ನು ಹೇಳುವ

ವೇದವೂ ಅತತ್ತ್ವಾವೇದಕ-ಅಪ್ರಮಾಣವಾದೀತು. ಹೀಗೆ ಪರಮ ಪ್ರಮಾಣವೆನಿಸಿರುವ ಶ್ರುತಿಯಲ್ಲಿ ಅಭೇದ ಸಾಧಕವಾದ ಭಾಗ ತತ್ತ್ವಾವೇದಕ, ಉಳಿದ ಭಾಗ ಅತತ್ತ್ವಾವೇದಕ ಎಂಬ ವಿಭಾಗವನ್ನು ಮಾಡುವುದು, ದುರ್ಬಲವಾದ ಯುಕ್ತಿಯಿಂದ ಪ್ರಬಲವಾದ ವೇದದ ವಿರೋಧ ಪರಿಹಾರಕ್ಕಾಗಿ ಅದನ್ನು ಅತತ್ತ್ವಾವೇದಕವೆನ್ನುವುದು, ಅದಕ್ಕೆ ಅಪಚಾರವೆಸಗಿದಂತೆ. ಆದ್ದರಿಂದ ಜೀವೇಶ್ವರರಿಗೆ ಭೇದವೇ ಸರ್ವಶಾಸ್ತ್ರ ಸಮ್ಮತ.

## ಶ್ರೀ ವಿದ್ಯಾಮಾನ್ಯತೀರ್ಥರು:

ಜೀವ ಈಶ್ವರನಿಂದ ಅಭಿನ್ನ. ವಿರುದ್ಧ ಧರ್ಮಗಳಿದ್ದರೂ ಜೀವೇಶ್ವರರಿಗೆ ಅಭೇದವಿರುವುದು ಸಾಧ್ಯ. ಭೇದವಾದಿಗಳು **'ಅಣೋರಣೀಯಾನ್ ಮಹತೋ ಮಹೀಯಾನ್'** ಎಂಬ ಶ್ರುತಿ ಪ್ರಮಾಣದಿಂದ ಅಣುತ್ವ, ಮಹತ್ವ ಎಂಬ ಎರಡು ಧರ್ಮಗಳು ಈಶ್ವರನಲ್ಲಿವೆಯೆನ್ನುತ್ತಾರೆ. ಇವೆರಡೂ ವಿರುದ್ಧವಾದ ಧರ್ಮಗಳು. ಯಾವ ವಸ್ತುವು ಅಣುವಾಗಿದೆಯೋ ಅದು ಮಹತ್ತಾಗಿರುವುದು ಅಸಾಧ್ಯ. ಈ ರೀತಿಯ ವಿರುದ್ಧವಾದ ಎರಡು ಧರ್ಮಗಳು ಒಂದೇ ಚೇತನದಲ್ಲಿ ಇರಬಹುದಾದರೆ ದೋಷಾದೋಷ ಭಾವ, ಪೂರ್ಣತ್ವ-ಅಪೂರ್ಣತ್ವಗಳಂತಹಾ ವಿರುದ್ಧ ಧರ್ಮಗಳು ಒಬ್ಬನಲ್ಲೇ ಏಕೆ ಇರಬಾರದು? ಆದ್ದರಿಂದ ಜೀವೇಶ್ವರಾಭೇದವನ್ನು ಹೇಳಬೇಕಾದರೆ ಅವರಲ್ಲಿರುವ ವಿರುದ್ಧವಾದ ಧರ್ಮಗಳನ್ನು ಸುಳ್ಳೆನ್ನಲೇಬೇಕೆಂದಿಲ್ಲ.

ಜೀವನಲ್ಲಿ ದುಃಖ ಮೊದಲಾದ ದೋಷಗಳು ಪ್ರತ್ಯಕ್ಷ ಸಿದ್ಧವಾದ್ದರಿಂದ ಅವು ಸುಳ್ಳೆನ್ನಬಾರದು ಎಂದರು ಶ್ರೀಗಳವರು. ಆದರೆ ರಾಮಕೃಷ್ಣಾದಿ ಅವತಾರ ರೂಪಗಳಲ್ಲಿ ಪರಮಾತ್ಮನಿಗೆ ಅನೇಕ ದೋಷಗಳು ಜನರಿಗೆ ಪ್ರತ್ಯಕ್ಷ ಸಿದ್ಧವಾಗಿವೆ. ಆದರೂ ಅದು ಸತ್ಯವೆಂದು ಭೇದವಾದಿಗಳು ಒಪ್ಪಲಾರರು. ಹೀಗೆ ಪ್ರತ್ಯಕ್ಷ ಸಿದ್ಧವಾದ ದೋಷಗಳನ್ನು ಪರಮಾತ್ಮನಲ್ಲಿ ಅಲ್ಲಗಳೆಯುವಂತೆ ಜೀವನಲ್ಲೂ ಅವನ್ನು ಅಲ್ಲಗಳೆಯುವುದರಲ್ಲಿ ತಪ್ಪೇನು?

ಭೇದಕ್ಕೆ ಸಾಧಕವಾಗಿ ಅನೇಕ ಪ್ರಮಾಣಗಳಿವೆಯಾದ್ದರಿಂದ ಭೇದವಾದವೇ ಸರಿ ಎಂಬ ಆಗ್ರಹವೂ ಉಚಿತವಲ್ಲ. ಅನೇಕ ಪ್ರಮಾಣಗಳಿವೆ

ಎನ್ನುವುದರಿಂದಲೇ ತತ್ತ್ವವು ಸರಿಯೆನಿಸುವುದಾದರೆ ಆಸ್ತಿಕ ಸಮಾಜದಲ್ಲಿ ಅನೇಕರು ಅದ್ವೈತ ವಾದವನ್ನು ಒಪ್ಪಿರುವುದರಿಂದ ಅದೇ ಸತ್ಯವಾಗಬೇಕಾದೀತು. ದ್ವೈತವಾದಿಗಳ ಸಂಖ್ಯೆ ಕಡಿಮೆ ಇರುವುದರಿಂದ ದ್ವೈತಸಿದ್ಧಾಂತ ಅಪ್ರಾಮಾಣಿಕವಾಗಲಿ. ಶ್ರುತಿಗೆ ಯುಕ್ತಿಯಿಂದ ವಿರೋಧವನ್ನು ಹೇಳುವುದು ಅದ್ವೈತವಾದದಲ್ಲೇ ಹೊಸದಲ್ಲ. **'ಮೃದಬ್ರವೀತ್'** (ಮಣ್ಣು ಮಾತಾಡಿತು) ಎಂಬ ವೇದವಾಕ್ಯ ಯುಕ್ತಿ ವಿರುದ್ಧ ಮಣ್ಣು ಜಡವಾದುದರಿಂದ ಅದು ಮಾತನಾಡಲಾರದು. ಈ ಯುಕ್ತಿಯಿಂದ ವಿರೋಧ ಬರುವುದರಿಂದ ವೇದದಲ್ಲಿರುವ **'ಮೃತ್'** ಎಂಬ ಪದಕ್ಕೆ ಮಣ್ಣಿಗೆ ಅಭಿಮಾನಿಯಾದ ದೇವತೆ ಎಂಬ ಅರ್ಥವನ್ನು ವೈದಿಕರೆಲ್ಲರೂ ಒಪ್ಪುವರು. ಹೀಗೆಯೇ ಜೀವೇಶ್ವರಾಭೇದ ಯುಕ್ತಿಗೆ ವಿರುದ್ಧವಾದ್ದರಿಂದ ಅದರಿಂದ ಗುಣಪ್ರತಿಪಾದಕ ವಾಕ್ಯಗಳಿಗೆ ವಿರೋಧವನ್ನು ಹೇಳುವುದು ಅನುಚಿತವಲ್ಲ.

ಇನ್ನು ವೇದದಲ್ಲಿ ತತ್ತ್ವಾವೇದಕ ಅತತ್ತ್ವಾವೇದಕ ವಿಭಾಗ ಅಸಾಧು ಎಂದು ಆಕ್ಷೇಪ. ಆದರೆ ಈ ರೀತಿಯ ವಿಭಾಗವನ್ನು ಭೇದವಾದಿಗಳೂ ರಾಮಾಯಣ, ಮಹಾಭಾರತ ಮುಂತಾದ ಗ್ರಂಥಗಳಲ್ಲಿ ಒಪ್ಪುವರು. ರಾಮಕೃಷ್ಣಾದಿಗಳಿಗೆ ದೋಷವನ್ನು ಹೇಳುವ ಪುರಾಣದ ಭಾಗ ಅಪ್ರಮಾಣ. ಉತ್ಕರ್ಷವನ್ನು ಹೇಳುವ ಭಾಗ ಪ್ರಮಾಣ. ಹೀಗೆ ಪ್ರಮಾಣವೆನಿಸಿರುವ ಗ್ರಂಥದಲ್ಲೂ ಅಪ್ರಮಾಣವಾದ ಭಾಗವಿರಬಹುದು. ಆದ್ದರಿಂದ **'ತತ್ತ್ವಮಸಿ'** ಮೊದಲಾದ ವಾಕ್ಯಗಳಿಂದ ಅಭೇದವನ್ನು ಸಾಧಿಸಲು ಯಾವ ಬಾಧಕವೂ ಇಲ್ಲ.

**ಶ್ರೀ ವಿಶ್ವೇಶತೀರ್ಥರು:**

ಪರಮಾತ್ಮನಲ್ಲಿರುವ ಅಣುತ್ವ, ಮಹತ್ತ್ವವೆಂಬ ವಿರುದ್ಧ ಧರ್ಮಗಳನ್ನು ಅವನಲ್ಲಿರುವ ಅಚಿಂತ್ಯ ಶಕ್ತಿಯಿಂದ ಹೊಂದಿಸಬಹುದು. ಆದರೆ ಅವನಲ್ಲಿ ಜೀವನಲ್ಲಿರುವ ಅಜ್ಞಾನ, ದುಃಖ ಮುಂತಾದ ಧರ್ಮಗಳನ್ನು ಒಪ್ಪಿದರೆ ವಿರೋಧವನ್ನು ಪರಿಹರಿಸಬಲ್ಲ ಆ ಅಚಿಂತ್ಯ ಶಕ್ತಿಯೇ ಅವನಲ್ಲಿ ಇಲ್ಲದಾಗುವುದು. ದೋಷಪೂರ್ಣನಾದ ವ್ಯಕ್ತಿಯಲ್ಲಿ ಅಂತಹ ಶಕ್ತಿ ಇರಲು ಸಾಧ್ಯವಿಲ್ಲ. ಆದ್ದರಿಂದ ಒಬ್ಬನೇ ಆತ್ಮನಲ್ಲಿ ವಿರುದ್ಧವಾದರೂ ಪೂರ್ಣತ್ವ,

ಅಪೂರ್ಣತ್ವ ಮುಂತಾದ ಧರ್ಮಗಳನ್ನು ಏಕೆ ಒಪ್ಪಬಾರದು. ಎಂಬ ಪ್ರಶ್ನೆ ಸಮಂಜಸವಾಗಲಾರದು.

ರಾಮಕೃಷ್ಣಾದಿಗಳಲ್ಲಿ ದೋಷವಿಲ್ಲವೆಂಬ ತತ್ವವು ಅರ್ಜುನ, ಭೀಷ್ಮ ಮೊದಲಾದವರ ಪ್ರತ್ಯಕ್ಷದಿಂದಲೂ ಸಿದ್ಧವಾಗಿದೆ. ಅವರ ದಿವ್ಯದೃಷ್ಟಿಯಿಂದ ರಾಮಾದ್ಯವತಾರ ರೂಪಗಳಲ್ಲಿ ದೋಷವಿಲ್ಲ ಎಂದು ಸಿದ್ಧವಾದುದರಿಂದ ಅಜ್ಞದೃಷ್ಟಿಗೆ ಕಾಣುವ ದೋಷಗಳು ಅತಾತ್ವಿಕ ಎಂದು ಹೇಳಬಹುದು. ಆದರೆ ನಮ್ಮಲ್ಲಿರುವ ಗುಣಗಳು, ಸುಳ್ಳೆಂದು ಎಂದೂ ಯಾರಿಗೂ ಪ್ರತ್ಯಕ್ಷವಿಲ್ಲ. ಅಲ್ಲದೆ ಸುಖಾದಿ ಆತ್ಮಧರ್ಮಗಳನ್ನು ಅನುಭವವಿಲ್ಲದೆ ಅದು ಸುಳ್ಳೆಂದು ಹೇಳುವಂತಿಲ್ಲ. ಅವುಗಳ ಅನುಭವವಿದ್ದರೆ ಸಾಕ್ಷಿಯ ಅನುಭವದಿಂದ ಸಿದ್ಧವಾದ ಅವು ಸತ್ಯವೇ ಆಯಿತು. ಆದ್ದರಿಂದ ಸುಖಾದಿಗಳು ಸುಳ್ಳು-ಅತಾತ್ವಿಕ ಎಂಬ ಜ್ಞಾನವೇ ಬರಲು ಸಾಧ್ಯವಿಲ್ಲ.

ಹೀಗೆ ಪ್ರತ್ಯಕ್ಷಕ್ಕೆ ಪ್ರಬಲವಾದ ಪ್ರತ್ಯಕ್ಷವೇ ಬಾಧಕವಾಗಬಲ್ಲುದು. ಮಹಾತ್ಮರ ಪ್ರತ್ಯಕ್ಷ ವಿರುದ್ಧವಾದುದರಿಂದ ರಾಮಾದಿಗಳಲ್ಲಿ ನಮ್ಮ ದೃಷ್ಟಿಗೆ ಕಾಣುವ ದೋಷಾದಿಗಳು ಅತಾತ್ವಿಕ. ಜೀವನಲ್ಲಿರುವ ದುಃಖಾದಿ ಪ್ರತ್ಯಕ್ಷಕ್ಕೆ ಬಾಧಕವಾಗಿ ಅದು ಅತಾತ್ವಿಕವೆಂದು ಸಾಧಿಸಬಲ್ಲ ಪ್ರತ್ಯಕ್ಷವಿಲ್ಲವಾದ್ದರಿಂದ ಅದು ಸತ್ಯವೇ.

ಬಹು ಸಮ್ಮತಿಯಿಂದ ಚುನಾವಣೆಯಲ್ಲಿ ಗೆಲ್ಲಿಸಬಹುದೇ ಹೊರತು ಸತ್ಯವನ್ನು ಸುಳ್ಳು ಮಾಡಲಾಗದು. ಜಗತ್ತೆಲ್ಲಾ ಘೋಷಿಸಿದರೂ ರಾತ್ರಿ ಎಂದೂ ಹಗಲಾಗದು. ವಸ್ತುವಿನ ಸತ್ಯಾಸತ್ಯತೆಯನ್ನು ಪ್ರಮಾಣವಷ್ಟೇ ಸಾಧಿಸಬಲ್ಲುದು. ಆದ್ದರಿಂದ ಅದ್ವೈತ ತತ್ವವನ್ನು ಅಂಗೀಕರಿಸುವವರ ಸಂಖ್ಯೆ ಎಷ್ಟಿದ್ದರೂ ಅದಕ್ಕೆ ಪ್ರಮಾಣದ ಆಧಾರವಿಲ್ಲವಾದುದರಿಂದ ಅದು ಸತ್ಯವಾಗಲಾರದು.

ರಾಮಾಯಣಾದಿಗಳು ಪೌರುಷೇಯ. ಪೌರುಷೇಯ ಗ್ರಂಥವು ಪುರುಷನಲ್ಲಿರುವ ದೋಷದಿಂದಾಗಿ ಕೆಲವೆಡೆ ಅಪ್ರಮಾಣವಾಗಬಹುದು. ಆದರೆ ವೇದ ಅಪೌರುಷೇಯ. ಅದರಲ್ಲಿ ದೋಷ ಅಸಂಭಾವಿತ. ಆದುದರಿಂದ ವೇದದಲ್ಲಿ ತತ್ವಾವೇದಕ ಅತತ್ವಾವೇದಕ ಎಂಬ ವಿಭಾಗ ಸರಿಯಲ್ಲ.

ಅದ್ವೈತವಾದವನ್ನು ಸರಿಯಾಗಿ ವಿಮರ್ಶಿಸಿದರೆ ವೇದದಲ್ಲಿ ತತ್ವಾವೇದಕವಾದ ಭಾಗವೇ ಇಲ್ಲ. ಎಲ್ಲಾ ವೇದಗಳೂ ಅತತ್ವಾವೇದಕಗಳೇ. ಅವರಲ್ಲಿ ತತ್ವ–ಸತ್ಯವೆಂದರೆ ನಿರ್ಗುಣ ಬ್ರಹ್ಮ. ಅದು ಯಾವ ಪ್ರಮಾಣದಿಂದಲೂ ತಿಳಿಯಲ್ಪಡುವ ವಸ್ತುವಲ್ಲ. ವೇದಗಳು ಪ್ರತಿಪಾದಿಸುತ್ತಿರುವ ಬ್ರಹ್ಮ ಸಗುಣ ಬ್ರಹ್ಮ. ಅದು ಸತ್ಯವಲ್ಲ. ಹೀಗೆ ವೇದಗಳು ಅತತ್ವವಾದ ಸಗುಣ ಬ್ರಹ್ಮನನ್ನೇ ಹೇಳುತ್ತಿವೆಯಾದ್ದರಿಂದ ಸಮಸ್ತ ವೇದರಾಶಿಯೇ ಅತತ್ವಾವೇದಕ. ಆದ್ದರಿಂದ ದ್ವೈತಸಿದ್ಧಾಂತಾನುಸಾರ ವೇದದಲ್ಲಿ ಒಂದು ವಾಕ್ಯವೂ ಅಸತ್ಯವಲ್ಲವಾದರೆ ಅದ್ವೈತ ಸಿದ್ಧಾಂತಾನುಸಾರ ಒಂದು ವಾಕ್ಯವೂ ಸತ್ಯವಲ್ಲ. ಪ್ರತಿಪಾದ್ಯವೆಲ್ಲವೂ ಸುಳ್ಳು – ಮಿಥ್ಯಾ.

ಹೀಗೆ ಜೀವೇಶ್ವರರಿಗೆ ಐಕ್ಯವಿದೆಯಾದರೆ ಪರಮ ಪ್ರಮಾಣವೆನಿಸಿರುವ ಪ್ರತ್ಯಕ್ಷ, ವೇದಾದ್ಯಾಗಮಗಳು ಅಪ್ರಮಾಣಗಳಾಗಬೇಕಾದೀತು. ಆದ್ದರಿಂದ ಈ ಪ್ರಮಾಣಗಳಿಗೆ ಅವಿರುದ್ಧವಾದ ದ್ವೈತವೇ ಶಾಸ್ತ್ರಸಮ್ಮತ.

* * *

## 2.ವಿಶ್ವದಲ್ಲಿ ವಿಶ್ವೇಶನ ಅದ್ಭುತ ಸಂಯೋಜನೆ–ಒಂದು ಸಂವಾದ

### (ಶ್ರೀವಿದ್ಯಾಮಾನ್ಯತೀರ್ಥರು ಮತ್ತು ಶ್ರೀ ವಿಶ್ವೇಶತೀರ್ಥರುಗಳಿಂದ)

ಪಲಿಮಾರು ಶ್ರೀಗಳವರು ನಾಸ್ತಿಕರ ಪ್ರತಿನಿಧಿಯಾಗಿ ತಮ್ಮ ವಾದವನ್ನು ಹೀಗೆ ಮಂಡಿಸಿದರು –

**ಪ. ಶ್ರೀಗಳು:–** ಎಲ್ಲರನ್ನೂ ಸಮ್ಮೇಳನಕ್ಕೆ ಕರೆದಿದ್ದಾರೆ. ಎಲ್ಲರಿಗೂ ಗೌರವ ಕೊಟ್ಟಿದ್ದಾರೆ. ನನಗೆ ಬೇಜಾರು ಮತ್ತೇನಿಲ್ಲ ಪೇಜಾವರ ಸ್ವಾಮಿಗಳ ಬಗ್ಗೆ. ನಮ್ಮನ್ನು ಮಾತ್ರ ಯಾಕೆ ಕೈ ಬಿಟ್ರಿ? ಅಂತಷ್ಟೇ ನನ್ನ ಪ್ರಶ್ನೆ. ನಾಡಗೀತೆಯಲ್ಲಿ ಮಧ್ವರ ಹೆಸರು ಸೇರಬೇಕಲ್ಲ. ಅದು ಯಾರಿಂದಲೂ ಸಾಧ್ಯವಿಲ್ಲ. ಆಗುವುದಿದ್ದರೆ ನಮ್ಮವರು ಬರಬೇಕು. ಆಗ ಮಾತ್ರ ಸಾಧ್ಯ.

ಇಷ್ಟು ದೊಡ್ಡ ಸಮ್ಮೇಳನ– ಎಲ್ಲರಿಗೂ ಸ್ವಾಗತ, ಎಲ್ಲರಿಗೂ ಸತ್ಕಾರ ನಡೆದಿದೆ. ಇಲ್ಲಿಗೆ ನಾಸ್ತಿಕ್ಯ ಪ್ರತಿನಿಧಿಯಾಗಿ ನಾವು ಬಂದಿದ್ದೇವೆ. ನಮ್ಮನ್ನು ಮಾತ್ರ ಕೈಬಿಟ್ಟಿದ್ದಾರೆ. ತುಂಬ ಬೇಜಾರಾಗಿದೆ. ಹೀಗೆ ನೊಂದುಕೊಂಡು ನಮ್ಮ ವಾದವನ್ನು ಮಂಡಿಸ್ತೇವೆ. ನಮ್ಮ ಸಂಖ್ಯೆ ಹಿಂದೂ ಇತರರಲ್ಲಿ

ಮಾತ್ರವಲ್ಲ. ಹಿಂದೂಗಳಲ್ಲಿ, ಮಾಧ್ವರಲ್ಲಿ, ಬ್ರಾಹ್ಮಣರಲ್ಲಿ, ಸಹ ನಮ್ಮ ನಾಸ್ತಿಕ್ಯ ಪ್ರತಿನಿಧಿಗಳು ಇದ್ದಾರೆ. ನಾವು ಒಂದು ಘೋಷಣೆ ಮಾಡಿದರೆ ಮಧ್ವಾಚಾರ್ಯರ ಹೆಸರು ನಾಳೆ ಬೆಳಿಗ್ಗೆ ನಾಡಗೀತೆಯಲ್ಲಿ ಬಂದುಬಿಡ್ತದೆ. ಈ ತತ್ವಜ್ಞಾನ ಸಮ್ಮೇಳನದಲ್ಲಿ ನಮಗೆ ಅವಕಾಶ ಕೊಡದಿದ್ರೂ ಮುಂದಿನ ಸಮ್ಮೇಳನದಲ್ಲಿಯಾದರೂ ನಮಗೆ ಸನ್ಮಾನ ಕೊಟ್ಟರೆ ನಾವು ಆರಾಮಾಗಿರುತ್ತೇವೆ. ಇವರನ್ನೂ ಆರಾಮವಾಗಿರಲು ಬಿಡ್ತೇವೆ.

ನಮ್ಮ ತತ್ವ ಎಷ್ಟು ಸುಂದರವಾಗಿದೆ. ಎಲ್ಲರ ಅನುಭವಕ್ಕೆ ಎಟುಕುವಂಥಾದ್ದು, ಇದು ಅನುಭವಕ್ಕೆ ಮೀರಿದಂತಹ ಸಿದ್ಧಾಂತವಲ್ಲ. ಮನಸ್ಸಿಗೆ ಯಾವುದು ಕಾಣ್ತದೆ. ನಾಲ್ಕು ಜನರು ಯಾವುದನ್ನು ಒಪ್ತಾರೆ. ಅದನ್ನು ನಾವು ವಾದಿಸುವವರು. ಪ್ರಪಂಚ ನಡೆಯಲು ಏನು ಬೇಕು? ಪಂಚಭೂತಗಳಿದ್ದರೆ ಸಾಕು. ಈ ಐದು ಸೇರಿದರೆ ಇಡೀ ಜಗಚ್ಚಕ್ರ ನಡೆಯಲು ಸಾಧ್ಯ.

ಸುಮ್ಮನೇ ದೇವರು ದೇವರು ಅಂತ ಹಾರಾಡ್ತಾರೆ. ದೇವರು ಎಲ್ಲಿದ್ದಾರೆ. ಯಾರಿಗಾದರೂ ಗೊತ್ತುಂಟ? ಯಾರಾದರೂ ಕಂಡಿದ್ದಾರಾ? ಇವರು ಹೇಳುವುದೇನು? ನಮ್ಮ ಅಜ್ಜ ನೋಡಿದ್ರು. ಅವರನ್ನು ಕೇಳಿದರೆ ಅವರಜ್ಜ ನೋಡಿದ್ರು. ಯಾರಾದರೂ ಅಜ್ಜನೋಡಿದ್ರೆ ಹೇಳಿ, ನಾವು ನಾಸ್ತಿಕ್ಯ ಮತವನ್ನು ಬಿಟ್ಟು ಆಸ್ತಿಕ್ಯ ಮತವನ್ನು ಸೇರ್ತೇವೆ. ಸಂದೇಹವಿಲ್ಲ. ಯಾರೂ ಕಂಡಿಲ್ಲ. ಕೇವಲ ಶ್ರದ್ಧಾಜಾಡ್ಯ.

ನಾನು ಚಿಕ್ಕವನಿದ್ದಾಗ ಶಾಲೆಗೆ ಹೋಗಿ ಬರುವಾಗ ಕೆಲವರು ಒಂದು ಕಲ್ಲು ಇಟ್ಟರು. ಅದಕ್ಕೊಂದು ಪುಷ್ಪ ಹಾಕಿದರು. ಕೈ ಮುಗಿದರು. ನಾನು ಕೇಳಿದೆ ಅದೇನು? ಎಂದು. ಪರೀಕ್ಷೆಯಲ್ಲಿ ಪಾಸಾಗಬೇಕಾದರೆ ಒಂದಿಷ್ಟು ಕಲ್ಲು ಹಾಕಬೇಕು. ಹೂವು ಹಾಕಬೇಕು ಅಂದರು. ಎಲ್ಲರೂ ಹೀಗೇ ಮಾಡಿದರು. ನಾನೂ ಹಾಗೆ ಮಾಡಿದೆ. ಈಗ ಅದು ಒಂದು ಬೆಟ್ಟವಾಗಿದೆ. ಹುಡುಗರೆಲ್ಲ ಸೇರಿ ದೇವರನ್ನು ಮಾಡಿದರು. ಹೀಗೆ ನಮ್ಮಲ್ಲಿ ದೇವರಿಗೂ ದಾರಿದ್ರ್ಯವಿಲ್ಲ. ದೇವಾಲಯಕ್ಕೂ ದಾರಿದ್ರ್ಯ ಇಲ್ಲ. ದಾರಿದ್ರ್ಯ ಇರುವುದು ಪೂಜೆ ಮಾಡುವವರಿಗೆ ಮಾತ್ರ. ಬರೇ ನಂಬಿಕೆ. ಇದು ಬರೋದು ಆಪತ್ತಿನಲ್ಲಿ. ಏನೂ ಓದಿಲ್ಲ, ನಾಳೆ ಪರೀಕ್ಷೆ. ಆಗ ತಾಯಿ ಹೇಳಿದರು.

'ನೋಡು ಮಗ! ದೇವರಿಗೆ ಕೈ ಮುಗಿ', ಆಗಲಿ ಅಂದ್ವಿ, ದೇವರು ಇರಲಿ ಬಿಡ್ಲಿ. ಹೇಗಾದರೂ ಪಾಸಾದ್ರೆ ಸರಿ. ಕೈ ಮುಗೀತೇವೆ. ಮತ್ತೆ ಹೇಳೋದು ದೇವರು ಪಾಸ್ ಮಾಡ್ದ ಅಂತ. ಅದೆಲ್ಲ ಸುಳ್ಳು. ದೇವರು ಬಂದು ಬರೆಯೋದಿಲ್ಲ. ನಾವು ಓದಿದ್ರೆ ಚೆನ್ನಾಗಿ ಬರೀತೇವೆ. ಅದು ನೆನಪಾಗ್ಲಿಕ್ಕೆ ಸಹ ದೇವರು ಬೇಡ. ಚೆನ್ನಾಗಿ ಓದಿದ್ರೆ ನೆನಪಾಗುತ್ತೆ.

ಆರೋಗ್ಯ ಚೆನ್ನಾಗಿಲ್ಲ. ಡಾಕ್ಟರ್ ಮಾತಾಡ್ತಾ ಇಲ್ಲ. ದೇವರನ್ನು ಪ್ರಾರ್ಥನೆ ಮಾಡಿ ಅಂತಾರೆ. ಹೀಗೆ ಭಯದಿಂದ ದೇವರ ಕಲ್ಪನೆಯಾದದ್ದಷ್ಟೆ.

**ಪೇ. ಶ್ರೀಗಳು:–** ಆಹ್ವಾನವಿಲ್ಲದೆ ಈ ಮಾಧ್ವ ತತ್ವಜ್ಞಾನ ಸಮ್ಮೇಳನಕ್ಕೆ ಒಬ್ಬ ನಾಸ್ತಿಕ ವಿಚಾರವಾದಿಗಳು ಬಂದು ಬಿಟ್ಟಿದ್ದಾರೆ. ಅವರೇನೋ, ಎಲ್ಲೆಡೆ ನಾವಿದ್ದೇವೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ನಮ್ಮ ವ್ಯಾಪ್ತಿ ಇದೆ ಅಂತ ಭಾರೀ ಹೇಳಿಕೊಳ್ಳುತ್ತಿದ್ದಾರೆ. ಆದರೆ ಎಲ್ಲ ಕಡೆ ಅವರು ಅಲ್ಪಸಂಖ್ಯಾತರು. ಎಲ್ಲಾ ನಾಸ್ತಿಕರು ಕೆಲವೊಂದು ಸಂದರ್ಭ ಬಂದಾಗ ಬಹಿರಂಗವಾಗಿ ಅಲ್ಲದಿದ್ದರೂ ಗುಟ್ಟಾಗಿ ದೇವಸ್ಥಾನಕ್ಕೆ ಹೋಗಿಯೇ ಹೋಗ್ತಾರೆ. ಅಂತಹ ನಾಸ್ತಿಕರೇ ಇರೋದು. ಹೊರಗೆ ಮಾತ್ರ ನಾಸ್ತಿಕರು ಅಂತ ಹೇಳ್ತಾರೆ. ಅಂತರಂಗದಲ್ಲಿ ದೇವರ ಬಗ್ಗೆ ಭಯ ಇದ್ದೇ ಇದೆ. ಆದ್ದರಿಂದ ಇವರಿಗೆ ನಾವೇನು ಭಯ ಪಡಬೇಕಾಗಿಲ್ಲ. ಯಾರನ್ನೂ ಅವರು ಬದಲಾಯಿಸಲು ಆಗುವುದಿಲ್ಲ. ಇರಲಿ. ಇಲ್ಲಿಗೆ ಬಂದು ಬಿಟ್ಟಿದ್ದಾರೆ. ಏನೋ ಕೆಲವು ಪ್ರಶ್ನೆಗಳನ್ನು ಕೇಳಿದ್ದಾರೆ. ಅದನ್ನು ವಿಮರ್ಶೆ ಮಾಡೋಣ.

ದೇವರು ಕಣ್ಣಿಗೆ ಕಾಣೋದಿಲ್ಲ. ಪಂಚಭೂತಗಳು ಮಾತ್ರ ಕಾಣುವುದು. ಕಾಣದ ದೇವರನ್ನು ಯಾಕೆ ಒಪ್ಪಬೇಕು. ಇವರೆಲ್ಲ ಕಂಡದ್ದನ್ನೇ ಒಪ್ಪುವುದಾದರೆ, ವಿಜ್ಞಾನಿಗಳು ಎಷ್ಟೋ ವಿಷಯಗಳನ್ನು ಸೂಕ್ಷ್ಮಗ್ರಾಹಿ ಉಪಕರಣಗಳ ಮೂಲಕ ಕಂಡು ಹಿಡಿದಿದ್ದಾರೆ. ಪ್ರಕೃತಿಯ, ಆಕಾಶಮಂಡಲದ ಅನೇಕ ರಹಸ್ಯಗಳನ್ನು ಕಂಡು ಹಿಡಿದಿದ್ದಾರೆ. ಹೇಳಿದ್ದಾರೆ. ಇವರು ಅದನ್ನೆಲ್ಲ ನೋಡಿದ್ದಾರಾ? ಅವರು ಹೇಳಿದ್ದನ್ನು ಮಾತ್ರ ನಂಬಿದ್ದಾರೆ. ವಿಜ್ಞಾನ ಕ್ಷೇತ್ರದ ಅನೇಕ ಅಪೂರ್ವ ಸಂಗತಿಗಳನ್ನು ಇವರು ನೋಡಿಲ್ಲ. ಅವರು ಉಪಕರಣಗಳ ಮೂಲಕ ನೋಡಿದ್ದಾರೆ. ಒಪ್ಪಿದ್ದಾರೆ. ತಾವು ನೋಡದೇ ಇದ್ದದ್ದನ್ನೂ ಕೂಡ ಇನ್ನೊಬ್ಬರ ಮೇಲಿನ ಶ್ರದ್ಧೆ, ನಂಬಿಕೆಗಳಿಂದ

ಒಪ್ಪುವ ಕ್ರಮ ಇವರಲ್ಲಿದೆ. ಆದರೆ ಯೋಗಿಗಳು ತಮ್ಮ ಅನುಭವದಿಂದ ಯೋಗ, ಸಾಧನೆ ಮೊದಲಾದವುಗಳನ್ನೂ ಮೀರಿ ಭಗವಂತನನ್ನು ಕಂಡಿದ್ದಾರೆ. ತಿಳಿಸಿದ್ದಾರೆ. ಅದನ್ನು ಯಾಕೆ ಇವರು ಒಪ್ಪಬಾರದು. ಸಂಶಯವಿದ್ದರೆ ಒಬ್ಬ ವಿಜ್ಞಾನಿ ಹೇಳಿದ್ದನ್ನು ಅಲ್ಲಗಳೆಯಬೇಕಾದರೆ ಇವರೂ ಅದೇ ಉಪಕರಣಗಳನ್ನು ಬಳಸಿ ನೋಡಬೇಕು. ಬರೇ ಸ್ಥೂಲ ಕಣ್ಣಿನಿಂದ ಕಂಡಿಲ್ಲ, ಇಲ್ಲ ಎಂದು ಹೇಳಿದರೆ ಆ ಮಾತಿಗೆ ಬೆಲೆಯಿಲ್ಲ. ಅದರಂತೆ ಯೋಗಿಗಳೂ ಅನುಭವದಿಂದ ಸಾಧನೆಯಿಂದ ಕಂಡುಕೊಂಡದ್ದನ್ನು ಇವರು ಅಲ್ಲಗಳೆಯಬೇಕಾಗಿದ್ದರೆ ಇವರು ಅದೇ ಯೋಗಸಾಧನೆಗಳನ್ನು ಮಾಡ್ಲಿ, ಧ್ಯಾನ ಮಾಡ್ಲಿ, ಆಮೇಲೆ ಕಾಣದೆ ಇದ್ರೆ ಇಲ್ಲ ಅಂತ ಹೇಳಲಿ, ಏನೂ ಪರಿಶ್ರಮ ಪಡದೆ ಕಾಣಿಸುವುದಿಲ್ಲ, ಆದ್ದರಿಂದ ದೇವರು ಇಲ್ಲ ಎಂದು ಹೇಳಲು ಇವರಿಗೇನು ಅಧಿಕಾರ? ಇವರು ಅಲ್ಲಗಳೆಯಬೇಕಾದರೆ ಹತ್ತುವರ್ಷ ನಮ್ಮ ಮಾರ್ಗದಲ್ಲೇ ಸಾಧನೆ ಮಾಡಲಿ.

**ಪ. ಶ್ರೀಗಳು:–** ಗುಟ್ಟಲ್ಲಿ ನಾವು ಪೂಜೆ ಮಾಡುವುದು ಹೌದು. ಅದು ನಮಗೋಸ್ಕರ ಅಲ್ಲ, ನಮ್ಮನೆಯವರಿಗೋಸ್ಕರ, ಅವರಿಗೆ ಖುಷಿಯಾಗಲಿ ಅಂತ.

**ಪೇ. ಶ್ರೀಗಳು:–** ನಗುತ್ತ ನಿಮಗೆ ಮನೆಯವರಿದ್ದಾರಾ?

**ಪ. ಶ್ರೀಗಳು:–** ಕುಟುಂಬ ಇದ್ದವರಿಗೆ. ಅಥವಾ ಅಕ್ಕಪಕ್ಕದವರ ಮನೆಯವರಿಗೋಸ್ಕರವೇ. ಅದೂ ಇರಲೂಬಹುದು ಎಂಬ ಸಂಶಯದಿಂದಲೇ ಪೂಜಿಸುವುದು. ಅದು ನಾವು ಪ್ರಾಮಾಣಿಕವಾಗಿ ಮಾಡುವುದು ಅಲ್ಲವೇ ಅಲ್ಲ.

ಮತ್ತೊಂದು ಮಾತು ಹೇಳಿದರು. ವಿಜ್ಞಾನಿಗಳು ಚಂದ್ರಮಂಡಲ, ಮಂಗಲಗ್ರಹಗಳಿಗೆ ಹೋಗಿ ನೋಡಿ ಬಂದು ಹೇಳಿದರೆ ನಾವು ಒಪ್ಪುತ್ತೇವೆ. ಯಾಕೆ ಅಂದ್ರೆ ಅವರಲ್ಲಿ ಕರೆದುಕೊಂಡು ಹೋಗಲು ಎಲ್ಲ ಉಪಕರಣಗಳೂ ಇವೆ. ನಾವು ಕಾಣದಿದ್ದನ್ನು ಒಪ್ಪುವುದಿಲ್ಲ ಎಂದು ಹೇಳಿಲ್ಲ. ಯಾರೂ ಕಾಣದಿದ್ದುದನ್ನು ನಾವು ಒಪ್ಪುವುದಿಲ್ಲ. ವಿಜ್ಞಾನಿಗಳು ಕಂಡುಕೊಂಡ ಸಂಗತಿಗಳನ್ನು ಅವರ ಉಪಕರಣಗಳ ಮೂಲಕ ನಾವೂ ನೋಡಬಹುದು.

ನಾವೂ ಕಷ್ಟಪಟ್ಟು ಏಕಾದಶೀ ಮಾಡಿದ್ದೇವೆ. ಚಾತುರ್ಮಾಸ್ಯ ಮಾಡಿ ದೇವರು ಕಾಣಿಸ್ತಾನೆ ಎಂದರು. ಚಾತುರ್ಮಾಸ್ಯ ಮಾಡಿದ್ದೇವೆ ಎಂದರು. ದೇವರು ಕಾಣಿಸಲಿಲ್ಲ. ಮತ್ತೆ ಹೇಳಿದ್ರೆ ಈ ಜನ್ಮದಲ್ಲಿ ಕಾಣಿಸೋದಿಲ್ಲ. ಮುಂದಿನ ಯಾವುದಾದರೂ ಜನ್ಮದಲ್ಲಿ ಕಾಣಿಸಿಯಾನು ಎಂದರು. ಆಸೆಯಲ್ಲಿಯೇ ಸಾಯಬೇಕು ಇವರು ಹೀಗೆ ಹೇಳೋದು ನಾವೂ ಹಾಗೆ ಹೇಳ್ತಾ ಬದುಕೋದು. ಇದು ಉಪಯೋಗವಿಲ್ಲ. ಯಾರಾದರೂ ನೋಡಿದ್ದು ನಮಗೆ ಸಹ ಅವರು ತೋರಿಸಿಯಾರೇ ಇಲ್ಲ. ಸದ್ಯದ ಮಟ್ಟಿಗೆ ನಮ್ಮ ಅನುಭವಕ್ಕೆ ಎಟುಕುವ ರೀತಿಯಲ್ಲಿ ದೇವರ ಅಸ್ತಿತ್ವವನ್ನು ಒಪ್ಪಿಸಲಿಕ್ಕೆ ಸಾಧ್ಯವೇ? ಈ ಕಣ್ಣಿಗಂತು ದೇವರು ಕಾಣೋ ಹಾಗಿಲ್ಲ. ಬೇರೆ ಕಣ್ಣು ಈ ಜನ್ಮದಲ್ಲಿ ಬರುವ ಹಾಗಿಲ್ಲ. ಹಾಗಾಗಿ ನಮಗೆ ದೇವರು ನೋಡುವ ಆಸೆಯೇ ಹೋಗಿದೆ.

ದೇವರನ್ನು ಒಪ್ಪುವವರಲ್ಲಿ ಮಧ್ವಾಚಾರ್ಯರು ಬರುವ ತನಕ 21 ಜನ ಬಂದಿದ್ದಾರೆ ಅಂತಾರೆ. ಒಬ್ಬೊಬ್ಬರು ಒಂದೊಂದು ರೀತಿ ಹೇಳಿದ್ದಾರೆ. ಅಂದರೆ ಒಬ್ಬರೂ ದೇವರನ್ನು ನೋಡೇ ಇಲ್ಲ. ಕಂಡ್ರೆ ಹೀಗೆ ಇದೆ ಎಂದೂ ಎಲ್ಲರೂ ಒಂದೇ ರೀತಿ ಹೇಳ್ಬೇಕಾಗಿತ್ತು. 21 ಜನರೂ ಒಂದೊಂದು ರೀತಿ ಹೇಳಿದ ಮೇಲೆ ಇಪ್ಪತ್ತೆರಡನೇ ಮಧ್ವಾಚಾರ್ಯರು ಹೀಗೇ ಹೇಳಿದ್ದಾರೆ ಎಂದು ನೀವು ಈ ಸಮ್ಮೇಳನದಲ್ಲಿ ಹೇಳಿದರಲ್ಲ. ಅದನ್ನಾದರೂ ಹೇಗೆ ನಂಬೋದು? 22ನೆಯವರದೂ ಹಾಗೇ ಆದರೆ "ಆದರೆ...' ನನಗೆ ಸರಿಯಾಗಿ ಗೊತ್ತಿಲ್ಲ. ಒಪ್ಪುವುದು ಹೇಗೆ? ದೇವರನ್ನು ಸರಿಯಾಗಿ ಕಂಡು ಹೇಳಿದವರು ಯಾರೂ ಇಲ್ಲ ಎನ್ನುವುದಕ್ಕೆ ಇದೊಂದು ಪುರಾವೆ. ಆಸ್ತಿಕರೆಲ್ಲ ಸೇರಿ ದೇವರು ಹೀಗೇ ಇದ್ದಾನೇಂತ ಇಷ್ಟು ಸಮ್ಮೇಳನಗಳಾದರೂ ತೀರ್ಮಾನ ಮಾಡಲಿಕ್ಕಾಗಿಲ್ಲ. ನಾವೆಲ್ಲ ಸೇರಿ ಒಂದೇ ರೀತಿ ಹೇಳ್ತೇವೆ ದೇವರು ಇಲ್ಲ ಧರ್ಮ ಇಲ್ಲ ಅಂತ.

ನಿಮ್ಮ ಹಿಂದೆ ಎಲ್ಲಿಗೆ ಬೇಕಾದರೂ ಬರುತ್ತೇವೆ ತೋರಿಸಿ.

**ಪೇ. ಶ್ರೀಗಳು:–** ಅಂತೂ ಸ್ವಲ್ಪ ದಾರಿಗೆ ಬಂದ್ರು. ಮೊದಲು ದೇವರೇ ಇಲ್ಲ ಎಂದು ನಿಶ್ಚಯ ಮಾಡಿದವರು ಈಗ ಸಂಶಯಕ್ಕೆ ಬಂದರು. ಸಾಧನೆ ಮಾಡಲಿಕ್ಕಾಗಲಿಲ್ಲ. ಸ್ವಲ್ಪ ಮಾಡಿದ್ದೇವೆ. ಆದರೂ ದೇವರು ಕಂಡಿಲ್ಲ.

ಸಂಶಯ ಬಂದಿದೆ ಎಂದಿರಿ. ಎಲ್ಲರೂ ರಾಕೆಟ್‌ನಲ್ಲಿ ಹೋಗಿಲ್ಲ. ಹೋಗುವ ಧೈರ್ಯ ಎಲ್ಲರಿಗೂ ಇಲ್ಲ. ಆದರೂ ವಿಜ್ಞಾನಿಗಳ ಮಾತಿನ ಮೇಲೆ ಶ್ರದ್ಧೆ ಇಟ್ಟಿದ್ದೀರಿ. ನೀವೂ ಶ್ರದ್ಧೆಗೆ ಬೆಲೆ ಕೊಟ್ಟಿದ್ದೀರಿ. ನೋಡದೇ ನೋಡಿದವರ ಮಾತಿನ ಮೇಲೆ ವಿಶ್ವಾಸವಿಟ್ಟು ನಂಬಿದ್ದೀರಿ. ಇಲ್ಲೂ ಉಪನಿಷತ್ತುಗಳಲ್ಲಿ, ಭಾರತದಲ್ಲಿ, ಎಷ್ಟು ಜನ ಮಹರ್ಷಿಗಳು, ಎಷ್ಟು ಮಂದಿ ಹರಿದಾಸರುಗಳು ಭಗವಂತನನ್ನು ನಾವು ನೋಡಿದ್ದೇವೆ, ಅವನು ಹೀಗಿದ್ದಾನೆಂದು ವರ್ಣಿಸಿದ್ದಾರೆ. ಗಗನಯಾನಿಗಳಾದರೂ ಕೆಲವೇ ಮಂದಿ. ಭಗವಂತನನ್ನು ಕಂಡವರು ಸಾವಿರಾರು ಮಂದಿ ಇದ್ದಾರೆ. ಅವರಲ್ಲಿ ನಿಮಗೆ ಯಾಕೆ ವಿಶ್ವಾಸ ಉಂಟಾಗುವುದಿಲ್ಲ. ಅವರು ತಿಳಿಸಿದ ರೀತಿಯಲ್ಲಿ ಸಾಧನೆ ಮುಂದುವರೆಸಿ. ಸಂಶಯ ಬಂದರೂ ಹೀಗೆ ವರ್ತಿಸಬೇಕು. ಧಾರ್ಮಿಕ ಮಾರ್ಗದಲ್ಲಿ ಭಗವಂತನಲ್ಲಿ ವಿಶ್ವಾಸವಿಟ್ಟು ನಡೆದರೆ ಒಂದು ಪಕ್ಷ ದೇವರಿಲ್ಲ ಅಂತ ಆದರೆ ನಮಗೇನು ಹಾನಿಯಿಲ್ಲ. ನಮ್ಮ ಧರ್ಮ ಸಾಂಸಾರಿಕ ಸುಖಗಳನ್ನೆಲ್ಲ ಬಿಡಬೇಕು ಅಂತ ಹೇಳುವುದಿಲ್ಲ. ಕೆಲವು ತ್ಯಾಗಮಾಡಬೇಕಷ್ಟೆ. ಒಂದು ಪಕ್ಷ ದೇವರಿಲ್ಲಾಂತ ಭಾವಿಸಿಕೊಂಡು ಎಲ್ಲ ಧರ್ಮಗಳನ್ನು ಬಿಟ್ಟು ವರ್ತಿಸಿದರೆ ದೇವರಿದ್ದರೆ ನಿಮ್ಮ ಗತಿ ಏನು? ವಿಚಾರ ಮಾಡಿ. ದೇವರು ಇದ್ದಾನೋ ಇಲ್ಲವೋ ಅಂತ ಸಂಶಯ ಬಂದಾಗ ದೇವರಿದ್ದಾನೆ ಅಂತ ಭಾವಿಸಿ ನಡೆದರೆ ಅಪಾಯವಿಲ್ಲ. ದೇವರಿಲ್ಲಾಂತ ಭಾವಿಸಿಕೊಂಡು ನಡೆದಾಗ ದೇವರಿದ್ದರೆ ಎಂತಹ ದುರಂತ ಕಾದಿದೆ? ಸ್ವಲ್ಪ ಗಮನದಲ್ಲಿಟ್ಟುಕೊಂಡು ಎಚ್ಚರವಹಿಸಿ ಧಾರ್ಮಿಕ ಮಾರ್ಗದಲ್ಲಿ ನಡೆಯುವುದೇ ಒಳ್ಳೆಯದು ಎಂದು ಹೇಳಬಯಸ್ತಾ ಇದ್ದೇವೆ.

ನಮ್ಮ ಜಗತ್ತಿನ ಕ್ರಮ ನೋಡಿ. ಒಂದು ಚಿಕ್ಕ ಗಡಿಯಾರ ಕ್ರಮಬದ್ಧವಾಗಿ ಚಲಿಸ್ತಾ ಇದೆ. ಇದನ್ನು ಮಾಡಿದವರು ಯಾರೆಂದು ನಾವು ನೋಡಿಲ್ಲ. ಆದರೆ ಇದು ತನ್ನಷ್ಟಕ್ಕೆ ಆಯಿತು ಅಂತ ಒಪ್ಪಲು ನೀವು ತಯಾರಿದ್ದೀರಾ? ಅದರ ಹಿಂದೆ ಒಬ್ಬ ವಿಜ್ಞಾನಿಯ ಬುದ್ಧಿವಂತಿಕೆಯಿದೆ ಎಂದು ಒಪ್ಪುತ್ತೇವೆ. ಒಂದು ಚಿಕ್ಕ ಗಡಿಯಾರದ ಹಿಂದೆ ಒಬ್ಬ ಬುದ್ಧಿಶಾಲಿ ವ್ಯಕ್ತಿ ಇದ್ದಾನೆಂದು ಊಹಿಸುವುದಾದರೆ ಜಗತ್ತಿನ ಹಿಂದೆಯೂ ಒಬ್ಬ ಬುದ್ಧಿಶಾಲಿ ವ್ಯಕ್ತಿ ಇರಲೇಬೇಕಲ್ಲ. ಜಗತ್ತು ಎಂಬ ಗಡಿಯಾರ ಎಷ್ಟು ಕ್ರಮಬದ್ಧವಾಗಿ ಚಲಿಸ್ತಾ

ಇದೆ. ಈ ಗಡಿಯಾರವಾದರೂ ನಿಂತು ಹೋಗಬಹುದು. ಆದರೆ ಜಗತ್ತೆಂಬ ಗಡಿಯಾರದಲ್ಲಿ ಸೂರ್ಯಚಂದ್ರರೆಂಬ ಮುಳ್ಳು ಒಂದು ದಿನವೂ ಕೂಡ ನಿಂತು ಹೋಗುವುದಿಲ್ಲ. ಇಷ್ಟು ದೊಡ್ಡ ಪ್ರಪಂಚ ತನ್ನಷ್ಟಕ್ಕೆ ಆಯಿತು ಎಂಬ ಮೂರ್ಖತನ ಮತ್ತೊಂದಿಲ್ಲ, ಹೀಗೆ ನಿರ್ಧಾರದಿಂದಲೂ ಭಗವಂತನ ಅಸ್ತಿತ್ವವನ್ನು ಅರಿಯಬಹುದು. ಸಂಶಯವಿದ್ದರೂ ನೀವು ನಮ್ಮ ಜೊತೆಗೇ ಬಂದರೆ ಒಳ್ಳೇದು. ನಿಮ್ಮ ಜೊತೆ ಬಂದರೆ ನಮಗೆ ನಿಮಗೆ ಇಬ್ಬರಿಗೂ ಯಾವ ಗಂಡಾಂತರ ಕಾದಿದೆ ಹೇಳುವುದು ಕಷ್ಟ. ಆದ್ದರಿಂದ ಸಂಶಯವಿದ್ದರೂ ನಮ್ಮೊಡನೆ ಬನ್ನಿ. ನಿಶ್ಚಯವಿದ್ದರಂತೂ ನಿಮಗೆ ಒಳ್ಳೆ ಸ್ವಾಗತವಿದೆ. ಬನ್ನಿ.

**ಪ. ಶ್ರೀಗಳು:–** ಒಬ್ಬ ಡಾಕ್ಟರ್ ಸಿಕ್ಕಿದರು. ಅವರು ಹೇಳಿದರು–ನಿಮಗೆ ರೋಗ ಇದ್ದ ಹಾಗೆ ಇದೆ. ಕ್ಯಾನ್ಸರ್ ಇರಲೂಬಹುದು. ನೀವು ಔಷಧ ತೆಕ್ಕೊಳ್ಳೋದು ಒಳ್ಳೇದು. ತೆಕ್ಕೊಂಡರೆ ನಿಮಗೆ ತೊಂದರೆ ಇಲ್ಲ. ತೆಕ್ಕೊಳ್ಳದೇ ಹೋದ್ರೆ ನೀವು ಸತ್ತೇ ಹೋಗ್ತೀರಿ. ನನಗೆ ಕ್ಯಾನ್ಸರ್ ಇಲ್ಲ, ನಾನು ತೆಕ್ಕೊಂಡೆ. ಯಾಕೆ ಅಂದರೆ ಕ್ಯಾನ್ಸರ್ ಇದೆ ಅಂತ ಅಲ್ಲ. ಭಯದಿಂದಲೇ ತೆಕ್ಕೊಂಡಿದ್ದು, ಈ ಆಸ್ತಿಕರು ನಿಮ್ಮನ್ನೆಲ್ಲ ಒಪ್ಪಿಸಿದ್ದು ಇದೇ ತಂತ್ರ ಬಳಸಿ, ದೇವರು ಇದ್ದಾರೇಂತ ಗ್ಯಾರಂಟಿಯಲ್ಲಿ ಹೇಳಿದ್ದಲ್ಲ. ದೇವರು ಒಪ್ಪದಿದ್ರೆ ನೀವಿಷ್ಟೂ ಜನ ನರಕಕ್ಕೆ ಹೋಗ್ತೀರಿ ಅಂತ ಭಯದಿಂದ ಒಪ್ಪಿಸಿದ್ದು, ಇರಲಿ ಬಿಡಿ. ಅವರು ಹಾಗೇ ಬದುಕಲಿ.

ಗಡಿಯಾರದ ಮಾತು ಹೇಳಿದರು. ಗಡಿಯಾರಕ್ಕೆ ಒಬ್ಬ ಶೆಲ್ ಹಾಕಕ್ಕೊಬ್ಬ ಬೇಕು. ಈ ಜಗತ್‌ಚಕ್ರಕ್ಕೆ ಯಾರು ಯಾವತ್ತು ಶೆಲ್ ಹಾಕಿದ್ರು? ಈ ಜಗಚ್ಚಕ್ರ ನಡೀಲಿಕ್ಕೆ ಒಬ್ಬ ದೇವರು ಬೇಕು ಅಂತ ಹೇಳಿದ್ದಾರೆ. ನನಗೆ ಅನ್ನಿಸ್ತಾ ಇದೆ ಈ ದೇವರ್ದು ಎಂತಹ ಕಿತಾಪತಿ ಎಲ್ಲ ಇರ್ತದಾ ಅಂತ, ಒಮ್ಮೆ ರಾತ್ರಿ ಕತ್ತಲೆ. ನಮ್ಮ ಗಡಿಯಾರದಲ್ಲಿ ರಾತ್ರಿ, ಕತ್ತಲೆ ಎಂಬುದು ಇಲ್ಲ.

ದೇವರು ಸರ್ವಶಕ್ತ ಆಗಿದ್ರೆ ಸೂರ್ಯ ಒಂದೇ ಕಡೆ ಇರುವ ಹಾಗೆ ಮಾಡ್ತಿದ್ರೆ ನಮಗೆ ಇಷ್ಟೆಲ್ಲ ಖರ್ಚ್ತಿತ್ತಾ. ನಮ್ಮ ಗಡಿಯಾರದ ಹಿಂದೆ ಇರುವ ದೇವರಿಗೆ ಇಷ್ಟೇ ಶಕ್ತಿ ಇರೋದು, ನಾನೊಂದು ಪಕ್ಷ–ದೇವರಾಗಿದ್ರೆ...

ಆಗಲಿಲ್ಲ ಬೇಡ ಬಿಡಿ. 24 ತಾಸೂ ಕೂಡ ಸೂರ್ಯ ಉರಿಯೋ ಹಾಗೆ ಮಾಡ್ತಿದ್ದೆ. ಚಂದ್ರ ಯಾವಾಗಲೋ ಬೇಕಾದಾಗ ಇರಬೇಕಾಗಿತ್ತು.

ದೇವರದ್ದು ಹೀಗೆ ತರತಮಭಾವ ಎಂಥದ್ದು? ದೇವರು ಒಮ್ಮೆ ಸೂರ್ಯನನ್ನು ಅತ್ತ ಕಡೆಗೆ ಫೋಕಸ್ ಮಾಡೋದು. ಒಮ್ಮೆ ಇತ್ತಕಡೆ ಫೋಕಸ್ ಮಾಡೋದು ಯಾಕೆ?

ಒಟ್ಟು ನನ್ನ ಆಕ್ಷೇಪ ಇಷ್ಟು-ದೇವರು ಸರ್ವಶಕ್ತ ಅಂತ ಆಗಿದ್ರೆ ಪರಿಪೂರ್ಣ ಜಗತ್ತು ಮಾಡಬಹುದಿತ್ತು. ಈ ಜಗತ್ತಿನಲ್ಲಿ ಇಂತಹ ವೈಕಲ್ಯಗಳು, ದೋಷಗಳು ಯಾಕೆ ಬಂತು? ಇಂತಹ ಪಕ್ಷಪಾತ ಏಕೆ? ಒಬ್ಬರಿಗೆ ಕಷ್ಟ, ಒಬ್ಬರಿಗೆ ಸುಖ? ಇಂತಹ ದೇವರು ಬೇಕಾ ಬೇಡವಾ ನೀವೇ ನಿಮ್ಮ ಗೋಷ್ಠಿಯಲ್ಲಿ ತೀರ್ಮಾನ ಮಾಡಿ.

**ಪೇ. ಶ್ರೀಗಳು:-** ಅಂತೂ ಸ್ವಲ್ಪ ನಮ್ಮ ದಾರಿಗೆ ಬರ್ತಾ ಇದ್ದಾರೆ. ದೇವರನ್ನು ಒಪ್ಪಿ ಈ ವ್ಯತ್ಯಾಸ ಏಕೆ ಮಾಡಿದ? ಎಂಬ ಜಿಜ್ಞಾಸೆಯನ್ನು ತಮ್ಮ ತರ್ಕದ ಮುಖಾಂತರ ನಮ್ಮ ಮುಂದಿಡ್ತಾ ಇದ್ದಾರೆ. ತಾನು ದೇವರಾಗಿದ್ರೆ ಏನು ಮಾಡ್ತಿದ್ದೆ ಅಂತ ಒಂದು ಮಾತು ಹೇಳಿದ್ದಾರೆ. ನಮ್ಮ ದೇವರ ಅನುಗ್ರಹ. ಅವರು ದೇವರು ಆಗದೆ ಇದ್ದದ್ದರಿಂದ ನಾವು ಬಚಾವು ಆಗಿದ್ದೇವೆ. ಇವರು ದೇವರು ಆಗಿ ಸೂರ್ಯ ಮುಳುಗದೆ 24 ಗಂಟೆ ಉರಿತಾ ಇದ್ದಿದ್ರೆ ನಾವು ಯಾರೂ ಇರ್ತಾ ಇರಲಿಲ್ಲ. ಬರೀ ಸೂರ್ಯ ಮಾತ್ರ. ಈ ಜಗತ್ತು ಬದುಕಲಿಕ್ಕೆ ಸಾಧ್ಯವಿರ್ತಾ ಇರ್ಲಿಲ್ಲ. ಹಗಲು-ರಾತ್ರಿಯ ಸಮತೋಲನ ಭಗವಂತನ ಎಂಥ ಅದ್ಭುತ ವ್ಯಾಪಾರ. ಸಸ್ಯಗಳ ಅಭಿವೃದ್ಧಿಗೆ ಅವಕಾಶ. ರಾತ್ರಿ ಇಲ್ಲದೇ ಹೋಗಿದ್ರೆ ಪುಷ್ಪ ಅರಳುವುದು ಮುಂತಾದ ಈ ಪ್ರಕೃತಿಯ ಸೌಂದರ್ಯ ಯಾವುದೂ ಉಳೀತಿರ್ಲಿಲ್ಲ. ಸೂರ್ಯ ಮಾತ್ರ ಇದ್ದಿದ್ರೆ ಜಗತ್ತು ಮಸಣವಾಗುತ್ತಿತ್ತು. ಆ ಭಗವಂತನ ಸಂಯೋಜನದ ಕ್ರಮ, ಅದ್ಭುತ ಪ್ರತಿಭೆ, ಕರುಣೆ, ಮಹಿಮೆಗಳು ಅವನಲ್ಲಿ ಇನ್ನಷ್ಟು ಭಕ್ತಿ ಹುಟ್ಟುವಂತೆ ಮಾಡಿದೆ. ಈ ಪ್ರಶ್ನೆ ಕೇಳಿದ್ದಕ್ಕೆ ನಾಸ್ತಿಕ ಮಹಾಶಯರನ್ನು ಅಭಿನಂದಿಸ್ತಾ ಇದ್ದೇವೆ.

ಭಗವಂತ ಸರ್ವಶಕ್ತ ಹೌದು. ಸೃಷ್ಟಿ ಅಂದರೇನು? ವಿಜ್ಞಾನದ ದೃಷ್ಟಿಯಲ್ಲಿ ಇಲ್ಲದೇ ಇದ್ದ ವಸ್ತುವಿನ ಸೃಷ್ಟಿ ಅಲ್ಲ. ಸೃಷ್ಟಿ, ಅಂದರೆ ಇದ್ದದ್ದು

ಅಭಿವ್ಯಕ್ತವಾಗುವುದು. ಭಗವಂತನ ವ್ಯಾಪಾರವೇನು? ಜಡದಲ್ಲಿ ಪ್ರಕೃತಿಯಲ್ಲಿ ಚೇತನದಲ್ಲಿ ಮೂಲಭೂತವಾಗಿ ಏನು ಇದೆ ಅದನ್ನು ಅಭಿವ್ಯಕ್ತಗೊಳಿಸುವ ಕಾರ್ಯವನ್ನು ಭಗವಂತ ನಡಿಸ್ತಾ ಇದ್ದಾನೆ. ಅನಾವಶ್ಯಕವಾಗಿ ವೈಚಿತ್ರ್ಯವನ್ನು ಭಗವಂತ ನಿರ್ಮಿಸಿದ್ದಲ್ಲ. ವೈಚಿತ್ರ್ಯದ ಬೀಜ ಜಗತ್ತಿನ ಜಡ ಚೇತನದಲ್ಲಿ ಇದೆ, ಭಗವಂತ ಸರ್ವಜ್ಞ, ಸರ್ವಕರ್ತ.

ಸರ್ವಜ್ಞ ಅಂದರೇನು? ಎಲ್ಲವನ್ನು ತಿಳಿದಿದ್ದಾನೆ, ಇಲ್ಲದಿದ್ದ ವಸ್ತುವನ್ನು ತಿಳಿದಿದ್ದಾನೆ. ಇದ್ದದ್ದನ್ನು ಮಾತ್ರ ತಿಳಿಯೋದೇ ಸರ್ವಜ್ಞತ್ವ ಅಂದರೆ ಸರ್ವಕರ್ತಾ ಅಂದರೆ ಸೂಕ್ಷ್ಮವಾಗಿ ಯಾವುದು ಇದೆಯೋ ಅದನ್ನು ಸ್ಥೂಲರೂಪಕ್ಕೆ ತರುವುದು. ಇದಕ್ಕೆ ಭಗವಂತನ ಶಕ್ತಿ ಇಲ್ಲದೇ ಹೋದ್ರೆ ಜಡದಲ್ಲಿ ಆ ಚಲನೆಯೇ ಇಲ್ಲ. ಚೇತನರಲ್ಲಿ ಜಡದಲ್ಲಿ ಏನು ಸೂಕ್ಷ್ಮವಾಗಿ ಇದೆ ಅದನ್ನು ತನ್ನ ಶಕ್ತಿಯಿಂದ ಸ್ಥೂಲರೂಪದಲ್ಲಿ ಪ್ರಕಟಗೊಳಿಸುವುದೇ ಸರ್ವಕರ್ತೃತ್ವದ ಅರ್ಥ. ಸರ್ವಕರ್ತಾ ಎಂಬುದನ್ನು ವೈಜ್ಞಾನಿಕ ದೃಷ್ಟಿಯಿಂದ ಅರ್ಥ ಮಾಡಿಕೊಂಡಾಗ ಇದೇ ಅರ್ಥವಾಗುವುದು.

ಜಗನ್ನಾಥದಾಸರು ಉದಾಹರಣೆ ಕೊಡ್ತಾರೆ-ಮೋಡ ಹಾಗಲಕಾಯಿಯ ಸಸಿಗೂ ನೀರು ಸುರಿಸುತ್ತಾ ಇದೆ. ಮಾವಿನ ಕಾಯಿಯ ಸಸಿಗೂ ನೀರು ಹಾಕ್ತಾ ಇದೆ. ಒಂದಕ್ಕೆ ಕಹಿನೀರು, ಒಂದಕ್ಕೆ ಸಿಹಿ ನೀರು ಹಾಕ್ತಿದೆಯೇ? ಒಂದೇ ತರದ ನೀರು ಹಾಕಿದರೂ ಒಂದು ಕಹಿ ಒಂದು ಸಿಹಿ ಆಯಿತು. ವ್ಯತ್ಯಾಸಕ್ಕೆ ಮೋಡ ಕಾರಣವೋ, ತೋಟಗಾರ ಹಾಕಿದ ಗೊಬ್ಬರವೋ ಅಲ್ಲ. ಆ ಬೀಜದ ಮೂಲಭೂತವಾದ ವ್ಯಕ್ತಿತ್ವದಿಂದ ವೈಚಿತ್ರ್ಯ ಬಂತು. ಭಗವಂತ ಎಲ್ಲರಿಗೂ ತನ್ನ ಶಕ್ತಿಯನ್ನು ಪ್ರಚೋದನೆ ಮಾಡ್ತಾನೆ. ಅವರವರ ಮೂಲಭೂತ ವ್ಯಕ್ತಿತ್ವಕ್ಕೆ ಅನುಗುಣವಾಗಿ ವೈಚಿತ್ರ್ಯ ಬಂದರೆ ಅದಕ್ಕೆ ಭಗವಂತ ಹೊಣೆಯಲ್ಲ.

**ಪ. ಶ್ರೀಗಳು:-** ಒಂದು ಮಗು ಕುಂಟುತ್ತಾ ನಡೀತಿತ್ತಂತೆ. ನಡೀಲಿಕ್ಕಾಗಲಿಲ್ಲ ಆ ಮಗುವಿಗೆ ಪಾಪ. ಪಕ್ಕದ ಮನೆಯವರು ಕೇಳಿದ್ರು ಯಾಕಮ್ಮಾ ಮಗು ಕುಂಟುತ್ತಾ ನಡೀತಿದೆ? ಇವರು ಹೇಳಿದ್ರು ರೀ ನಿಮಗೆ ಗೊತ್ತಿಲ್ಲ. ನಮ್ಮದು ನೃತ್ಯದ ಮನೆ. ನಮ್ಮ ಹಿರಿಯರೆಲ್ಲ ಭರತನಾಟ್ಯವಾಡಿದ ಮನೆಯಿದು. ಆದ್ದರಿಂದ ನಮ್ಮ ಮಗು ಹುಟ್ಟಿದಾಗಲಿಂದ ಭರತನಾಟ್ಯ

ಮಾಡ್ತಲೇ ಇದೆ. ಹಾಗೆ ಇವರ ವಾದವಿದೆ. ಹೆತ್ತ ತಾಯಿಗೆ ಮಗು ಹೇಗಿದ್ರೂ ಚಂದ. ಇವರು ಕೊಟ್ಟ ದೃಷ್ಟಾಂತ ಹಾಗಿದೆ. ದೇವರು ಮಾಡಿದ್ದೆಲ್ಲ ಚೆನ್ನಾಗಿದೆ. ಸೂರ್ಯ ಉದಿಸಿದ. ಅದರಿಂದ ನಮಗೆ ಬೇಕಾದ್ದೆ ಆಯ್ತು. ಅದೂ 12 ಗಂಟೆ ಸೂರ್ಯನನ್ನು ಇಟ್ಟಿದ್ದಕ್ಕೆ ಯಾವಾಗಲೂ ಇದ್ದಿದ್ರೆ ಕಷ್ಟವಾಗ್ತಾ ಇತ್ತು. ನಮ್ಮ ಮಗು ನೃತ್ಯ ಮಾಡಿದೆ ಅಂತ ನಾವು ಹೇಳಿದ್ರೆ ಉಪಯೋಗವಿಲ್ಲ. ಪಕ್ಕದ ಮನೆಯವರು ಹೇಳಬೇಕು. ನೀವು ನಿಮ್ಮ ದೇವರ ಬಗ್ಗೆ ಹಾಗೆ ಹೀಗೆ ಅಂತ ಹೇಳಿದ್ರೆ ಉಪಯೋಗವಿಲ್ಲ. ನಾನು ಹೇಳಬೇಕು ನಿಮ್ಮ ದೇವರು ಚೆನ್ನಾಗಿದ್ದಾರೇಂತ. ಅದು ಆಗ್ಲಿಲ್ಲ. ಸುಮ್ಮನೆ ನಮ್ಮನ್ನು ದಾರಿಗೆ ಬಂದಿದ್ದಾರೆ ದಾರಿಗೆ ಬಂದಿದ್ದಾರೆ ಅಂತ ಹೇಳಿದ್ದಾರೆ. ನಾನು ಸ್ವಲ್ಪ ದಾರಿಗೆ ಹೋದ್ರೆ ಸ್ವಲ್ಪವಾದರೂ ಏನಾದರೂ ಸಿಗುತ್ತಾ ಅಂತ ಹೋದ್ರೆ ಏನು ಉಪಯೋಗವಿಲ್ಲ. ಇವರ ವಾದ ಕೇಳಿ ನನಗೆ ಖುಷಿಯಾಗ್ತಾ ಇದೆ. ಇವರ ಮಾತು ಕೇಳಿ ನಾನು ಈಗ ದೇವರು ಇಲ್ಲ ಅನ್ನುವ ತೀರ್ಮಾನಕ್ಕೆ ಬಂದಿದ್ದೇನೆ. ಇವರು ಹೇಳಿದ್ರು ಸೂರ್ಯ ಉದಯವಾದಾಗ ಕಮಲ ಅರಳಿದೆ. ಜನ ಕಣ್ಣು ಬಿಟ್ರು ನಿಜ. ಗೂಬೆ ಕಣ್ಣು ಮುಚ್ಚಿಕೊಳ್ತು ನಿಜ. ಇದೆಲ್ಲ ಯಾಕೆ ಅಂತ ಕೇಳಿದರೆ ಅದೆಲ್ಲ ಅವುಗಳ ಸ್ವಭಾವ ಅಂತ ಉತ್ತರ ಕೊಟ್ರು. ಮತ್ತೆ ನಿಮ್ಮ ದೇವರು ಏನು ಮಾಡಿದ್ದು ಕುಂಬಳಕಾಯಿ?

ನೀರು ಮೇಲಿನಿಂದ ಕೆಳಗೆ ಏಕೆ ಹರೀತಿದೆ ಅಂದ್ರೆ ದೇವರು ನೀರೇ! ನೀರು ಮೇಲಿನಿಂದ ಕೆಳಗೆ ಹರೀಬೇಕು. ಕೆಳಗಿನಿಂದ ಮೇಲಕ್ಕೆ ಹರೀಬೇಡ ಎಂದು ಅಪ್ಪಣೆ ಮಾಡಿದ್ದಾನೆ. ಅಲ್ಲ ಸ್ವಾಮಿ! ಅದು ನೀರಿನ ಸ್ವಭಾವ. ಬೆಂಕಿ ಮೇಲಕ್ಕೆ ಉರೀತದೆ. ಅದು ಅದರ ಸ್ವಭಾವ. ಅದಕ್ಕೆ ಯಾವ ದೊಣ್ಣೆರಾಯನ ಅಪ್ಪಣೆ ಬೇಡ. ಬೀಜಕ್ಕೆ ಎಷ್ಟೇ ಸಿಹಿ ನೀರು ಹಾಕಿ ಅದು ಮೆಣಸಿನ ಬೀಜ ಆಗಿದ್ರೆ ಮೆಣಸಿನ ಕಾಯಿ ಆಗತ್ತೆ ಹೊರತು ಕಬ್ಬು ಬೆಲ್ಲ ಆಗಲ್ಲ. ಅದು ಅದರ ಸ್ವಭಾವ. ನಿಮ್ಮ ದೇವರು ಏನು ಮಾಡಿದ್ದು? ನಾಸ್ತಿಕರಾದ ನಮ್ಮ ವಾದ ಸ್ವಭಾವ ವಾದ. ಏನೇನು ಇದೆ ಅದು ತನ್ನಷ್ಟಕ್ಕೆ ಆಗ್ತದೆ. ದೇವರು ಬೇಡ. ಒಮ್ಮೆ ಶ್ರೀರಂಗದಲ್ಲಿ ಬೆಂಕಿ ಹಿಡೀತು. ಎಂತಹ ಅನಾಹುತವಾಯ್ತು. ಎಷ್ಟು ಜನ ಸತ್ತರು? ಇದಕ್ಕೇನು ದೇವರು ಅಂತ ಹೇಳೋಣವೆ? ನನಗೆ ಅನ್ನಿಸ್ತು. ಅಷ್ಟು ಜನ ಸತ್ತರಲ್ಲ ದೇವರು ಬಂದು

ಬೆಂಕಿ! ನೀನು ಹಿಡೀಬೇಡ. ಅಷ್ಟು ಜನ ಒಳ್ಳೆವ್ರಿದ್ದಾರೆ, ಎಲ್ಲ ಸತ್ತು ಹೋಗ್ತಾರೆ ಅಂತ ತಡೀಬಹುದಿತ್ತಲ್ಲ, ಇವರು ಹೇಳ್ತಾರೆ ಅವರ ಜಾತಕದಲ್ಲಿ ಸುಟ್ಟು ಬೂದಿ ಆಗಲಿ ಅಂತ ಬರಿದಿತ್ತು. ಸುಟ್ಟು ಬೂದಿಯಾದರು. ಕೆಲವರು ಮುಹೂರ್ತಕ್ಕೆ ತಡವಾಗಿ ಬಂದು ಅವರು ಉಳಿದ್ರು, ತಡವಾಗಿ ಬಂದರೆ ಉಳೀಲಿಕ್ಕೆ ದೇವರು ಬೇಕಾ? ದೇವರ ಬಳಿಗೆ ಹೋಗಿ ಕೇಳಿದರಂತೆ. ದೇವರೆ! ಇಷ್ಟು ಜನ ಸುಟ್ಟು ಬೂದಿಯಾದ್ರು, ಇದರ ಬಗ್ಗೆ ನಿನ್ನ ಪ್ರತಿಕ್ರಿಯೆ ಏನು? ದೇವರು ಹೇಳಿದ. ನಾನೇನು ಮಾಡಲಿಕ್ಕಾಗಲಿಲ್ಲ. ಅವರವರು ಮಾಡಿದ ಕರ್ಮ. ಆ ಕರ್ಮ ಮಾಡಿಸುವುದರಲ್ಲಿ ನಿನ್ನ ಪಾತ್ರ ಇಲ್ಲವೋ. ಅದು ಹಿಂದಿನ ಕರ್ಮ ಅಲ್ಲಿ ನಿನ್ನ ಪಾತ್ರವಿಲ್ಲವೇ? ಅದು ಅವರ ಸ್ವಭಾವ. ದೇವರು ಮತ್ಯಾಕೆ?

ನಾನು ಅವರ ದಾರಿಗೆ ಬಂದ್ರು ಅಂತ ಹೇಳಿದ್ರು, ಆದರೆ ಹೇಳ್ತಾ ಹೇಳ್ತಾ ಅವರೇ ನನ್ನ ಸ್ವಭಾವವಾದದ ದಾರಿಗೆ ಬಂದ್ರು, ಅದಕ್ಕಾಗಿ ಅವರನ್ನು ನಾನು ಅಭಿನಂದಿಸ್ತೇನೆ.

**ಪೇ. ಶ್ರೀಗಳು:–** ಸ್ವಭಾವ ವಾದಕ್ಕೆ ನಾವು ಬಂದಿದ್ದೇವೆ ನಿಜ. ಕಮಲ ಅರಳುವುದು ಅದರ ಸ್ವಭಾವ. ಯಾವಾಗ? ಸೂರ್ಯ ಉದಯವಾದಾಗ ಮಾತ್ರ, ಇಲ್ಲದೇ ಹೋದ್ರೆ ಕಮಲ ಅರಳುವುದೇ ಇಲ್ಲ. ಸ್ವಭಾವ ಸ್ವಯಂ ಪ್ರಕಟವಾಗುವುದಿಲ್ಲ. ಅದಕ್ಕೆ ಇನ್ನೊಂದರ ಸಂಯೋಜನೆ ಆಗಬೇಕು. ಅದನ್ನು ಜೋಡಿಸುವವರು ಯಾರು? ಇದನ್ನು ನಾವು ಪ್ರಶ್ನಿಸಬೇಕಾಗಿದೆ. ಸೂರ್ಯ–ಕಮಲಗಳನ್ನು ಜೋಡಿಸಲು ಒಬ್ಬರು ಬೇಕು. ಇಲ್ಲದೆ ಹೋದ್ರೆ ಎಲ್ಲವೂ ತಟಸ್ಥ, ಸ್ವಭಾವ ಪ್ರಕಟವಾಗಲು ಬೇಕಾದ ಚಾಲನೆ ನೀಡಲು ಒಬ್ಬ ಚೈತನ್ಯಶೀಲ ವ್ಯಕ್ತಿ ಬೇಕೇ ಬೇಕು. ಸ್ವಭಾವವೆಂಬುವುದು ವಸ್ತುವಿನ ಒಂದು ನಿಷ್ಕ್ರಿಯವಾದ ಧರ್ಮ, ಅದು ಕಾರ್ಯಗತವಾಗಲು ಇನ್ನೊಂದರ ಸಂಯೋಜನೆ ಬೇಕು. ಜಗತ್ತಿನಲ್ಲಿ ಒಂದೊಂದು ವಸ್ತುವಿಗೆ ಒಂದೊಂದು ಸ್ವಭಾವವಿದೆ. ನಾವೆಲ್ಲರೂ ಬದುಕಿ ಬೆಳೆಯಲಿಕ್ಕೆ ಅನುಕೂಲವಾಗುವಂಥ? ವಿಚಿತ್ರ ಸಂಯೋಜನೆ ತನ್ನಷ್ಟಕ್ಕೆ ಆಯ್ತಾ? ಸಾಧ್ಯವೇ ಇಲ್ಲ.

ಕೆಲವು ಅವ್ಯವಸ್ಥೆ ಆಗಿರಬಹುದು. ಅಷ್ಟು ಮಂದಿ ಸತ್ತರು. ತಾತ್ಕಾಲಿಕವಾಗಿ ಇದೊಂದು ಆಗಬಾರದ ಘಟನೆ ಅನಿಸಬಹುದು. ಆದರೆ

ವಿಶಾಲ ಜಗತ್ತಿನ ಪೂರ್ವಾಪರಗಳನ್ನು ಬಲ್ಲ ಯೋಚನಾಬದ್ಧವಾಗಿ ಜಗತ್ತನ್ನು ನಡೆಸಬಲ್ಲ ವ್ಯಕ್ತಿಯ ಹಿನ್ನೆಲೆ ಇದೆ. ನಮ್ಮ ಶರೀರದ ರಚನೆ, ಪ್ರತಿಯೊಂದು ವಸ್ತುವಿನಲ್ಲಿ ನಡೆಯುವ ವ್ಯಾಪಾರಗಳಲ್ಲಿ ಎಷ್ಟು ಪದಾರ್ಥಗಳ ಎಷ್ಟು ಸ್ವಭಾವಗಳ ಸಂಯೋಜನೆ ಆಗಿದೆ. ಜಗತ್ತು ಬೆಳವಣಿಗೆಯಾಗಲು ಯಾವ ಆಲೋಚನೆಯ ಶಕ್ತಿಯೇ ಇಲ್ಲದ ಜಡ ಪದಾರ್ಥಗಳ ಸಂಯೋಜನೆಗಳಿಗೆ ಒಬ್ಬ ಭಗವಂತನ ಅವಶ್ಯಕತೆ ಇದ್ದೇ ಇದೆ.

ಕ್ರಮಬದ್ಧವಾಗಿ ಗೊಂಬೆಗಳು ಕುಣಿಯಲು ಒಬ್ಬ ಸೂತ್ರಧಾರನಿರುವಂತೆ ವ್ಯವಸ್ಥಿತವಾದ ಪ್ರಪಂಚಕ್ಕೆ ಕೂಡ ಸೂತ್ರಧಾರನಾದ ಭಗವಂತ ಇದ್ದರೆ ಮಾತ್ರ ಸಾಧ್ಯವಾಗುವುದು.

ಕುಣಿಯಲಿಕ್ಕೆ ಗೊತ್ತಿಲ್ಲದವನು ರಂಗಸ್ಥಲ ಸರಿಯಿಲ್ಲ ಎಂದಂತೆ ತಮ್ಮ ತಪ್ಪನ್ನು ದೇವರ ಮೇಲೆ ಹೇರುವುದು. ತಮ್ಮ ತಪ್ಪೇನು ಎಂದು ತಿಳಿಯದ ದೇವರು ಯಾಕೆ ಹೀಗೆ ಮಾಡಿದ ಎಂದು ದೇವರ ಮೇಲೆ ಆಕ್ಷೇಪಿಸುವುದು ಹೊಣೆಗೇಡಿತನದ ಪ್ರವೃತ್ತಿ. ಆದ್ದರಿಂದ ಇದಕ್ಕೇನು ನಾವು ಮಹತ್ವ ಕೊಡಬೇಕಿಲ್ಲ. ಇಷ್ಟು ವ್ಯವಸ್ಥಿತವಾದ ಪ್ರಪಂಚವನ್ನು ನಿರ್ಮಾಣ ಮಾಡಿದ ಬಹಳ 'ಪ್ಲಾನಿ' ಆದ ದೇವರ ಅದ್ಭುತ ಪ್ರತಿಭೆಗೆ, ಅವನ ಜ್ಞಾನಕ್ಕೆ ನಾವೆಲ್ಲ ತಲೆಬಾಗಬೇಕು.

**ಪ. ಶ್ರೀಗಳು:–** ಅದ್ಭುತವಾದ ಪ್ರತಿಭೆಯಲ್ಲಿ ಉತ್ತರ ಕೊಟ್ಟಿದ್ದಾರೆ. ನನಗೂ ಉತ್ತರ ಕೊಡಲಿಕ್ಕೆ ಗೋತ್ತಾದೀತು. ಸದ್ಯಕ್ಕೆ ಪುರುಸೊತ್ತು ಇಲ್ಲ ಅಂತ ಹೇಳಿ ಇಲ್ಲಿಂದ ನುಣುಚಿಕೊಂಡು ಇನ್ನೊಂದು ಸಂದರ್ಭ ಅವರ ಹತ್ತಿರ ಮತ್ತೆ ವಾದಕ್ಕೆ ಬರ್ತೇನೆ ಅಂತ ಹೇಳ್ತಾ ಈ ನಾಸ್ತಿಕ್ಯವಾದವನ್ನು ಮುಗಿಸ್ತಾ ಇದ್ದೇನೆ.

* * *

## 3. ದ್ವೈತಾದ್ವೈತ ಚರ್ಚೆ (ಶ್ರೀವಿಶ್ವೇಶತೀರ್ಥರು ಮತ್ತು ಶ್ರೀ ವ್ಯಾಸರಾಜ ಮಠದ ಶ್ರೀವಿದ್ಯಾಶ್ರೀಶತೀರ್ಥರುಗಳಿಂದ)

**ವ್ಯಾ. ಶ್ರೀಪಾದರು:–** ಮಾಧ್ವ ದರ್ಶನದಲ್ಲಿ ಸಾತ್ವಿಕರಿಗೆ ಮಾತ್ರ ಮೋಕ್ಷ. ಉಳಿದವರು ನಿತ್ಯಸಂಸಾರಿಗಳು ಅಥವಾ ನರಕಕ್ಕೆ ಹೋಗುವವರು. ಹೀಗೆ ಅಲ್ಪಸಂಖ್ಯಾತರು ಮಾತ್ರ ಮೋಕ್ಷಾಧಿಕಾರಿಗಳು. ಆದರೆ ಅದ್ವೈತದರ್ಶನದಲ್ಲಿ

ಎಲ್ಲ ಜೀವರೂ ಮೋಕ್ಷಾಧಿಕಾರಿಗಳು, ನಿತ್ಯನರಕವೇ ಇಲ್ಲ. ಇದು ದ್ವೈತದರ್ಶನ ಒಂದು ನ್ಯೂನತೆ.

**ಪೇ. ಶ್ರೀಪಾದರು:-** ಅದ್ವೈತದರ್ಶನದಲ್ಲಿ ಎಲ್ಲರೂ ಎನ್ನುವಂತೆಯೇ ಇಲ್ಲ. ಅಲ್ಲಿರುವುದು ಆತ್ಮ ಒಬ್ಬನೇ. ಅವನಿಗೆ ಮಾತ್ರ ಮೋಕ್ಷ. ಆ ಮೋಕ್ಷದಲ್ಲೂ ಸುಖವಿಲ್ಲ. ಸಂಸಾರದಲ್ಲಿ ದುಃಖವಿದ್ದರೂ ಸುಖವೂ ಇರುವುದರಿಂದ ಅದು ವಾಸಿ. ಮೋಕ್ಷವಾದರೆ ಇದ್ದ ಸುಖವನ್ನೂ ಕಳೆದುಕೊಳ್ಳಬೇಕಾಗುತ್ತದೆ. ಆದ್ದರಿಂದ ಅಂತಹ ಮೋಕ್ಷಕ್ಕಿಂತ ಸಂಸಾರವೇ ವಾಸಿ.

**ವ್ಯಾ. ಶ್ರೀಪಾದರು:-** ಮೋಕ್ಷದಲ್ಲಿ ಸುಖ ಇಲ್ಲದಿದ್ದರೂ ದುಃಖವಿಲ್ಲದಿರುವುದರಿಂದ ಅದು ಅಪೇಕ್ಷಿತವಾಗಬಹುದು. ಸಂಸಾರದಲ್ಲಿರುವ ತೊಂದರೆಯೇ ದುಃಖವಿರುವುದು. ಅದರಿಂದಾಗಿಯೇ ಸಂಸಾರವು ಬಂಧನವೆನಿಸಿದೆ. ಅಂತಹ ದುಃಖವು ಮೋಕ್ಷದಲ್ಲಿ ಇಲ್ಲ. ಆದ್ದರಿಂದ ಅದು ಪುರುಷಾರ್ಥವಾಗಿದೆ.

**ಪೇ. ಶ್ರೀಪಾದರು:-** ನಾವು ಸಕ್ಕರೆಯನ್ನು ತಿನ್ನಬೇಕೇ ಹೊರತು, ನಾವೇ ಸಕ್ಕರೆಯಾಗಬಾರದು. ಅದರಂತೆ 'ನಾವು ದುಃಖವಿಲ್ಲದವರು ನನಗೆ ಯಾವ ದುಃಖವೂ ಇಲ್ಲ' ಎನ್ನುವ ಅನುಭವವು ಬಂದರೆ ಮಾತ್ರ ಮೋಕ್ಷವು ಬಿಡುಗಡೆ ಎನಿಸುತ್ತದೆ. ಆದರೆ, ಅದ್ವೈತ ಮೋಕ್ಷದಲ್ಲಿ ಈ ಅನುಭವಕ್ಕೆ ಅವಕಾಶವಿಲ್ಲ. ಏಕೆಂದರೆ ಆ ಮೋಕ್ಷದಲ್ಲಿ ಜ್ಞಾನವೇ ಇಲ್ಲ. ಹೀಗಾಗಿ ನಮ್ಮಲ್ಲಿ ದುಃಖ ಇಲ್ಲದಿದ್ದರೂ ಅದನ್ನು ಅನುಭವಿಸಲಾಗದೆ, ಕಲ್ಲು ಬಂಡೆಯಂತೆ ನಾವಿದ್ದರೆ ಅದು ಪುರುಷಾರ್ಥವಾಗುವುದು ಹೇಗೆ?

**ವ್ಯಾ. ಶ್ರೀಪಾದರು:-** ಅದ್ವೈತ ದರ್ಶನಂತೆ ಈ ಪ್ರಪಂಚ ಸ್ವಪ್ನದಂತೆ. ಸ್ವಪ್ನದಲ್ಲಿ ಸುಂದರ ದೃಶ್ಯಗಳನ್ನು ನೋಡುತ್ತೇವೆ. ಸಂತಸವಾಗುತ್ತದೆ. ಕೆಟ್ಟ ದೃಶ್ಯಗಳನ್ನು ನೋಡಿದಾಗ ದುಃಖವಾಗುತ್ತದೆ. ಈ ಸುಖ-ದುಃಖಗಳಿಗೂ ಹೊರಪ್ರಪಂಚದಿಂದಾಗುವ ಸುಖ-ದುಃಖಗಳಿಗೂ ಯಾವುದೇ ವ್ಯತ್ಯಾಸವಿಲ್ಲ. ಸ್ವಪ್ನ ಸುಳ್ಳು. ಅದರಂತೆ ಪ್ರಪಂಚವೂ ಸುಳ್ಳು. ಆದರೂ ಅದರಿಂದ ಸುಖ-ದುಃಖವಾಗಬಹುದು. ಹೀಗೆ, ಸ್ವಪ್ನದಲ್ಲಿ ನಮಗೆ ಆಕರ್ಷಣೆಯು ಇಲ್ಲದಿರುವಂತೆ ಈ ಪ್ರಪಂಚದಲ್ಲಿಯೂ ಆಸಕ್ತಿಯು ಕಡಿಮೆಯಾಗಿ ಅಧ್ಯಾತ್ಮದ ಕಡೆಗೆ ತಿರುಗಲು ಅದ್ವೈತವು ಕಾರಣವಾಗುತ್ತದೆ.

**ಪೇ. ಶ್ರೀಪಾದರು:–** ಸ್ವಪ್ನವು ಸುಳ್ಳು. ಏಕೆಂದರೆ, ಎಚ್ಚರವಾದ ಕೂಡಲೇ ನಾನು ನೋಡಿದ್ದು ಯಾವುದೂ ಇಲ್ಲ. ಅದೆಲ್ಲ ಸುಳ್ಳು ಎನ್ನುವ ಜ್ಞಾನವಿದೆ. ಇದರಂತೆ, ಪ್ರಪಂಚವೂ ಸುಳ್ಳಾಗಬೇಕಾದರೆ 'ಅದೂ ಸುಳ್ಳು' ಎನ್ನುವ ಜ್ಞಾನ ಬರಬೇಕು. ಈ ಜ್ಞಾನ ಯಾರಿಗಿದೆ? ಇಂತಹ ಜ್ಞಾನ ಅದ್ವೈತಮತಾಚಾರ್ಯರಿಗೇ ಇಲ್ಲ. ಇದ್ದಿದ್ದರೆ ಅವರು ಈ ಪ್ರಪಂಚದಲ್ಲಿ ವ್ಯವಹಾರವನ್ನು ಮಾಡಲು ಹೇಗೆ ಸಾಧ್ಯ? ಸ್ವಪ್ನದಲ್ಲಿ ಕಂಡ ಹಾಲನ್ನು ಎದ್ದಮೇಲೆ ಕುಡಿಯಲು ಯಾರಾದರೂ ಪ್ರಯತ್ನಿಸುವುದುಂಟೇ? ಅಂತಹವರು ಅದ್ವೈತ ತತ್ವವನ್ನು ಉಪದೇಶ ಮಾಡುವುದಾದರೂ ಹೇಗೆ? ಹೀಗೆ ಆತ್ಮಸಾಕ್ಷಾತ್ಕಾರವಾದವರು ಅದ್ವೈತವನ್ನು ಹೇಳಲಾರರು. ಹೇಳಿದವರಿಗೆ ಅದ್ವೈತ ಸಾಕ್ಷಾತ್ಕಾರ ಇಲ್ಲ. ಆದ್ದರಿಂದ, ಅದ್ವೈತವಾದಿಗಳಿಗೂ ಈ ಪ್ರಪಂಚವು ಸುಳ್ಳು ಎನ್ನುವ ಜ್ಞಾನ ಬರಲು ಸಾಧ್ಯವಿಲ್ಲ.

ಈ ಪ್ರಪಂಚ ಸತ್ಯವೆಂದು ಒಪ್ಪಿದರೂ ಪ್ರಪಂಚದಿಂದ ನಮಗೆ ಸಿಗುವ ಲಾಭಕ್ಕಿಂತ ನಷ್ಟವೇ ಹೆಚ್ಚು. ಯಾವುದೇ ವಿಷಯಪದಾರ್ಥಗಳ ಭೋಗದಿಂದ ಬರೀ ಸುಖವೊಂದೇ ಬರುವುದಿಲ್ಲ, ದುಃಖವೂ ಜೊತೆಗಿರುತ್ತದೆ. ಬರುವ ಸುಖವೂ ತಾತ್ಕಾಲಿಕ. ನಮಗೆ ದುಃಖವಿಲ್ಲದ ಶಾಶ್ವತವಾದ ಸುಖವೇ ಬೇಕು. ಅದಕ್ಕಾಗಿ ಈ ಪ್ರಪಂಚವನ್ನು ಸಾಧ್ಯವಾದಷ್ಟು ದೂರವಿಡಬೇಕು. ಹೀಗೆ ಪ್ರಪಂಚವು ಸತ್ಯವಾದರೂ ಅದರಲ್ಲಿ ವೈರಾಗ್ಯವು ಬರಲು ಸಾಧ್ಯವಿದೆ. ವೈರಾಗ್ಯ ಬರಬೇಕಾದರೆ ಅದು ಸುಳ್ಳೇ ಆಗಬೇಕಿಲ್ಲ.

* * * *

## 4. ಅಧ್ಯಾಪಕರು, ವಿದ್ಯಾರ್ಥಿಗಳಿಂದ ಶ್ರೀವಿಶ್ವೇಶತೀರ್ಥರೊಂದಿಗೆ ಸಂವಾದ

**ಪ್ರಶ್ನೆ:–** ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ (2–163) ದುರ್ಯೋಧನನಿಂದಲೂ ಭೀಮನ ಪ್ರಶಂಸೆ ನಡೆದಿದೆ ಎಂಬುದಕ್ಕೆ ಮಹಾಭಾರತದ ವಿರಾಟ ಪರ್ವದಲ್ಲಿ ಬಂದ ದುರ್ಯೋಧನನ ಮಾತನ್ನು ಉಲ್ಲೇಖಿಸಲಾಗುವುದು **'ವೀರಾಣಾಂ ಶಾಸ್ತ್ರವಿದುಷಾಂ ಕೃತೀನಾಂ ತತ್ವನಿರ್ಣಯೇ....ಚತುರ್ಥಃ ಕೀಚಕಸ್ತೇಷಾಂ ...'** ಇದರ ಪ್ರಕಾರ ಭೀಮಾದಿಗಳು

ಹೇಗೋ ಹಾಗೆ ಕೀಚಕನೂ ಬಲಧೈರ್ಯಾದಿಗಳಲ್ಲಿ ಹೇಗೋ ಹಾಗೆ ತತ್ವನಿರ್ಣಯದಲ್ಲೂ (ತತ್ವನಿರ್ಣಯೇ) ನಾಲ್ಕನೆಯವನಾಗಿ ಉಲ್ಲೇಖಾರ್ಹನಾಗಿದ್ದನೋ?

**ಉತ್ತರ:**- ಮಹಾಭಾರತದಲ್ಲಿ ಇದು ದುರ್ಯೋಧನನ ಮಾತಾಗಿ ಉಲ್ಲೇಖಗೊಂಡಿದೆ. ದುರ್ಯೋಧನನ ಅನಿಸಿಕೆಯಂತೆ ಸತ್ವ, ಬಾಹು-ಬಲಾದಿಗಳಲ್ಲಿ ಹೇಗೋ ಹಾಗೆ ತತ್ವನಿರ್ಣಯದಲ್ಲೂ ಕೀಚಕ ನಾಲ್ಕನೆಯವನಾಗಿ ಪರಿಗಣಿತನಾಗಿರುವನೆಂದು ಇಟ್ಟುಕೊಳ್ಳಬಹುದೆಂದು ಕೆಲವರು ಭಾವಿಸುವುದುಂಟು.

ಆದರೆ ಕೀಚಕನ ವಿರುದ್ಧ ಯುದ್ಧ ನಡೆಸಿದ ಘಟನೆಗೆ ಪೂರಕವಾಗಿ ಉಲ್ಲೇಖಿಸಲಾಗುವ ದುರ್ಯೋಧನನ ಈ ಮಾತಿನಲ್ಲಿ ಯುದ್ಧಕ್ಕೆ ಸಂಬಂಧಿಸಿದಂತೆ ಬಲ, ಧೈರ್ಯಾದಿ ಗುಣಗಳು ಪ್ರಸ್ತುತವೆನಿಸಬಲ್ಲವೋ ಹೊರತು ಶಾಸ್ತ್ರ ತತ್ವನಿರ್ಣಯ ಅಪ್ರಸ್ತುತ. ಆದುದರಿಂದ **'ವೀರಾಣಾಂ ಶಾಸ್ತ್ರವಿದುಷಾಂ ಕೃತೀನಾಂ ತತ್ವನಿರ್ಣಯೇ'** ಮುಂತಾದ ಗುಣಗಳು ಎಂಬ ಮಾತಿಗೆ ವೀರರೇ ಮುಂತಾದ ವ್ಯಕ್ತಿಗಳು ಸತ್ವಾದಿ ಗುಣಗಳ ವಿಷಯದಲ್ಲಿ ತತ್ವನಿರ್ಣಯ ನಡೆಸುತ್ತಿರಲು ಸತ್ವ, ಬಾಹುಬಲ... ವಿಷಯದಲ್ಲಿ ಭೀಮ, ಬಲರಾಮ, ಶಲ್ಯ-ಇವರ ಬಳಿಕ ನಾಲ್ಕನೆಯವನಾಗಿ ಕೀಚಕ ಪರಿಗಣಿತನಾಗಿರುವನು-ಎಂಬ ಅಭಿಪ್ರಾಯವೇ ಸಮುಚಿತವೆನಿಸಬಲ್ಲದು.

**ಪ್ರಶ್ನೆ:**- ಏಕಲವ್ಯ ಒಂದು ಬಗೆಯಲ್ಲಿ ದುಷ್ಟ; ಅಂತಹವನಿಗೆ ಅಸ್ತ್ರಶಸ್ತ್ರಗಳ ಉಪದೇಶ ನೀಡಿದಲ್ಲಿ ಅನರ್ಥ ಸಂಭವಿಸುವುದೆಂದು ವಿಮರ್ಶಿಸಿದ್ದ ದ್ರೋಣಾಚಾರ್ಯರು ಹಿಂದೆ ಏಕಲವ್ಯನಿಗೆ ವಿದ್ಯೋಪದೇಶವನ್ನು ನೀಡಿದ್ದಿರಲಿಲ್ಲ. ಏಕಲವ್ಯ ಗುರುದಕ್ಷಿಣೆಯಾಗಿ ತನ್ನ ಬೆರಳನ್ನೇ ತುಂಡರಿಸಿ ಕೊಟ್ಟಿದ್ದರಿಂದ, ಅವನ ಗುರುಭಕ್ತಿಗೆ ಕರಗಿದ ದ್ರೋಣಾಚಾರ್ಯರು ರೈವತಪರ್ವತದಲ್ಲಿ ಏಕಾಂತವಾಗಿ ಅವನಿಗೆ ಅಸ್ತ್ರಶಸ್ತ್ರಗಳನ್ನು ಉಪದೇಶಿಸಿದರೆಂದು ಶ್ರೀಮಧ್ವರು ನಿರೂಪಿಸಿರುವರು. ಇದರಿಂದ ಇತಿಹಾಸದ ಒಂದು ಸತ್ಯಸಂಗತಿಯನ್ನು ತಿಳಿಸಿದಂತಾಗುವುದೇ ಹೊರತು ದ್ರೋಣಾಚಾರ್ಯರನ್ನು ಸಮರ್ಥಿಸಿದಂತಾಗಲಾರದು ತಾನೇ? ದುಷ್ಟನಾದ

ಏಕಲವ್ಯ ತನ್ನ ದುಷ್ಟತನವನ್ನು ಕಳೆದುಕೊಂಡಿಲ್ಲದಿರುವುದರಿಂದ ಅಂತಹವನ ಮೇಲೆ ದ್ರೋಣಾಚಾರ್ಯರು ತೋರಿಸಿದ ಅನುಕಂಪ ಅಸ್ಥಾನಿಕ ಎನಿಸದೇ?

**ಉತ್ತರ :**– ಏಕಲವ್ಯ ತನ್ನ ದುಷ್ಟತನವನ್ನು ತ್ಯಜಿಸದಿದ್ದರೂ, ಗುರುಭಕ್ತಿಯ ಹೆಸರಿನಲ್ಲಿ ಬೆರಳನ್ನೇ ಕಳೆದುಕೊಂಡಿದ್ದಾನೆಂದ ಮೇಲೆ, ಬೆರಳನ್ನು ಕಳಕೊಂಡ ಅವನಿಂದ ಹೆಚ್ಚು ಹಾನಿ ಆಗಲಾರದೆಂದು ಭಾವಿಸಿ ದ್ರೋಣಾಚಾರ್ಯರು ಅವನಿಗೆ ಅಸ್ತ್ರಶಸ್ತ್ರಗಳ ಉಪದೇಶ ನೀಡಿರುವರೆಂದು ತಿಳಿಯಬಹುದಾಗಿದೆ.

**ಪ್ರಶ್ನೆ:**– ಕ್ಷತ್ರಿಯ ದ್ವೇಷಿಗಳಾಗಿದ್ದ ಪರಶುರಾಮರು ಕ್ಷತ್ರಿಯರಾಗಿದ್ದ ಭೀಷ್ಮರಿಗೆ ಹೇಗೆ ಶಸ್ತ್ರಾದಿಗಳ ಉಪದೇಶ ನೀಡಿದರು?

**ಉತ್ತರ:**– **'ಅವಿಜಿತಕುನೃಪತಿಸಮಿತಿವಿಖಂಡನ......'**– ಎಂದು ಶ್ರೀಮಧ್ವರು ಸ್ತುತಿಸಿರುವಂತೆ ಪರಶುರಾಮರು ದುಷ್ಟರಾದ, ಕ್ಷತ್ರಿಯರ ವಿರುದ್ಧ ದ್ವೇಷಿಗಳಾಗಿದ್ದರೇ ಹೊರತು ಎಲ್ಲ ಕ್ಷತ್ರಿಯರನ್ನೂ ವಿರೋಧಿಸುತ್ತಿರಲಿಲ್ಲ. ಭೀಷ್ಮ ಕ್ಷತ್ರಿಯ ಎಂದು ತಿಳಿದಿದ್ದೂ ಅವರಿಗೆ ಪರಶುರಾಮ ಉಪದೇಶಿಸಿರುವುದರಿಂದಲೇ ಸ್ಪಷ್ಟವಾಗುವುದು. ಅವರಿಗೆ ಕ್ಷತ್ರಿಯರ ಮೇಲೆ ದ್ವೇಷ ಇದ್ದದ್ದಲ್ಲ ಎಂದು.

ಕರ್ಣನು ಪರಶುರಾಮರ ಈ ಸ್ವಭಾವವನ್ನು ತಿಳಿಯದೆ ಪರಶುರಾಮರಿಗೆ ಕ್ಷತ್ರಿಯರ ಮೇಲೆಯೇ ದ್ವೇಷ ಇರುವುದರಿಂದ ತಾನು ಕ್ಷತ್ರಿಯ ಎಂದು ತಿಳಿದಲ್ಲಿ ಉಪದೇಶ ನೀಡಲಾರರೆಂದು ಭ್ರಮಿಸಿ ತಾನು ಬ್ರಾಹ್ಮಣನೆಂದು ಸುಳ್ಳು ಹೇಳಿರುವನಷ್ಟೇ.

* * *

## 5. ಸಂಪಾದಕರೊಂದಿಗೆ ನಡೆಸಿದ್ದ ಒಂದು ಸಂವಾದ

### 1) ಮಾಧ್ವ ತತ್ತ್ವಜ್ಞಾನವನ್ನು ತಾವು ಯಾಕೆ ಮೆಚ್ಚಿಕೊಂಡಿರುವಿರಿ?

ಮಧ್ವಾಚಾರ್ಯರು ಜಗತ್ತು ಬರೇ ಭ್ರಮೆಯೆಂದು ಭಾವಿಸಿ ಪ್ರತ್ಯಕ್ಷ ಜೀವನನ್ನು, ಅಲಕ್ಷಿಸಿಲ್ಲ. ಈ ಜೀವನವು ಸತ್ಯ ಹಾಗೂ ಆಧ್ಯಾತ್ಮಿಕ ಸಿದ್ಧಿಗೆ ಸೋಪಾನವೆಂದು ಬೋಧಿಸಿ ಭಕ್ತಿಯ ನೆಲೆಯಲ್ಲಿ ಪ್ರಯತ್ನ ಮತ್ತು ಕರ್ತವ್ಯಗಳಿಂದ ನಮ್ಮ ಪ್ರತ್ಯಕ್ಷಜೀವನವನ್ನು ಸಮೃದ್ಧಗೊಳಿಸಬೇಕೆನ್ನುವ ಅವರ ಸಂದೇಶವನ್ನು ನಾವು ತುಂಬ ಮೆಚ್ಚಿಕೊಂಡಿದ್ದೇವೆ. ನಮ್ಮ ಪರಮ

ಸಿದ್ಧಿಯಾದ ಮುಕ್ತಿಯ ಬಗ್ಗೆ ಬೇರೆ ಬೇರೆ ದರ್ಶನಗಳ ನಿರೂಪಣೆಯನ್ನು ಪರಿಶೀಲಿಸಿದಾಗ ಆಚಾರ್ಯರು ನೀಡಿದ ಮುಕ್ತಿಯ ವಿಶ್ಲೇಷಣೆಯು ಅತ್ಯಂತ ವೈಜ್ಞಾನಿಕವೂ ಆಕರ್ಷಕವೂ ಆಗಿ, ನಮ್ಮ ಹೆಚ್ಚಿನ ಮೆಚ್ಚುಗೆಯನ್ನು ಪಡೆದಿದೆ.

**2) ಮಾಧ್ವ ತತ್ವಜ್ಞಾನದ ಯಾವ ತತ್ವ ನಿಮಗೆ ತುಂಬ ಮನವರಿಕೆಯಾಗಿದೆ?**

ಜಗತ್ತು ಸತ್ಯ, ಇದರ ನಿರ್ಮಾಪಕನಾದ ಭಗವಂತನು, ಜಡ-ಜೀವಗಳಿಂದ ಭಿನ್ನನು ಮತ್ತು ಸರ್ವೋತ್ತಮನು. ಅವನನ್ನು ಯಾವ ಹೆಸರಿನಿಂದಲೂ ಕರೆಯಬಹುದು. ಮುಕ್ತಿಗೆ ಇತರ ಸಾಧನೆಗಳಂತೆ ಜನಸೇವೆಯೂ ಅತ್ಯಂತ ಅವಶ್ಯ. ತನ್ನ ಸಚ್ಚಿದಾನಂದಮಯ ವ್ಯಕ್ತಿತ್ವದ ಅಭಿವ್ಯಕ್ತಿಯೇ ಮುಕ್ತಿ, ನಮ್ಮ ಶ್ರೇಯಸ್ಸಿಗೆ ದೇವರ ಅನುಗ್ರಹ ಮತ್ತು ನಮ್ಮ ಪ್ರಯತ್ನ ಈ ಎರಡೂ ಆವಶ್ಯಕ. ಮುಂತಾದ ಪ್ರಮೇಯಗಳಲ್ಲಿ ಮನವರಿಕೆಯಾಗದಿದ್ದುದು ಯಾವುದು? ಎಲ್ಲರಿಗೂ ಮನವರಿಕೆಯಾಗುವ ವಿಷಯಗಳೇ ಈ ತತ್ತ್ವಜ್ಞಾನದಲ್ಲಿ ತುಂಬಿದೆ.

**3) ಮಾಧ್ವ ವಾಙ್ಮಯದ ಯಾವ ಕೃತಿ ನಿಮ್ಮ ಅತ್ಯಂತ ಮೆಚ್ಚುಗೆಗೆ ಪಾತ್ರವಾಗಿದೆ? ಯಾಕೆ?**

ಎಲೆಯಲ್ಲಿ ಹಲವಾರು ಉತ್ತಮ ಸುಮಧುರ ಭಕ್ಷ್ಯಗಳನ್ನು ಬಡಿಸಿದಾಗ ನಮಗೆ ಯಾವುದು ಮೆಚ್ಚಿಗೆಯಾದುದೆಂದು ಆಯ್ಕೆ ಮಾಡುವುದು ಹೇಗೆ? ಯಾವುದನ್ನೂ ಬಿಡಲು ಮನಸ್ಸು ಒಪ್ಪುವುದಿಲ್ಲವಲ್ಲವೆ? ಅದರಂತೆ ಆಚಾರ್ಯರ ಗ್ರಂಥಗಳಲ್ಲಿ ಎಲ್ಲವೂ ವೈಶಿಷ್ಟ್ಯಪೂರ್ಣ. ಬ್ರಹ್ಮಸೂತ್ರಗಳ ಪ್ರತಿಯೊಂದು ಅಧಿಕರಣಗಳ ಅರ್ಥವನ್ನು ವಿವರಿಸುವ ಭಾಷ್ಯ, ವಿಭಿನ್ನ ವಾದಗಳನ್ನು ಅದ್ಭುತವಾಗಿ ವಿಮರ್ಶಿಸುವ ಅನುವ್ಯಾಖ್ಯಾನ, ವೇದೋಪನಿಷತ್ತುಗಳಿಗೆ ಅಪೂರ್ವ ಆಧ್ಯಾತ್ಮಿಕ ಅರ್ಥವನ್ನು ವಿವರಿಸುವ ಋಗ್ಭಾಷ್ಯ, ಉಪನಿಷದ್ಭಾಷ್ಯಗಳು, ಇತಿಹಾಸ ಪುರಾಣಗಳ ಸಂಶೋಧನಾತ್ಮಕ ಕೃತಿ ಭಾರತ, ಭಾಗವತತಾತ್ಪರ್ಯ ನಿರ್ಣಯ, ಗೀತೆಯ ಭಾಷ್ಯ, ಸ್ತೋತ್ರ ಕಾವ್ಯಗಳು ಎಲ್ಲವನ್ನೂ ನಾವು ಮೆಚ್ಚಿಕೊಂಡಿದ್ದೇವೆ.

**4) ಮಾಧ್ವ ತತ್ತ್ವಜ್ಞಾನದ ಪ್ರಚಾರದಲ್ಲಿ ಈಗ ಅಳವಡಿಸಿಕೊಂಡಿರುವ ಕ್ರಮಗಳಲ್ಲಿ ಯಾವುದಾದರೂ ಬದಲಾವಣೆ ಅಪೇಕ್ಷಿತವೆ?**

ಮಧ್ವ ತತ್ತ್ವಜ್ಞಾನಪ್ರಚಾರವನ್ನು ನಡೆಸುವಾಗ ಬರೇ ಮಾಧ್ವರನ್ನು ಗಮನದಲ್ಲಿ ಇಟ್ಟುಕೊಳ್ಳದೆ ಮಾಧ್ವೇತರರನ್ನೂ ಗಮನದಲ್ಲಿಟ್ಟುಕೊಂಡು ಅವರಿಗೆ ಮನವರಿಕೆಯಾಗುವ ರೀತಿಯಲ್ಲಿ ನಮ್ಮ ಪ್ರಚಾರ ರೀತಿಯನ್ನು ರೂಪಿಸಿಕೊಳ್ಳಬೇಕು.

**5) ಮಾಧ್ವ ತತ್ವಜ್ಞಾನದ ಪ್ರಚಾರಕ್ಕೆ ಹೊಸತಾಗಿ ಅಳವಡಿಸಿಕೊಳ್ಳಬೇಕಾದ ಉಪಾಯ ಯಾವುದು?**

ರಾಮಕೃಷ್ಣ ಮಿಷನ್, ಚಿನ್ಮಯ ಮಿಷನ್ ಮುಂತಾದ ಸಂಸ್ಥೆಗಳು ಅದ್ವೈತ ಪ್ರಚಾರವೆನ್ನುವ ಹಣೆಪಟ್ಟಿ ಹಚ್ಚಿಕೊಳ್ಳದೆ ಪರ್ಯಾಯವಾಗಿ ಅದ್ವೈತದ ಸಂದೇಶವನ್ನು ಪ್ರಸಾರಪಡಿಸುವಂತೆ, ಮಾಧ್ವೇತರರನ್ನೂ ಗಮನದಲ್ಲಿ-ಟ್ಟುಕೊಂಡು ಸಾಮಾನ್ಯ ಜನರಿಗಾಗಿ ಹೊಸ ವೈಖರಿಯಲ್ಲಿ ಮಾಧ್ವ ತತ್ವಪ್ರಚಾರವನ್ನು ಕೈಗೊಳ್ಳಬೇಕು.

(ಪ್ರಶ್ನೆಗಳು– ಸಂಪಾದಕರಾದ ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರಿಂದ)

* * * *

# ಅಂತಿಮ ಸಂದೇಶ ಮತ್ತು ಮಹಾಪ್ರಸ್ಥಾನ



ಶಂಖ-ಗದಾ-ಚಕ್ರ-ಪದ್ಮಧಾರಿಯಾದ 'ಇಂದಿರಾ'ಪತಿ 'ದಾಮೋದರ'



ಹನುಮಂತನಿಗೆ ಶ್ರೀರಾಮಚಂದ್ರ ದೇವರು ಚಿರಂಜೀವಿಯಾಗುವಂತೆ ಹರಸಿದಾಗ ಹನುಮಂತನು, ನನಗೆ ಎಷ್ಟು ದಿವಸದ ಬದುಕು? ಎನ್ನುವುದಕ್ಕಿಂತ ಬದುಕಿದಷ್ಟು ಕಾಲ ನಿನ್ನ ಸೇವೆ ಮಾಡಿ ಬದುಕುವಂತೆ ಅನುಗ್ರಹಿಸೆಂದು ಬೇಡಿಕೊಂಡನು.

ಅಂತೆಯೇ ನಾನೂ ದೇವರಲ್ಲಿ ದೀರ್ಘಜೀವನ ಬೇಡುವುದಿಲ್ಲ. ಆದರೆ ಇರುವಷ್ಟು ಕಾಲ ನಿನ್ನ ಸೇವೆ ಮಾಡುವಂತೆ, ಸಮಾಜ ಸೇವೆ ಮಾಡುವಂತೆ ಬದುಕಲು ಅನುಗ್ರಹಿಸೆಂದು ಬೇಡುವೆನು. – ಶ್ರೀ ವಿಶ್ವೇಶತೀರ್ಥಶ್ರೀಪಾದರು



ವೃಂದಾವನಸ್ಥರಾದ ಶ್ರೀವಿಶ್ವೇಶತೀರ್ಥಶ್ರೀಪಾದರಿಗೆ ರಾಜಾಂಗಣದಲ್ಲಿ ಶ್ರೀಪಾದರುಗಳಿಂದ ಮತ್ತು ಗಣ್ಯರುಗಳಿಂದ ಶ್ರದ್ಧಾಂಜಲಿ.

# 1. ಯತಿಕುಲಚಕ್ರವರ್ತಿ

ಪಂಚಮ ಕೃಷ್ಣಪೂಜಾ ಪರ್ಯಾಯವನ್ನು ಅತ್ಯಂತ ಯಶಸ್ವಿಯಾಗಿ ನೆರವೇರಿಸಿದ ಪೇಜಾವರ ಶ್ರೀಪಾದರಿಗೆ ಪಲಿಮಾರು ಪರ್ಯಾಯದ ದರ್ಬಾರಿನಲ್ಲಿ ಶ್ರೀವಿದ್ಯಾಧೀಶತೀರ್ಥರು **'ಯತಿಕುಲಚಕ್ರವರ್ತಿ'** ಎಂಬ ಬಿರುದನ್ನು ನೀಡಿ ಗೌರವಿಸಿ ಸನ್ಮಾನಿಸಲಾಯಿತು.

ಅಪ್ರತಿಮ ಸಾಧಕರಾದ ಶ್ರೀಶ್ರೀವಿಶ್ವೇಶತೀರ್ಥರನ್ನು ಬೆಂಗಳೂರಿನ ಪ್ರಸಿದ್ಧ ವಿದ್ವಾಂಸರಾದ ಶ್ರೀರಾಮವಿಠಲಾಚಾರ್ಯರು ಪರ್ಯಾಯ ದರ್ಬಾರಿನಲ್ಲಿ ತಮ್ಮ ವಾಕ್ಕುಸುಮಗಳಿಂದ ಸ್ತುತಿಸಿದ್ದನ್ನು ಯಥಾವತ್ತಾಗಿ ಇಲ್ಲಿ ಸಂಗ್ರಹಿಸಲಾಗಿದೆ.

"ಮಾಧ್ವಸಮಾಜದ ಮುಖಂಡರಾಗಿ ಬ್ರಾಹ್ಮಣಸಮಾಜದ ಸಂಘಟನೆಯನ್ನು, ಬ್ರಾಹ್ಮಣಸಮಾಜದ ಮುಖಂಡರಾಗಿ ಹಿಂದೂಸಮಾಜದ ಸಂಘಟನೆಯನ್ನು, ಹಿಂದೂ ಸಮಾಜದ ಸಂಘಟಕರಾಗಿ ಅನ್ಯಧರ್ಮೀಯರ ಸ್ನೇಹವನ್ನೂ ಗಳಿಸುವ, ಒಬ್ಬ ಸನ್ಯಾಸಿಯಾಗಿ ಗೃಹಸ್ಥರ ಸಂಸಾರದ ರಗಳೆಗಳನ್ನು ಪರಿಹರಿಸಲು ಸ್ಪಂದಿಸುವ ಅವರ ವ್ಯಕ್ತಿತ್ವಕ್ಕೆ ಬೆರಗಿನ ಅಭಿವಂದನೆ.

ತಾವು ಸದಾ ಚಕ್ರವರ್ತಿಗಳೇ, ನೆಲದಲ್ಲಿ ಕಡಿಮೆ, ವಾಹನದಲ್ಲಿ ಹೆಚ್ಚು. ಐದನೆಯ ಪರ್ಯಾಯವನ್ನು ನಡೆಸಿ ಯತಿಕುಲಚಕ್ರವರ್ತಿ ಎಂಬ ಬಿರುದನ್ನು ಪಡೆದದ್ದು ನಿಮ್ಮ ವ್ಯಕ್ತಿತ್ವಕ್ಕೆ ಶ್ರೀಕೃಷ್ಣನ ಅನುಮೋದನೆಯು ದೊರೆತಂತೆ. ನಾವು ಆರೋಗ್ಯವಾಗಿರುವಾಗಲೇ ಸದಾಚಾರವನ್ನು ಮರೆಯುವಂತವರು. ಸ್ವಲ್ಪ ಅನಾರೋಗ್ಯವಾದರಂತೂ ಆಚಾರವನ್ನು ಬಿಡಲು ದೊಡ್ಡ ಕಾರಣ ಸಿಕ್ಕ ಸಂತೋಷಪಡುವವರು. ತಾವು ದೈಹಿಕ ವಿಶ್ರಾಂತಿಯ ಅವಶ್ಯಕತೆ ಇದ್ದಾಗಲೂ ಜಪ-ಪೂಜೆ-ಪಾಠ-ಪಾರಾಯಣಗಳನ್ನು ಜನರ ಭೇಟಿಗಳನ್ನು ಬಿಡದವರು. ತಮ್ಮ ಧರ್ಮನಿಷ್ಠೆಗೆ ಸಹಸ್ರಾರು ಪ್ರಣಾಮಗಳು.

ಪರ್ಯಾಯವನ್ನು ಮುಗಿಸಿದರೂ ತಮ್ಮನ್ನು ಬಿಡಲೊಲ್ಲದ ಶ್ರೀಕೃಷ್ಣನೇ ದೈಹಿಕ ವಿಶ್ರಾಂತಿಯ ನೆಪಹೇಳಿ ತಮ್ಮನ್ನು ತನ್ನ ಬಳಿಯೇ ಕೂಡಿಸಿಕೊಂಡ ಜಾಣತನದ ತಂತ್ರವನ್ನು ಹೆಣೆದಿರಬಹುದಲ್ಲವೇ? ಉಡುಪಿಯ ಕೃಷ್ಣನು

ಕೃಷ್ಣತಂತ್ರಿಯಿರಬಹುದೋ ಏನೋ? ಶ್ರೀಪಾದರರಸರು ಶ್ರೀಪಾದರಸರು ಆದ ತಮಗೆ ಎಲ್ಲಾ ಆಸ್ತಿಕರ ಪರವಾಗಿ ಅನಂತ ವಂದನೆಗಳು.

ತಾವು ಸಾಧನೆಯ ಯತಿ, ಸಂಸ್ಥಾನದ ಅಧಿಪತಿ,
ಸಂಸತ್ತಿನ ಶ್ರೀಪತಿ, ಸತ್ಸಂಸತ್ತಿನ ಶ್ರೀಮತಿ,
ಕೃತಿಯಲ್ಲಿ ತ್ರಿವಿಕ್ರಮನ ಪ್ರತಿಕೃತಿ, ಕೃಷ್ಣನಿಗೆ ಅರ್ಪಿತ ಪ್ರತೀ ಕೃತಿ.
ಜನರ ನಡುವಿದ್ದರೂ ಇಲ್ಲ ವಿಕೃತಿ,
ಸಹನೆಯ ನಗುಮೊಗವೇ ಇಲ್ಲಿ ಪ್ರಕೃತಿ,
ದೀನರ ಸಂಕಷ್ಟಕ್ಕೆ ಸ್ಪಂದಿಸುವ ಸಂಸ್ಕೃತಿ,
ಅರಿವು ಬೇಕೆನ್ನುವವರಿಗೆ ಇವರೇ ಗತಿ,
ಇವರಾಗಲು ಬಿಡುವುದಿಲ್ಲ ಯಾರಿಗೂ ಅಧೋಗತಿ,
ಇವರ ಎಲ್ಲ ಯೋಜನೆಗಳಿಂದ ಪ್ರಗತಿ,
ನಿರಂತರ ಬಯಸುವರು ಸಮಾಜದ ಉನ್ನತಿ,
ತಪ್ಪು ಮಾಡಿದವರಲ್ಲೂ ತೋರುವರು ಸಿಂಪತಿ,
ಇವರನ್ನು ನೆನೆಯಬೇಕು ದಿನಂಪ್ರತಿ,
ಇವರಲ್ಲ ಒಬ್ಬ ವ್ಯಕ್ತಿ, ಇವರು ಸಮಾಜದ ಸಂಘಟನೆಯ ಮಹಾಶಕ್ತಿ,
ಯಾರಿಗೂ ನೋವಾಗದ ಭಾವ ಅಭಿವ್ಯಕ್ತಿ,
ಇವರಲ್ಲಿ ಒಂದೊಂದು ಸಮಸ್ಯೆಗೂ ಒಂದೊಂದು ಯುಕ್ತಿ,
ಸವಿಬೆಲ್ಲದ ಪ್ರತಿ ಇವರ ಪ್ರತಿ ಉಕ್ತಿ,
ಪ್ರತಿವಾದಿಗೆ ಮಾತ್ರ ಹೊಳೆಯುವುದಿಲ್ಲ ಪ್ರತ್ಯುಕ್ತಿ,
ಭಾರತದಾದ್ಯಂತ ಇವರ ಸೇವೆಯ ವ್ಯಾಪ್ತಿ,
ಅದರಿಂದಲೇ ಇವರಿಗೆ ಸಂತೋಷದ ಪ್ರಾಪ್ತಿ,
ಇವರ ಕಾಲದಲ್ಲಿ ನಾವಿದ್ದೇವೆ ಅನ್ನುವುದೇ ತೃಪ್ತಿ,
ಇವರಿಗೆ ಸ್ವಂತ ಸಂಪತ್ತು ನಾಸ್ತಿ,
ಅಭಿಮಾನಿ ಶಿಷ್ಯಸಮೂಹವೇ ಇವರ ಆಸ್ತಿ,
ಇವರು ಸಹಬಾಳ್ವೆಯ ಸಹನಾಮೂರ್ತಿ,
ಸಾಧಕ ಚೇತನರಿಗೆ ಇವರು ಸ್ಫೂರ್ತಿ,
ಬಾನೆಲ್ಲ ತುಂಬಿದೆ ಇವರ ಕೀರ್ತಿ,

**ಇವರಿಗಿರಲಿ ಮನುಷ್ಯರ ಆಯುಷ್ಯಮಾನ ಪೂರ್ತಿ,**
**ಅದಕ್ಕೆಂದೇ ಅರ್ಪಿಸುವೆ ನತಿ ತತಿ, ಇವರ ಸಾಧನೆಯು ಅತಿ,**
**ಮಾತಿಗೊಂದು ಮಿತಿ, ಮುಗಿಸುವೆನು ಇತಿ.**

ವೈಭವದ, ಬಗೆಬಗೆಯ ಅಭಿವೃದ್ಧಿಗಳ, ಅನೇಕ ಸುಧಾಮಂಗಳಗಳ ಜ್ಞಾನಪ್ರಸಾರದ ಅಪೂರ್ವವಾದ ಐದು ಅಪರ್ಯಾಯ ಶ್ರೀಕೃಷ್ಣಪೂಜಾ ಪರ್ಯಾಯಗಳನ್ನು ಶ್ರೀಕೃಷ್ಣ–ಮುಖ್ಯಪ್ರಾಣರಲ್ಲಿ ಅರ್ಪಿಸಿ ಯತಿಕುಲಚಕ್ರವರ್ತಿಗಳು ಎನಿಸಿದ ನಿಮ್ಮ ಪಾದಾರವಿಂದಗಳಿಗೆ ಭಕ್ತಿಯ ಅಭಿವಂದನೆಗಳು.

**– ಶ್ರೀರಾಮವಿಠ್ಠಲ ಆಚಾರ್ಯ**

* * *



# 2. 'ಅವರು...ಅಮೂಲ್ಯ'



"ಪರಮಪೂಜ್ಯರು ಈವತ್ತಿನಿಂದ ಮೂರು ದಿನಗಳ ತನಕ ರಾಜಾಂಗಣಕ್ಕೆ ಸಮಯವನ್ನು ಕೊಟ್ಟಿದ್ದಾರೆ. ಅವರ ವ್ಯಾಪ್ತಿ ಇಡೀ ಜಗತ್ತಿಗೇ ಗೊತ್ತಿದೆ. ಅವರ ಆಡಳಿತ ಇಡೀ ಉಡುಪಿಯ ಮಠಕ್ಕೆ ಮಾತ್ರವಲ್ಲ; ಇಡೀ ದೇಶಕ್ಕೇ ಅವರ ಮಾರ್ಗದರ್ಶನ ಇದೆ. ಇಡೀ ಜಗತ್ತು ಅವರನ್ನು ಪ್ರತೀಕ್ಷೆ ನಿರೀಕ್ಷೆ ಮಾಡುತ್ತಲೇ ಇರುತ್ತದೆ. ನಮಗೆ ಸಮುದ್ರದ ನಿರ್ಬಂಧ ಇದೆ. ಇಲ್ಲದಿದ್ದರೆ ಅವರು ಇಡೀ ಪ್ರಪಂಚವನ್ನೇ ಸುತ್ತಾಡಿ ಬರುವವರು. ಆದರೆ ಒಂದು ಮಾತು ಸತ್ಯ. ಇಲ್ಲಿ ಕೂತು ಬರೀ ಭಾರತವನ್ನು ಮಾತ್ರವಲ್ಲ, ಇಡೀ ಪ್ರಪಂಚವನ್ನು ಆಳುವ ಪ್ರಪಂಚನಾಯಕರು, ವಿಶ್ವ ಈಶರು ನಮ್ಮ ವಿಶ್ವೇಶತೀರ್ಥರು ಎಂದು ಹೇಳಲು ನಾವು ತುಂಬ ಸಂತೋಷಪಡುತ್ತೇವೆ. ಅವರ ಮಾತು ವಿದ್ಯುತ್ ಸಂಚಾರ ಮಾಡುವ ಮಾತು. ಒಂದು ಮಾತಾಡಿದರೆ, ಹೃದಯಕ್ಕೇ, ರಕ್ತಕ್ಕೆ ಕೊಡುವ ಇಂಜೆಕ್ಷನ್ ಹಾಗೆ ಇರುವಂತಹದ್ದು, ಎಲ್ಲರ ಮನಸ್ಸಿಗೂ ಮುಟ್ಟುವಂತಹದ್ದು. ಅದು ಮಕ್ಕಳಿಗಿರಬಹುದು, ಹಿರಿಯರಿಗಿರಬಹುದು, ವಿದ್ವಾಂಸರಿಗಿರಬಹುದು.

ಶಾಸ್ತ್ರದಲ್ಲಿ ಅಷ್ಟೇ ಆಳ, ಪ್ರವಚನದಲ್ಲಿ ಅಷ್ಟೇ ನಿರಾಳರಾಗಿರುವಂತಹ, ಎಲ್ಲರಿಗೂ ಮುಟ್ಟುವ ಒಳ್ಳೆಯ ಸಂದೇಶಗಳನ್ನು ಕೊಡುವ ಪ್ರವಚನಕ್ಕೆ ಬಂದ ಪೂಜ್ಯರಿಗೆ ಅನಂತಾನಂತ ಭಕ್ತಿಯ ಪ್ರಣಾಮಗಳನ್ನು ಸಲ್ಲಿಸುತ್ತೇವೆ. ಯಾವುದೇ ಸಮಯದ ನಿರ್ಬಂಧ ಇಲ್ಲದೇ ಅವರ ಪ್ರವಚನ ನಮಗೆ ಸಿಗಬೇಕು. ಅವರು ನಾಲ್ಕು ಮಾತು ಹೇಳಿದರೂ, ಅದು ನಮಗೆ ಅಮೂಲ್ಯ".

**[ದಿನಾಂಕ 19-12-2019 ರಂದು ಉಡುಪಿಯ ರಾಜಾಂಗಣದಲ್ಲಿ ಶ್ರೀವಿಶ್ವೇಶತೀರ್ಥರು ತಮ್ಮ ಕೊನೆಯ ಪ್ರವಚನವನ್ನು ಮಾಡಿದ್ದರು. ಆ ಸಂದರ್ಭದಲ್ಲಿ ಪರ್ಯಾಯ ಪಲಿಮಾರುಮಠದ ಹಿರಿಯ ಪೀಠಾಧೀಶರಾದ ಶ್ರೀವಿದ್ಯಾಧೀಶತೀರ್ಥರು ಶ್ರೀವಿಶ್ವೇಶತೀರ್ಥರ ಬಗ್ಗೆ ನುಡಿದ ಪ್ರವಚನ ಸಂಗ್ರಹ ಇಲ್ಲದೆ.]**

**ಕೃಪೆ : ತತ್ತ್ವಚಂದ್ರಿಕಾ**

* * *

# 3. ಶ್ರೀ ವಿಶ್ವೇಶತೀರ್ಥರು ನಡೆಸಿಕೊಟ್ಟ ರಾಜಾಂಗಣದ ಅಂತಿಮ ಪ್ರವಚನ



(19-12-2019 ರಂದು ಉಡುಪಿಯ ರಾಜಾಂಗಣದಲ್ಲಿ ತಮ್ಮ ಜೀವನಯಜ್ಞದ ಅವಭೃಥವೆಂಬಂತೆ ಮಹಾಭಾರತದ ಉಪಾಖ್ಯಾನಗಳ ಕುರಿತು ಕೊನೆಯ ಪ್ರವಚನವನ್ನು ನಡೆಸಿಕೊಟ್ಟಿದ್ದರು. ಅಂದಿನಿಂದ ಮೂರು ದಿನಗಳ ಕಾಲ ಅವರು ಪ್ರವಚನ ನಡೆಸಿಕೊಡುವವರಿದ್ದರು. ದೈವಸಂಕಲ್ಪವನ್ನು ಅವರು ಅರಿತಿದ್ದರೋ ಎಂಬಂತೆ, ಅಂದೇ ಮೂರು ಉಪಾಖ್ಯಾನಗಳ ಪ್ರವಚನ ಮಾಡುವ ಮೂಲಕ ತಮ್ಮ ಪ್ರವಚನವನ್ನೂ ಪರಿಪೂರ್ಣವಾಗಿಸಿದ್ದರು ಎಂದು ಭಾಸವಾಗುತ್ತದೆ. ಅವರು ನೀಡಿದ ಮೂರು ಉಪಾಖ್ಯಾನಗಳನ್ನು ಅವರದೇ ಮಾತಿನಲ್ಲಿ ಬಗ್ಗೆ ಮಹಾಭಾರತ ಬೆಳಕು ಚೆಲ್ಲಿದೆ. ಅದರಂತೆ ಅನೇಕ ಉಪಾಖ್ಯಾನಗಳ ಮೂಲಕವೂ ಸಹ ಸಂದೇಶವನ್ನು ನೀಡಿದೆ.)

ಮಹಾಭಾರತದ ಉಪಾಖ್ಯಾನಗಳಲ್ಲಿ ಈವತ್ತಿನ ದಿನಕ್ಕೂ ಕೂಡ ಅವಶ್ಯಕವಾದ ಅನೇಕ ಸಂದೇಶಗಳು ಇವೆ. ಮಹಾಭಾರತದಲ್ಲಿ ಪಾಂಡವರ ಕಥೆ, ಅವರ ಪಾತ್ರ ಪರಿಚಯ, ಅದರಲ್ಲಿನ ಒಬ್ಬೊಬ್ಬ ವ್ಯಕ್ತಿತ್ವದ ವಿಶೇಷಗಳು; ಕೆಲವರಲ್ಲಿ ಗುಣಗಳೂ ಉಂಟು, ದೋಷಗಳೂ ಉಂಟು. ಕೆಲವರಲ್ಲಿ ಎಲ್ಲವೂ ದೋಷಗಳೇ. ಕೆಲವರಲ್ಲಿ ಯಾವ ದೋಷವೂ ಇಲ್ಲ. ಎಲ್ಲ ತರಹದ

ಪಾತ್ರಗಳನ್ನೂ ಅಲ್ಲಿ ಕಾಣಬಹುದು. ಎಲ್ಲ ಪಾತ್ರಗಳಲ್ಲಿ ಭಿನ್ನಭಿನ್ನವಾದ ವ್ಯಕ್ತಿತ್ವ, ಅದನ್ನು ಆತ್ಮನಿರೀಕ್ಷಣೆ ಮಾಡಬೇಕು. ಒಳ್ಳೆಯದು ಹಾಗೂ ಕೆಟ್ಟದ್ದರ ಸಂಘರ್ಷದ ಬಗ್ಗೆ ಮಹಾಭಾರತ ಬೆಳಕು ಪ್ರಸ್ತುತಪಡಿಸಲಾಗಿದೆ.

## ಉಪಾಖ್ಯಾನ – 1

### ಅಗಸ್ತ್ಯರ ಆದರ್ಶ

ಅಗಸ್ತ್ಯರು ದೊಡ್ಡ ತಪಸ್ವಿಗಳು. ಅವರ ಪತ್ನಿ ಲೋಪಾಮುದ್ರಾ, ಒಳ್ಳೆಯ ಭಕ್ತಿಯಿಂದ ಪತಿಯ ಸೇವೆಯನ್ನು ಮಾಡುತ್ತಿದ್ದಳು. ಭಕ್ತಿ, ಸೇವೆ, ತ್ಯಾಗ ಎಲ್ಲದರಿಂದಲೂ ಆದರ್ಶ ಪತಿವ್ರತಾ ಮಹಿಳೆ ಅವಳು. ಅವಳ ಸೇವೆಯನ್ನು ಕಂಡು ಅಗಸ್ತ್ಯರಿಗೆ ಬಹಳ ಸಂತೋಷವಾಯಿತು. 'ನಿನಗೇನಾದರೂ ಭೌತಿಕವಾದ ಅಪೇಕ್ಷೆ ಇದ್ದರೆ ಕೇಳು' ಎಂದರು. ಅವಳು ಹೇಳುತ್ತಾಳೆ 'ಒಳ್ಳೆಯ ವಸ್ತ್ರಭೂಷಣಗಳನ್ನು ಹೊಂದಬೇಕೆಂಬ ಆಸೆಯಿದೆ'. ಸಾಮಾನ್ಯವಾಗಿ ಎಲ್ಲ ಮಹಿಳೆಯರಿಗೂ ಇರುವ ಆಸೆ ಇದು. ಪತ್ನಿಯ ಬಯಕೆಯನ್ನು ಪೂರೈಸಲು ಅವರು ತಪಃಶಕ್ತಿಯನ್ನು ಬಳಸಲಿಲ್ಲ. ಅದಕ್ಕೆ ಬದಲು ರಾಜನನ್ನು ಕೇಳೋಣ ಎಂದುಕೊಂಡು, ರಾಜರ ಬಳಿ ಹೋಗಿ, ತಮ್ಮ ಪತ್ನಿಯ ಆಸೆಗೆ ತಕ್ಕಂತೆ ಏನಾದರೂ ಕೊಡಬೇಕು ಎನ್ನುತ್ತಾರೆ. ಆದರೆ ರಾಜ! ನಿನ್ನ ಪ್ರಜೆಗಳಿಗೆ ಯಾವುದೇ ತೊಂದರೆ ಆಗಬಾರದು. ನಿನ್ನ ರಾಜ್ಯದ ಆಯ-ವ್ಯಯದಲ್ಲಿ ಉಳಿದರೆ ಮಾತ್ರ ಕೊಡಬೇಕು. ಎಂಬ ನಿಬಂಧನೆಯನ್ನು ಹಾಕುತ್ತಾರೆ. ಪ್ರಜೆಗಳ ಕಲ್ಯಾಣಕ್ಕೆ ತೊಂದರೆ ಆಗಬಾರದು. ಯಾವ ರಾಜರ ಬಳಿಯೂ ಉಳಿತಾಯವಿಲ್ಲ. 'ನಿಮ್ಮ ಅಪ್ಪಣೆ ಇದ್ದರೆ, ಪ್ರಜೆಗಳಿಗೆ ಕೊಡಬೇಕಾದ್ದರಲ್ಲಿ ತಡೆಹಿಡಿದು ಸ್ವಲ್ಪ ಕೊಡಬಹುದು' ಎಂದು ಕೆಲವು ರಾಜರು ಹೇಳಿದರು. ಅಗಸ್ತ್ಯರು ಸಮ್ಮತಿಸಲಿಲ್ಲ. 'ಸಜ್ಜನರಿಂದ ಸುಲಿಗೆ ಮಾಡುವ ಅಸುರ ಸ್ವಭಾವದ ದರೋಡೆಕೋರರನ್ನು ನಿಮ್ಮ ತಪಸ್ಸಿನಿಂದ ನಿಗ್ರಹಿಸಿ, ಅವರಿಂದ ಬೇಕಾದರೆ ಪಡೆಯಬಹುದು' ಎಂಬ ಸಲಹೆಯನ್ನು ಕೆಲವರು ನೀಡಿದರು. ಅದರಂತೆ ಲೋಕಕಂಟಕರಾದ ವಾತಾಪಿ-ಇಲ್ವಲ ಎಂಬವರನ್ನು ತಮ್ಮ ತಪಃಶಕ್ತಿಯಿಂದ ಸಂಹಾರ ಮಾಡಿ, ಅವರ ಬಳಿ ಇದ್ದದ್ದರಲ್ಲಿ ತಮ್ಮ ಪತ್ನಿಗೆ ಎಷ್ಟು ಬೇಕೋ, ಅಷ್ಟನ್ನು ಮಾತ್ರ ಉಪಯೋಗಿಸಿ, ಉಳಿದದ್ದೆಲ್ಲವನ್ನು ಜನತೆಗೇ ದಾನ ಮಾಡಿದರು. ಪ್ರಜೆಗಳ ಕಲ್ಯಾಣಕ್ಕೆ

ಯಾವುದೇ ಚ್ಯುತಿಯನ್ನು ಮಾಡಬಾರದೆಂಬ ಎಚ್ಚರ ರಾಜರಿಗೆ ಇರಬೇಕು. ಇಂದು ಹೆಂಗಸರ 'ಡಿಮಾಂಡ್'ಗಳನ್ನು ಪೂರೈಸಲಾಗದೆ ಪೂರೈಸಲಾಗದೇ, ಗಂಡಸರು ಭ್ರಷ್ಟಾಚಾರಕ್ಕೆ ತೊಡಗುತ್ತಾರೆ. ಆದರೆ ನಮ್ಮ ಋಷಿಮುನಿಗಳು, ಋಷಿಪತ್ನಿಯರು, ರಾಜರು ಎಂತಹ ಆದರ್ಶ ಜೀವನವನ್ನು ನಡೆಸುತ್ತಿದ್ದರು ಎಂಬುದು ಇದರಿಂದ ಗೊತ್ತಾಗುತ್ತದೆ.

## ಉಪಾಖ್ಯಾನ – 2

### ಭೀಮನ ಆದರ್ಶ ರಾಜಧರ್ಮ

ಇನ್ನೊಂದು ಉಪಾಖ್ಯಾನ ಭೀಮಸೇನನ ಆದರ್ಶಕ್ಕೆ ಸಂಬಂಧಿಸಿದ್ದು.

ಭೀಮನ ಮಾತು, ವಿದುರನ ಉಪದೇಶದಿಂದ ಧೃತರಾಷ್ಟ್ರ ಅರಣ್ಯಕ್ಕೆ ಹೋಗಬೇಕೆಂದು ಮನಸ್ಸು ಮಾಡಿದ. ಅರಣ್ಯಕ್ಕೆ ಹೋಗುವ ಮುನ್ನ ಸತ್ತ ತನ್ನ ಮಕ್ಕಳ ನೆಪದಲ್ಲಿ ಶ್ರಾದ್ಧ ದಾನಾದಿಗಳನ್ನು ಮಾಡಬೇಕೆಂದು ಕೊಂಡ. 'ನನ್ನ ಮಕ್ಕಳಿಗೆ ಹಿತವಾಗಲೆಂದು ದಾನ-ಧರ್ಮ ಮಾಡಬೇಕು. ಅದಕ್ಕೆ ಹಣ ಬೇಕು' ಎಂದು ಧರ್ಮರಾಜನಲ್ಲಿ ಕೇಳಿದ. ಭೀಮಸೇನನನ್ನು ಕರೆದು ಧರ್ಮರಾಜ ಹೇಳಿದ 'ನಮ್ಮ ದೊಡ್ಡಪ್ಪ ಕೇಳುತ್ತಿದ್ದಾನೆ. ಅವನ ಕೊನೆಯ ಆಸೆಯನ್ನು ಪೂರೈಸೋಣ'. ಅದಕ್ಕೆ ಭೀಮಸೇನ ಒಪ್ಪಲೇ ಇಲ್ಲ. 'ಎಂತಹ ದುರ್ಯೋಧನ! ಕೋಟಿ ಕೋಟಿ ಜನರ ಹತ್ಯೆಗೆ ಕಾರಣನಾದವ ಅವನು. ಅವನು ಹಟ ಹಿಡಿದದ್ದರಿಂದ ಎಷ್ಟು ರಾಜರ ಪ್ರಜೆಗಳ ಹತ್ಯೆಯಾಗಿದೆ! ಅವನ ಹೆಸರಿನಲ್ಲಿ ದಾನಧರ್ಮ ಮಾಡಲು ಸರ್ಕಾರದ ಹಣವನ್ನು ಕೊಡುವುದೇ ಇಲ್ಲ'.

ಸತ್ತ ಮೇಲಾದರೂ ಕನಿಕರ ಬೇಡವೇ! ಸತ್ತ ಮೇಲೂ ಈ ಭೀಮನಿಗೆ ದ್ವೇಷವೇ? ಎಂದು ಕೆಲವರಿಗೆ ಅನಿಸಬಹುದು. ಆದರೆ ಭೀಮಸೇನ ಹೇಳಿದ– 'ಪ್ರಜೆಗಳ ಕಲ್ಯಾಣಕ್ಕೆ ಮೀಸಲಾದ ಹಣವನ್ನು ಇಂತಹ ದುಷ್ಟರಿಗಾಗಿ ಬಳಸಬಾರದು'. ದಾನ-ಭೋಗಕ್ಕಾಗಿ ಹಣವನ್ನು ಬೇಕಾದರೆ ಖರ್ಚು ಮಾಡಿ; ಅದಕ್ಕಾಗಿ ಸರ್ಕಾರ ಬಿಡಿಗಾಸನ್ನೂ ಬಳಸಬಾರದು.

ತಮ್ಮ ತೀಟೆಯನ್ನು ತೀರಿಸಿಕೊಳ್ಳಲು ಸರ್ಕಾರದ ಹಣವನ್ನು ತಮ್ಮ ಸ್ವಂತಕ್ಕೆ ಬಳಸಿಕೊಳ್ಳುವ ಇಂದಿನ ಎಷ್ಟೋ ರಾಜಕಾರಣಿಗಳು ಇದನ್ನು ಕೇಳಿದ ಮೇಲಾದರೂ ಎಚ್ಚೆತ್ತುಕೊಳ್ಳಬೇಕು.

## ಉಪಾಖ್ಯಾನ – 3

## ಇಂದ್ರದ್ಯುಮ್ನನ ಪುಣ್ಯದ ಫಲ

ಇಂದ್ರದ್ಯುಮ್ನ ಎಂಬ ರಾಜ; ಒಳ್ಳೆಯ ಭಕ್ತ. ಅವನು ಮೃತನಾದ. ಸ್ವರ್ಗದಲ್ಲೆಲ್ಲ ಸುಖವನ್ನು ಅನುಭವಿಸುತ್ತಿದ್ದ. 'ನಿನ್ನ ಪುಣ್ಯವೆಲ್ಲ ಖರ್ಚಾಗಿದೆ. ಈಗ ಪುನಃ ಭೂಮಿಗೆ ಇಳಿಯಬೇಕು' ಎಂದು ದೇವತೆಗಳು ಹೇಳಿದರು. ಅದರಂತೆ ಭೂಮಿಗೆ ಬಿದ್ದ. ಅಲ್ಲೆಲ್ಲ ನೋಡಿದ. ತನ್ನ ಪರಿಚಯ ಯಾರಿಗಾದರೂ ಉಂಟೋ ಎಂದು ವಿಚಾರ ಮಾಡಿದ. ಅಲ್ಲೊಂದು ಗೂಬೆಯಿತ್ತು. 'ನಾನು ಇಂದ್ರದ್ಯುಮ್ನ ಮಹಾರಾಜ. ನನ್ನ ಪರಿಚಯ ನಿನಗೆ ಉಂಟೋ?' ಎಂದು ಅದನ್ನು ಕೇಳಿದ. 'ನನಗೇನೂ ಪರಿಚಯವಿಲ್ಲ. ನನಗಿಂತ ಒಂದು ಹಳೆಯ ಬಕಪಕ್ಷಿ ಇದೆ. ಅದು ನಿನ್ನ ಪರಿಚಯವನ್ನು ಹೇಳಬಹುದು' ಎಂದು ಅದು ಹೇಳಿತು. ಬಕಪಕ್ಷಿಯ ಬಳಿ ಹೋದರು. ಆ ಬಕಪಕ್ಷಿಯೂ 'ನನಗೆ ತಿಳಿಯದು. ಇಲ್ಲೇ ಸಮೀಪದ ಸರೋವರದಲ್ಲಿ ಒಂದು ಆಮೆಯಿದೆ. ಅದಕ್ಕೆ ಗೊತ್ತಿರಬಹುದು' ಎಂದು ಹೇಳಿತು. ಆ ಆಮೆಯನ್ನು ಕೇಳಿದ. ಅದು ನೋಡಿತು. ಕಣ್ಣೀರು ಹರಿಸಿತು. 'ನಿನ್ನ ಪರಿಚಯ ಮರೆಯಲಿಕ್ಕೆ ಸಾಧ್ಯವುಂಟೋ? ಈ ಸರೋವರವನ್ನು ನಿರ್ಮಾಣ ಮಾಡಿದ್ದೇ ನೀನು. ಎಷ್ಟೋ ಜನರಿಗೆ, ಮೀನುಗಳಿಗೆ, ಪಶುಪಕ್ಷಿಗಳಿಗೆ ಈ ಸರೋವರ ಆಶ್ರಯ ಕೊಟ್ಟಿದೆ'. ಅಷ್ಟು ಹೇಳಿದ್ದೇ ತಡ, ಮೇಲಿನಿಂದ ವಿಮಾನ ಬಂತು. ದೇವದೂತರು ಹೇಳಿದರು 'ನಮ್ಮ ಲೆಕ್ಕಾಚಾರ ತಪ್ಪಾಯಿತು. ಒಂದು ಆಮೆ ನಿನ್ನನ್ನು ನೋಡಿ, ನಿನ್ನ ಉಪಕಾರವನ್ನು ಸ್ಮರಿಸುತ್ತಿದೆ. ನಿನ್ನ ಪುಣ್ಯ ಖರ್ಚಾಗಿಲ್ಲ. ಪುಣ್ಯ ಇನ್ನೂ ಇದೆ' ಎಂದು ಹೇಳಿ ಸ್ವರ್ಗಕ್ಕೆ ಮತ್ತೆ ಆಹ್ವಾನಿಸಿದರು. ಎಂತಹ ಕಥೆ! ನಾವೆಲ್ಲ ಧರ್ಮಾಚರಣೆ ಮಾಡಿ, ಮುಂದಿನ ಪೀಳಿಗೆಗೆ ಅದರ ಸ್ಮರಣೆ ಇರುವಂತಹ ಕಾರ್ಯ ಮಾಡಿದರೆ ನಮಗೆಲ್ಲ ಸ್ವರ್ಗದಲ್ಲಿ ಭದ್ರಸ್ಥಾನ ಎಂಬಂತಹ ಭರವಸೆಯನ್ನು ಈ ನೀಡುತ್ತದೆ.

**ಕೃಪೆ: ತತ್ತ್ವಚಂದ್ರಿಕಾ**

* * *

## 4. ಈಶ ಸೇವೆ ದೇಶ ಸೇವೆಗಳಿಗೆ ತಮ್ಮನ್ನು ಮುಡುವಾಗಿಟ್ಟಿದ್ದ ಶ್ರೀ ವಿಶ್ವೇಶತೀರ್ಥರು

# ಇತಿಹಾಸದ ಪುಟಗಳಲ್ಲಿ ಸೇರಿದ ಪರಿ

### ದೈವಸಂಕಲ್ಪ

ಶ್ರೀವಿಶ್ವೇಶತೀರ್ಥ ಶ್ರೀಪಾದರು 16.12.2019 ರಂದು ಮಂತ್ರಾಲಯ ಶ್ರೀಮಠವು ರಾಯಚೂರಿನಲ್ಲಿ ನಡೆಸಿದ ಶ್ರೀಮನ್ನ್ಯಾಯಸುಧಾಮಂಗಲದ ಕಾರ್ಯಕ್ರಮದಲ್ಲಿ ಭಾಗವಹಿಸಿ ಅಪರಾಹ್ನ ತಿರುಪತಿ ಶ್ರೀನಿವಾಸನ ದರ್ಶನಕ್ಕೆ ಹೊರಟರು.



17 ರಂದು ಶ್ರೀನಿವಾಸನ ದರ್ಶನ ಮುಗಿಸಿ ತಮ್ಮ ಹುಟ್ಟೂರು ರಾಮಕುಂಜಕ್ಕೆ ತೆರಳಿದರು.

ಅಲ್ಲಿಂದ ಪಾಜಕದಲ್ಲಿ ಶ್ರೀಮದಾಚಾರ್ಯರ ದರ್ಶನ.

ಅಂದೇ ಸಂಜೆ (19.12.2019) ಉಡುಪಿಯ ರಾಜಾಂಗಣದಲ್ಲಿ ಅವರಿಂದ ಮಹಾಭಾರತ ಉಪನ್ಯಾಸ.

ಆ ಉಪನ್ಯಾಸ ಅತಿ ಪ್ರಯಾಸ ಪೂರ್ವಕವಾಗಿದ್ದು, ನೋಡುವವರಿಗೆ ಕನಿಕರ ಹುಟ್ಟಿಸುವಂತಿತ್ತು. ಆದರೂ ಅರ್ಧಗಂಟೆ ಉಪನ್ಯಾಸವನ್ನು ನಡೆಸಿದರು. ಇದು ಅವರ ಕೊನೆಯ ಉಪನ್ಯಾಸವಾಗಿ ದೈವೇಚ್ಛೆ ದಾಖಲಿಸಿತ್ತು.

ಅಂದು ಸಂಜೆ ಅವರನ್ನು ಪರೀಕ್ಷಿಸಿದ ವೈದ್ಯರು ಕೂಡಲೇ ಆಸ್ಪತ್ರೆಗೆ ದಾಖಲಾಗುವಂತೆ ಸೂಚಿಸಿದ್ದರು. ಶ್ರೀಗಳವರು "ಇದೊಂದು ದಿನ ನನ್ನನ್ನು ಬಿಡಿ, ನಾಳೆ ನೀವು ಹೇಳಿದಂತೆ ಕೇಳುತ್ತೇವೆ" ಎಂದಿದ್ದರು. ಆ ದಿನ ರಾತ್ರಿ ಎರಡು ಗಂಟೆಗೆ ಅವರು ತೀರಾ ಅಸ್ವಸ್ಥರಾಗಿ ಪ್ರಜ್ಞೆ ತಪ್ಪಿದ್ದರು. ಅವರ ಜೊತೆಯಲ್ಲಿ ಮಲಗಿದ್ದ ವಿದ್ಯಾರ್ಥಿಗಳು ವಿಷಯ ತಿಳಿದು ವೈದ್ಯರನ್ನು ಸಂಪರ್ಕಿಸಿದರು. ಕೂಡಲೇ ಆಸ್ಪತ್ರೆಗೆ ದಾಖಲಿಸಲಾಯಿತು. ವೈದ್ಯರ ಸಲಹೆಯ ಮೇರೆಗೆ ಅಲ್ಲಿಂದ ಮಣಿಪಾಲಕ್ಕೆ ವರ್ಗಾಯಿಸಲಾಯಿತು. ಅಲ್ಲಿ ಕೃತಕ ಉಸಿರಾಟದ ವ್ಯವಸ್ಥೆಯನ್ನು ಅಳವಡಿಸಿ, ತುರ್ತು ನಿಗಾ ವಿಭಾಗದಲ್ಲಿ ಇಡಲಾಯಿತು. ಅವರಿಗೆ 'ನ್ಯುಮೋನಿಯಾ' ಆಗಿದೆ ಎಂದು ವೈದ್ಯರು ತಿಳಿಸಿ, ಅದಕ್ಕೆ ಸೂಕ್ತ ಚಿಕಿತ್ಸೆಯನ್ನು ನೀಡಲಾರಂಭಿಸಿದರು. ಆದರೆ ವೈದ್ಯರ ತಂಡ ಶ್ರೀಗಳವರು ತುಂಬಾ ಅಪಾಯದ ಸ್ಥಿತಿಯಲ್ಲಿದ್ದಾರೆಂದು ತಿಳಿಸಿತು. ಇದೇ ವೈದ್ಯರ ನಿರಂತರ ಪ್ರಯತ್ನದಿಂದ ಪಕ್ಕೆಗಳಲ್ಲಿ ತುಂಬಿದ್ದ ಕಫವು ನೀರಾದರೂ ಶ್ರೀಗಳವರ ಮೆದುಳು ನಿರೀಕ್ಷಿತ ಮಟ್ಟದಲ್ಲಿ ಕೆಲಸ ಮಾಡುತ್ತಿರಲಿಲ್ಲ. ಹೀಗಾಗಿ ಸರಿಯಾದ ನಿರ್ದೇಶನವಿಲ್ಲದೆ ಶ್ವಾಸಕೋಶದ ಕೆಲಸ ತೃಪ್ತಿಕರವಾಗಿ ನಡೆಯುತ್ತಿರಲಿಲ್ಲ. ಇದರಿಂದ ವೈದ್ಯರು ನಿರಾಶೆಗೆ ಒಳಗಾಗಿ ಆಸ್ಪತ್ರೆಯಿಂದ ಮಠಕ್ಕೆ ಕಳುಹಿಸಿಕೊಡುವ ತಮ್ಮ ನಿರ್ಧಾರವನ್ನು ಶ್ರೀವಿಶ್ವಪ್ರಸನ್ನತೀರ್ಥರಿಗೆ ತಿಳಿಸಿದರು.

## ಶ್ರೀಗಳವರಿಗಾಗಿ ಪ್ರಾರ್ಥನೆ

ಒಂಭತ್ತು ದಿನಗಳಿಂದ ಪ್ರಜ್ಞಾಹೀನ ಸ್ಥಿತಿಯಲ್ಲೇ ಇದ್ದ ಶ್ರೀಗಳವರ ದೈಹಿಕ ಸ್ಥಿತಿ ಕ್ಷೀಣಿಸುತ್ತಲೇ ಬಂದಿತ್ತು. ದೇಶದಾದ್ಯಂತ ಶ್ರೀಗಳವರ ಆರೋಗ್ಯಕ್ಕಾಗಿ ಪ್ರಾರ್ಥನೆ ನಡೆದಿತ್ತು. ವಿದ್ಯಾಪೀಠದ ಎಲ್ಲ ವಿದ್ಯಾರ್ಥಿಗಳೂ ಅಧ್ಯಾಪಕರೂ ಸೇರಿ ಪ್ರತಿದಿನ ಒಂದು ಸಾವಿರಬಾರಿ ವಿಷ್ಣುಸಹಸ್ರನಾಮ ಪಾರಾಯಣ,

ಮನ್ಯುಸೂಕ್ತ-ವಾಯುಸ್ತುತಿಗಳ ಪುರಶ್ಚರಣೆ ನಡೆಸುತ್ತಿದ್ದರು. ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಉಜ್ಜೈನಿಯ ಮಹಾಕಾಲೇಶ್ವರನ ಸನ್ನಿಧಿಯಲ್ಲಿ ವೇದಪಾರಾಯಣ, ವಿಶೇಷ ಪೂಜೆ 28 ರಂದು ನಡೆದಿತ್ತು. ಕಂಚಿ ಕಾಮಕೋಟಿ ಪೀಠದ ಶ್ರೀವಿಜಯೀಂದ್ರಸರಸ್ವತಿಯವರು ಕಾಮಾಕ್ಷಿ ದೇವಿಯನ್ನು ಪ್ರಾರ್ಥಿಸಿ ಪ್ರಸಾದ ಕಳಿಸಿದ್ದರು. ಗೋವಾ ಶ್ರೀಗೌಡಪಾದಾಚಾರ್ಯ ಸಂಸ್ಥಾನಾಧೀಶರು ಪ್ರಾರ್ಥಿಸಿ ಪ್ರಸಾದ ಕಳಿಸಿದ್ದರು. ಆದರೂ ಭಗವಂತನ ಸಂಕಲ್ಪ ಬೇರೆಯೇ ಆಗಿತ್ತು. ತಜ್ಞ ವೈದ್ಯರು, ಬೆಂಗಳೂರು ಹಾಗೂ ದಿಲ್ಲಿಯ ಏಮ್ಸ್ ವೈದ್ಯರ ಸಲಹೆಯಂತೆ ನಿರಂತರ ಯತ್ನ ನಡೆಸಿದರೂ ಶನಿವಾರ ಶ್ರೀಗಳವರ ಆರೋಗ್ಯ ಸ್ಥಿತಿ ಮತ್ತುಷ್ಟು ಕ್ಷೀಣಿಸಿತ್ತು. ಮೆದುಳು ಕ್ಷೀಣಿಸುತ್ತುಲೇ ಬರುತ್ತಿತ್ತು.

## ಮರಳಿ ಮಠಕ್ಕೆ

ಪೂರ್ವ ನಿರ್ಧಾರದಂತೆ ದಿ.29 ರಂದು ಬೆಳಿಗ್ಗೆ 7.10ಕ್ಕೆ ವೈದ್ಯರ ತಂಡ ಉಡುಪಿಯ ಪೇಜಾವರಮಠಕ್ಕೆ ಶ್ರೀಗಳವರನ್ನು ತಂದಿತು. ಕಿರಿಯ ಶ್ರೀಪಾದರು ಮುಂಜಾನೆ 5.30ಕ್ಕೆ ಸಂಸ್ಥಾನದ ಪೂಜೆ ಮುಗಿಸಿದ್ದರು. 7.15ಕ್ಕೆ ಹಿರಿಯ ಶ್ರೀಪಾದರಿಂದ ಪಟ್ಟದ ದೇವರಿಗೆ ಕೊನೆಯ ಮಂಗಳಾರತಿ ನಡೆದು ಕಿರಿಯ ಯತಿಗಳು ತೀರ್ಥ-ಗಂಧವನ್ನು ನೀಡಿದರು. ಶ್ರೀಪೇಜಾವರ ಮಠದ ಶ್ರೀಗಳವರ ಕೊಠಡಿಯಲ್ಲಿ ಮಂಚದ ಮೇಲೆ ಉಸಿರಾಟ ಮಾತ್ರವಿದ್ದ ಶ್ರೀಗಳವರು ವೈದ್ಯರ ಅಧೀನದಲ್ಲೇ ಮಲಗಿದ್ದರು. ವೈದ್ಯರ ಅನುಮತಿ ಇಲ್ಲದೇ ಶ್ರೀಗಳವರ ದರ್ಶನವನ್ನು ಯಾರೂ ಮಾಡುವಂತಿರಲಿಲ್ಲ.



## ಜಪ–ಪಾರಾಯಣ

29ರಂದು ಬೆಳಿಗ್ಗೆ 7.00 ಗಂಟೆಗೇ ಉಡುಪಿಯ ರಥಬೀದಿಯನ್ನು ಯಾರೂ ಪ್ರವೇಶಿಸುವಂತಿರಲಿಲ್ಲ. ಅಲ್ಲಿ ಎಲ್ಲ ಕಡೆ ಪೊಲೀಸರ ಸರ್ಪಗಾವಲಿತ್ತು. ಪೇಜಾವರ ಮಠವನ್ನು ಪೊಲೀಸ್ ಪಡೆ ಸುತ್ತುವರಿದಿತ್ತು. ಆದರೂ ಪೇಜಾವರ ಮಠದ "ಪೌಳಿ" ಅಭಿಮಾನಿಗಳಿಂದ ತುಂಬಿತ್ತು. ಪರ್ಯಾಯ ಶ್ರೀಪಲಿಮಾರು ಮಠಾಧೀಶರು, ಸೋದೆ ಮಠಾಧೀಶರು, ರಾಮಚಂದ್ರಾಪುರ ಮಠಾಧೀಶರು ಹೀಗೆ ಅನೇಕ ಯತಿಗಳು, ವಿದ್ವಾಂಸರು, ಮುತ್ತೈದೆಯರು ತುಂಬಿದ್ದರು. ಎಲ್ಲರೂ ಒಕ್ಕೊರಲಿನಿಂದ ಸ್ತೋತ್ರ, ಸೂಕ್ತ, ನಾಮಮಂತ್ರಗಳನ್ನು ಜಪಿಸುತ್ತಲಿದ್ದರು.

## ಕೊನೆಯ ಗ್ರಾಸ

ಸುಮಾರು 8 ಗಂಟೆಗೆ ಶ್ರೀವಿಶ್ವಪ್ರಸನ್ನತೀರ್ಥರು ರಾಮದೇವರಿಗೆ ಸಮರ್ಪಿಸಿದ ಬೆಳ್ಳಿಯ ಸಣ್ಣ ಬಟ್ಟಲಿನಲ್ಲಿ ಸಂಗ್ರಹಿಸಿದ್ದ ಜೇನುತುಪ್ಪವನ್ನು ಹಿಡಿದು ಶ್ರೀಗಳವರ ಕೊಠಡಿಗೆ ತೆರಳಿದರು. ಬಟ್ಟಲು ಜೇನುತುಪ್ಪವನ್ನು ಶ್ರೀಗಳವರ ಬಾಯಿಗೆ ಸುರಿದರು. ಅದು ಗಂಟಲಲ್ಲಿ ಇಳಿದಾಗ ನೋವಿನ ಸಂವೇದನೆಯು ಶ್ರೀಗಳವರ ಭುಜದಲ್ಲಿ ಆದುದನ್ನು ಕಂಡು ನನಗೆ ಗಂಟಲು ತುಂಬಿ ಬಂತು. ಪರ್ಯಾಯ ಶ್ರೀಪಾದರು ಸಾಷ್ಟಾಂಗ ನಮಸ್ಕಾರ ಮಾಡಿ ಹೊರಟರು.

## ಹಾರಿದ ಹಕ್ಕಿ

9.15ಕ್ಕೆ ಶ್ರೀವಿಶ್ವಪ್ರಸನ್ನತೀರ್ಥರನ್ನು ವೈದ್ಯರು ಒಳಗೆ ಕರೆದರು. 9.20ಕ್ಕೆ ಹೊರಬಂದ ಶ್ರೀಪಾದರು "ಶ್ರೀಗಳವರು ಹರಿಪಾದವನ್ನು ಸೇರಿದ್ದಾರೆಂದು ವೈದ್ಯರು ತಿಳಿಸಿದ್ದಾರೆ" ಎಂದು ಜನರಿಗೆ ತಿಳಿಸಿದರು. ಮುಂದೆ 15 ನಿಮಿಷಗಳ ತರುವಾಯ ಶ್ರೀಗಳವರ ಪಾರ್ಥಿವ ದೇಹವನ್ನು ಹೊತ್ತು ತಂದು ದೇವರ ಮುಂದಿದ್ದ ಆಸನದಲ್ಲಿ ಕೂಡಿಸಲಾಯಿತು. ಎಲ್ಲ ಶ್ರೀಪಾದರು ಮಂಗಳಾರತಿ ಬೆಳಗಿದರು. ಅನಂತರ ಒಳ ಹೊರಗೆ ಕಾದಿದ್ದ ಭಕ್ತರಿಗೆ ಸರದಿಯ ಸಾಲಿನಲ್ಲಿ ಪಾರ್ಥಿವ ದೇಹದ ದರ್ಶನಕ್ಕೆ ಅವಕಾಶ ಮಾಡಿಕೊಡಲಾಯಿತು. ಅದರ ನಂತರ ದೇಹವನ್ನು ಬುಟ್ಟಿಯಲಿಟ್ಟು ವಾದ್ಯವೈಭವದೊಂದಿಗೆ ಕಾವಡಿಯಲ್ಲಿ ಶ್ರೀಕೃಷ್ಣಮಠಕ್ಕೆ ಮಧ್ವಸರೋವರದಲ್ಲಿ ಸ್ನಾನ ಮಾಡಿಸಿ, ಶ್ರೀಕೃಷ್ಣಮಠದ ಒಳಗೆ ಕೃಷ್ಣದರ್ಶನವನ್ನು ಮಾಡಿಸಲಾಯಿತು.

## ಅಂತಿಮ ದರ್ಶನ

ಮುಂದೆ ತೆರೆದ ವಾಹನದಲ್ಲಿಟ್ಟು ಮೆರವಣಿಗೆ ಜಯಘೋಷದೊಂದಿಗೆ ಉಡುಪಿಯ ವಿಶಾಲ ಮೈದಾನ ಅಜ್ಜರಕಾಡಿಗೆ ತರಲಾಯಿತು. ಅಲ್ಲಿ ಪೊಲೀಸರ ಬಂದೋಬಸ್ತಿನಲ್ಲಿ ಸುಸಜ್ಜಿತ ವೇದಿಕೆ, ಸಂದರ್ಶಕರಿಗೆ ಸರದಿಯ ಸಾಲಿನ ವ್ಯವಸ್ಥೆಯನ್ನು ಮಾಡಲಾಗಿತ್ತು. ನಿರಂತರ ಭಗವದ್ಗೀತೆ, ವಿಷ್ಣುಸಹಸ್ರನಾಮ ಪಠನ ನಡೆಯುತ್ತಿತ್ತು. ದೇಹವು ವೇದಿಕೆಯ ಹತ್ತಿರ ಬರುತ್ತಲೇ ಮೂರು ಸುತ್ತು ಕುಶಾಲುತೋಪನ್ನು ಹಾರಿಸಿ ಪೊಲೀಸ್ ಗೌರವವನ್ನು ನೀಡಿ, ರಾಷ್ಟ್ರಧ್ವಜವನ್ನು ಸಲ್ಲಿಸಲಾಯಿತು. ಸುಮಾರು ಒಂದು ಗಂಟೆಗಳ ಕಾಲ ಸಾರ್ವಜನಿಕ ದರ್ಶನಕ್ಕೆ ದೇಹವನ್ನು ಇಟ್ಟು 1.35ಕ್ಕೆ ಆದಿ ಉಡುಪಿಯ ಹೆಲಿಪ್ಯಾಡಿಗೆ ಅಂಬ್ಯುಲೆನ್ಸನಲ್ಲಿ ತಂದು, ಹೆಲಿಕಾಪ್ಟರ್‌ನಲ್ಲಿ ಬೆಂಗಳೂರಿಗೆ ಹೊರಡುವ ಮೂಲಕ ಉಡುಪಿಗೆ ವಿದಾಯ ಹೇಳಲಾಯಿತು. ಅಲ್ಲಿ ಹೆಲಿಪ್ಯಾಡಿನ ಸುತ್ತಲೂ ಸಹಸ್ರಾರು ಜನರು ಸೇರಿದ್ದರು.

## ವೃಂದಾವನ ಪ್ರವೇಶ

ಶ್ರೀಗಳವರನ್ನು ಹೊತ್ತ ಹೆಲಿಕ್ಯಾಪ್ಟರ್ 1.55ಕ್ಕೆ ಉಡುಪಿ ಬಿಟ್ಟು 3.45ಕ್ಕೆ ಬೆಂಗಳೂರಿನ ಎಚ್.ಎ.ಎಲ್. ವಿಮಾನ ನಿಲ್ದಾಣಕ್ಕೆ ಬಂದಿಳಿಯಿತು. ರಾಜ್ಯದ ಮುಖ್ಯಮಂತ್ರಿಗಳು ಉಡುಪಿಯಿಂದ ಅದಾಗಲೇ ಬಂದು ಗಣ್ಯರೊಂದಿಗೆ ಸ್ವಾಗತಿಸಿದರು. 4.00 ರಿಂದ 6.00 ರವರೆಗೆ ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ಸಾರ್ವಜನಿಕ ದರ್ಶನ ನಡೆದು, 7.45ಕ್ಕೆ ವಿದ್ಯಾಪೀಠದಲ್ಲಿ ಅಂತಿಮ ವಿಧಿವಿಧಾನ ನಡೆಯಿತು. 9.45ಕ್ಕೆ ಶ್ರೀಗಳವರ ದೇಹವನ್ನು ಭೂಗತಗೊಳಿಸಲಾಯಿತು.

**ಕ್ರಿ.ಶ. 27–4–1931 ರಲ್ಲಿ ಕಮಲಮ್ಮ–ನರಸಿಂಹಾಚಾರ್ಯ ದಂಪತಿಗಳಲ್ಲಿ ಪುತ್ತೂರಿನ ಸಮೀಪದ ರಾಮಕುಂಜದಲ್ಲಿ ಜನಿಸಿದ ವೆಂಕಟರಾಮ 1938 ರಲ್ಲಿ ಶ್ರೀವಿಶ್ವೇಶತೀರ್ಥರಾಗಿ 89 ವರ್ಷಗಳ ಸುದೀರ್ಘ ಜೀವನವನ್ನು ದೇಶಸೇವೆಯ ಜೊತೆಗೆ ಈಶ ಸೇವೆಗೆ ಮುಡಿಪಾಗಿಟ್ಟು ಅಂತಿಮ ವಿಶ್ರಾಂತಿಯನ್ನು ಪಡೆಯುವ ಮೂಲಕ ಇತಿಹಾಸದ ಪುಟಗಳಲ್ಲಿ ಸೇರಿದರು.**

**– ಎ. ಹರಿದಾಸ ಭಟ್**

* * *

# 5. ಗುರುಗಳ ಚರಮ ಶ್ಲೋಕದ ಹೂರಣ

ಮಹಾಪ್ರಸ್ಥಾನ ಕೈಗೊಂಡ ಗುರುಗಳ ವಾಙ್ಮಯ ಪ್ರತಿಮೆಯಂತೆ ಇರುವ ಶ್ರೀ ವಿಶ್ವಪ್ರಸನ್ನತೀರ್ಥದೃಷ್ಟವಾದ ಮಂತ್ರತುಲ್ಯ ಚರಮಶ್ಲೋಕ–

**ತಪಃಸ್ವಾಧ್ಯಾಯಶುಶ್ರೂಷಾಕೃಷ್ಣಪೂಜಾರತಂ ಮುನಿಮ್ ।**
**ವಿಶ್ವೇಶಮಿಷ್ಟದಂ ವಂದೇ ಪರಿವ್ರಾಟ್‌ಚಕ್ರವರ್ತಿನಮ್ ।**

**'ತಪಃಸ್ವಾಧ್ಯಾಯಶುಶ್ರೂಷಾಕೃಷ್ಣಪೂಜಾರತಂ...'** ಇತ್ಯಾದಿ ನಾಲ್ಕು ವಿಶೇಷಣಗಳನ್ನೂ, ವಿಶ್ವೇಶಂ ಎಂಬ ವಿಶೇಷ್ಯವನ್ನೂ ಹೊಂದಿರುವ ಈ ಪದ್ಯ ಮೇಲ್ನೋಟಕ್ಕೆ ಸರಳ ಪದ್ಯ. ಆದರೆ **'...ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನುಧಾವತಿ'** ಎಂದಿರುವಂತೆ ಆದ್ಯ ಋಷಿತ್ವದ ಆವೇಶಕ್ಕೆ ಒಳಗಾಗಿದ್ದ ಶ್ರೀ ವಿಶ್ವಪ್ರಸನ್ನತೀರ್ಥರಿಂದ ಹೊರಹೊಮ್ಮಿದ ಈ ಪದ್ಯದ ಪ್ರತಿಯೊಂದು ಶಬ್ದವನ್ನೂ ಅರ್ಥಗಾಂಭೀರ್ಯ ಅಟ್ಟಿಸಿಕೊಂಡು ಬರುವಂತಿದೆ.

## ವಿಷ್ಣೋದ್ರೇಕಾಯ ಕಥ್ಯತೇ:

ಶ್ರೀಶ್ರೀ ವಿಶ್ವೇಶತೀರ್ಥರ ಸಾಧನೆಗಳ ಮೇಲೂ, ಕೊಡುಗೆಗಳ ಮೇಲೂ ಬೆಳಕು ಚೆಲ್ಲುತ್ತಾ, ಅವರ ವಾಙ್ಮಯ ಮೂರ್ತಿಯಂತಿರುವ ಈ ಪದ್ಯ ಅವರ ಬಿಂಬರೂಪಿಯನ್ನು ಹೇಗೆ ಹೊಗಳುತ್ತಿದೆ ಎಂಬುದನ್ನು ಮೊದಲು ಪರಿಶೀಲಿಸೋಣ. **'ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ** – ವೈಷ್ಣವರಿಗೆ, ಭಗವದ್ಭಕ್ತರಿಗೆ ಭಗವಂತ ಮಾಡಿದ ಅನುಗ್ರಹದ ಮಹತ್ವವನ್ನು ಸಾರುವುದಕ್ಕಾಗಿಯೇ ಅಂತಹ ಅನುಗ್ರಹಕ್ಕೆ ಪಾತ್ರರಾದ ಭಗವದ್ಭಕ್ತರ ಚರಿತ್ರೆಯನ್ನು ನಿರೂಪಿಸಲಾಗುವುದೆಂದು ಶ್ರೀಮದಾಚಾರ್ಯರು ಹಾಕಿಕೊಟ್ಟ ಸೂತ್ರಕ್ಕನುಗುಣವಾಗಿ ಶ್ರೀ ವಿಶ್ವೇಶತೀರ್ಥರ ಮಹತ್ತ್ವವನ್ನು ಪ್ರತಿಪಾದಿಸ ಹೊರಟ ಈ ಪದ್ಯದಲ್ಲಿ ಅಂತಹ ಶ್ರೀಪಾದರಲ್ಲಿ ಮಹತ್ತ್ವ ಸಿದ್ಧಿಸುವಂತೆ ಅನುಗ್ರಹಿಸಿದ ಭಗವಂತನ ಮಹಿಮೆಯನ್ನು ಮೊದಲು ಆಸ್ವಾದಿಸೋಣ.

ಶ್ರೀಪಾದರ ಆರಾಧ್ಯನಾದ ಅಜವಿಟ್ಠಲ, ಕಣ್ವಮುನಿ ಪೂಜಿತ ರಾಮಚಂದ್ರ ಹಾಗೂ ಅವರಿಗಿಂತ ಅಭಿನ್ನನಾದ ಪೊಡವಿಗೊಡೆಯ ಈ ಮೂರೂ ಅವರಿಗೆ

ಅನುಗ್ರಹಿಸಿದ ಭಗವದ್ರೂಪಗಳು. ಆದ್ದರಿಂದ ಇವುಗಳ ಪರವಾಗಿ ಈ ಶ್ಲೋಕವನ್ನು ಚಿಂತಿಸೋಣ.

## ವಿಶ್ವೇಶಂ ವಂದೇ:

ಪೊಡವಿಗೊಡೆಯ ಶ್ರೀಕೃಷ್ಣ ಸಮಗ್ರ ವಿಶ್ವಕ್ಕೇ ಈಶನಾಗಿರುವಂತೆ, ಅಂತಹ ವಿಶ್ವದಲ್ಲಿ ಸೇರಿದ ವಿಶ್ವೇಶತೀರ್ಥರು; **'ನಾಮನಿರ್ದೇಶೇ ನಾಮೈಕದೇಶನಿರ್ದೇಶಃ'**– ಎಂಬ ನಿಯಮಕ್ಕನುಗುಣವಾಗಿ ವಿಶ್ವೇಶತೀರ್ಥ ಎಂಬ ನಾಮವನ್ನೇ ಸಂಕ್ಷೇಪವಾಗಿ ವಿಶ್ವ ಎಂದು ಉಲ್ಲೇಖಿಸಲಾಗಿದೆ. ಅಂತಹ ವಿಶ್ವೇಶತೀರ್ಥರಿಗೆ ಒಡೆಯನಾದವನು. ಒಡೆಯನಾಗಿದ್ದು ಅವರಿಂದ ಐದು ಪರ್ಯಾಯಗಳಲ್ಲಿ ತನ್ನ ಕೈಂಕರ್ಯವನ್ನು ನಡೆಸಿಸಿ **'ವಿಶ್ವೇಶೇಶಃ ವಿಶ್ವೇಶ'** –ಎಂದೇ ಪ್ರಸಿದ್ಧನಾಗಿರುವವನು ಉಡುಪಿ ಶ್ರೀಕೃಷ್ಣ, ಅಂತಹ ಕೃಷ್ಣನನ್ನು ನಮಿಸುತ್ತೇನೆ; ಸ್ತುತಿಸುತ್ತೇನೆ (ವದೀ ಅಭಿವಾದನಸ್ತುತ್ಯೋಃ). ಯಾಕೆಂದರೆ ನಮ್ಮ ಗುರುಗಳಾದ ವಿಶ್ವೇಶತೀರ್ಥರ 89 ವರ್ಷಗಳ ಜೀವನಾವಧಿಯಲ್ಲಿ ಬೇರೆ ಬೇರೆ ಬಗೆಯ ಸಾಧನಾನುಷ್ಠಾನಗಳನ್ನು ನಡೆಸಿಸಿ ಅನುಗ್ರಹಿಸಿದಕ್ಕಾಗಿ,

## ಇಷ್ಟದಂ:

ಇಷ್ಟಗಳನ್ನು ಕೊಡುವವನು; ವಿಶೇಷವಾಗಿ ತನ್ನ ಆರಾಧಕರಾದ ಶ್ರೀ ವಿಶ್ವೇಶತೀರ್ಥರಿಗೆ ಅವರ ಇಷ್ಟಗಳನ್ನು ನೀಡುತ್ತಿದ್ದವನು, ಶ್ರೀ ವಿಶ್ವೇಶತೀರ್ಥರ ಮೂಲಕ ನಮಗೆ ಇಷ್ಟವನ್ನು ನೀಡುತ್ತಿದ್ದವನು.

## ಪರಿವ್ರಾಟ್ ಚಕ್ರವರ್ತಿನಂ:

ಎಲ್ಲೆಡೆ ಅಡ್ಡಾಡುತ್ತಿರುವ ಸಂನ್ಯಾಸಿಗಳ ಸಮೂಹದಲ್ಲಿ **'ಆಶ್ರಮಾಣಾಮಹಂ ತುರ್ಯಃ....'** ಎಂದಿರುವಂತೆ ಸಂನ್ಯಾಸಾಶ್ರಮ ಉಳಿದೆಲ್ಲ ಆಶ್ರಮಗಳಿಗಿಂತ ಶ್ರೇಷ್ಠ ಎನಿಸುವಂತೆ **ತುರ್ಯ** ಎಂಬ ವಿಭೂತಿರೂಪದಿಂದ ಇರುವವನು. **(ಪರಿವ್ರಾಜಾಂ ಚಕ್ರೇ ತುರ್ಯನಾಮಕವಿಭೂತಿರೂಪೇಣ ವರ್ತತ ಇತಿ ಪರಿವ್ರಾಟ್‌ಚಕ್ರವರ್ತೀ)**

## ಮುನಿಮ್:

ಮು ಎಂದರೆ ಬಂಧನ; ಅದನ್ನು ದೂರ ಮಾಡುವವನು (**ಮುಃ ಬಂಧನಂ, ತಂ ಅತಿಶಯೇನ ನಯತಿ ಅಪನಯತೀತಿ ಮುನಿಃ**) ವಿಶೇಷವಾಗಿ ವಿಶ್ವೇಶತೀರ್ಥರ ಪಾಲಿಗೆ ಸಂಸಾರಬಂಧನ ಬಾಧಿಸದಂತೆ ಅನುಗ್ರಹಿಸುವವನು. ಹಾಗೆಯೇ ಭಕ್ತರ ಬಗ್ಗೆ ವಿಶೇಷವಾಗಿ ಶ್ರೀವಿಶ್ವೇಶತೀರ್ಥರ ಯೋಗಕ್ಷೇಮದ ಬಗ್ಗೆ ಮನನ ನಡೆಸುತ್ತಾ ಇದ್ದವನು.

## ತಪಃಸ್ವಾಧ್ಯಾಯ ಶುಶ್ರೂಷಾ ಕೃಷ್ಣಪೂಜಾರತಂ:

ತಪಸ್ಸು, ಸ್ವಾಧ್ಯಾಯ, ಸೇವೆ ಹಾಗೂ ಕೃಷ್ಣನ ಆರಾಧನೆ-ಇವುಗಳಿಂದಲೇ ಸುಖಪಡುತ್ತಿರುವ ಸಾಧಕರಲ್ಲಿ ವಿಶೇಷವಾಗಿ ವ್ಯಾಪಿಸಿರುವವನು; (**ತಪಃ, ಸ್ವಾಧ್ಯಾಯ, ಶುಶ್ರೂಷಾ, ಕೃಷ್ಣಪೂಜಾ ಚ ತಪಃಸ್ವಾಧ್ಯಾಯಶುಶ್ರೂಷಾ ಕೃಷ್ಣಪೂಜಾಃ ಏತಾಭಿಃ ರಮಯಂತೀತಿ ತಪಃ... ಕೃಷ್ಣಪೂಜಾರಾಃ ತಾನ್ ತನಯತಿ ಕೀರ್ತಿಪುಣ್ಯಾಭ್ಯಾಂ ವಿಸ್ತಾರಯತೀತಿ ತಪಃಸ್ವಾಧ್ಯಾಯಶುಶ್ರೂಷಾಕೃಷ್ಣ-ಪೂಜಾರತಮ್**)

ಹೀಗೆ ಅಜವಿಟ್ಠಲಾಭಿನ್ನ ಪೊಡವಿಗೊಡೆಯನ ಪರವಾಗಿ ಈ ಪದ್ಯವನ್ನು ಅರ್ಥೈಸಿದ ಬಳಿಕ ಪೊಡವಿಗೊಡೆಯ ಶ್ರೀ ವಿಶ್ವೇಶತೀರ್ಥರ ಬಗ್ಗೆ ಅನುಗ್ರಹಿಸಿದ್ದನ್ನು ಈ ಪದ್ಯದ ಮೂಲಕ ಅನುಸಂಧಾನ ಮಾಡೋಣ.

ತಮ್ಮ 89 ವರ್ಷಗಳ ಜೀವನದಲ್ಲಿ ತಪಸ್ಸು, ಸ್ವಾಧ್ಯಾಯ, ಸೇವೆ ಹಾಗೂ ಕೃಷ್ಣಪೂಜೆ ಇವುಗಳ ಅನುಷ್ಠಾನದಲ್ಲಿ ಆಸಕ್ತರಾಗಿದ್ದವರು ಎಂದು ಶ್ರೀಪಾದರ ಸಾಧನೆಗಳನ್ನೆಲ್ಲ ತಪಸ್ಸೇ ಮುಂತಾದ ನಾಲ್ಕು ಸಾಧನೆಗಳಲ್ಲಿ ಕ್ರೋಡೀಕರಿಸಿ ಪ್ರಸ್ತುತಪಡಿಸಲಾಗಿದೆ. ಅಥವಾ **ತಪಸ್ಸು, ಸ್ವಾಧ್ಯಾಯ** ಹಾಗೂ **ಶುಶ್ರೂಷಾ** ಎಂಬ ಮೂರು ಸಾಧನೆಗಳನ್ನು ಕೃಷ್ಣಪೂಜಾರೂಪದಲ್ಲಿ ನಡೆಸುವಲ್ಲಿ ಆಸಕ್ತರಾಗಿದ್ದವರು (**ತಪಃಸ್ವಾಧ್ಯಾಯಶುಶ್ರೂಷಾಭಿಃ ಕ್ರಿಯಮಾಣಾ ಯಾ ಕೃಷ್ಣಪೂಜಾ ತಸ್ಯಾಂ ರತಃ**) ಎಂಬ ಅರ್ಥವನ್ನೂ ಹೊರಡಿಸಬಹುದಾಗಿದೆ.

## 'ರತ' ಶಬ್ದ ಪ್ರಯೋಗದ ಔಚಿತ್ಯ:

ತಪಸ್ಸೇ ಮುಂತಾದವುಗಳನ್ನು ಒಳಗೊಂಡಿದ್ದ **'ಯುತಂ, ಸಹಿತಂ'**-ಇತ್ಯಾದಿಯಾಗಿ ಪ್ರಯೋಗಿಸದೆ **'ರತಂ'**-ಎಂಬ ಶಬ್ದವನ್ನು ಬಳಸುವ

ಮೂಲಕ ತಪಸ್ಸೇ ಮುಂತಾದ ಸಾಧನೆಗಳನ್ನು ತೋರಿಕೆಗಾಗಿ, ಯಾವುದೇ ನಿರ್ಬಂಧಕ್ಕೊಳಗಾಗಿ ಕಾಟಾಚಾರರೂಪದಿಂದ ಮಾಡದೆ, ಶ್ರದ್ಧಾಭಕ್ತಿಗಳಿಂದ ತುಂಬ ಆಸಕ್ತರಾಗಿ ತನ್ಮಯರಾಗಿ ನಡೆಸುತ್ತಿದ್ದರೆಂದು ಸೂಚಿತವಾದಂತಾಗಿದೆ.

## ತಪಃ.. ರತಂ:

ಶ್ರೀಪಾದರ ಸಾಧನೆಗಳಲ್ಲಿ ಮೊತ್ತ ಮೊದಲನೆಯದಾಗಿ ಗುರುತಿಸಲ್ಪಟ್ಟದ್ದು 'ತಪಸ್ಸು'. ಅವರ ಸಾಧನೆಗಳನ್ನು ಪರಿಚಯಿಸಿಕೊಡುವಾಗ ಮೇರು ಸಾಧನೆಯಾಗಿ ಸಾರಲ್ಪಡುವಂತಹದ್ದು- **'ನ ಭೂತೋ ನ ಭವಿಷ್ಯತಿ(?)'** ಎಂಬಂತೆ ಮೂವತ್ತಾರು ಸುಧಾಮಂಗಳಗಳನ್ನು ನಡೆಸಿ, ಐನೂರಕ್ಕಿಂತಲೂ ಅಧಿಕ ವಿದ್ವಾಂಸರನ್ನು ಸಮಾಜಕ್ಕೆ ನೀಡಿರುವರೆಂಬುದು. ಈ ಸಾಧನೆ **'ಸ್ವಾಧ್ಯಾಯಪ್ರವಚನೇ ಏವೇತಿ ನಾಕೋಮೌದ್ಗಲ್ಯಃ । ತದ್ಧಿ ತಪಃ ತದ್ಧಿ ತಪಃ'** –ಎಂದು ತೈತ್ತರೀಯೋಪನಿಷತ್ತಿನಲ್ಲಿ ನಾಕೋಮೌದ್ಗಲ್ಯನ ಸಂವಾದದೊಂದಿಗೆ ಅದೇ ನಿಜವಾದ ತಪಸ್ಸೆಂದು ಎರಡೆರಡು ಬಾರಿ ಸಾರುವ ಮೂಲಕ ದೃಢೀಕರಿಸಲ್ಪಟ್ಟ ಸ್ವಾಧ್ಯಾಯ ಪ್ರವಚನರೂಪದ ತಪಸ್ಸಿನ ಪರಿಣಾಮ ರೂಪವಾದದ್ದು. **'ಕಾರ್ಯಾತ್ ಕಾರಣಾನುಮಾನಮ್'** ಎಂಬಂತೆ ಮೂವತ್ತಾರು ಸುಧಾಮಂಗಳಗಳು, ನೂರಾರು ವಿದ್ವಾಂಸರ ಸಿದ್ಧಪಡಿಸುವಿಕೆ–ರೂಪದ ಕಾರ್ಯದಿಂದ ಅದರ ಹಿನ್ನೆಲೆಯಾಗಿ ಕಾರಣರೂಪದಿಂದ ಇರಬೇಕಾದ ಸ್ವಾಧ್ಯಾಯ ಪ್ರವಚನ ರೂಪದ ತಪಸ್ಸಿನ ಘನತೆ ಸ್ಪಷ್ಟವಾಗದಿರದು.

* **'...ಕಾಮತ್ಯಾಗಸ್ತಪಃ ಸ್ಮೃತಮ್'** –ಎಂದು ಉದ್ಧವಗೀತೆಯಲ್ಲಿ ತಿಳಿಸಿರುವಂತೆ ಶಾಸ್ತ್ರನಿಷಿದ್ಧ ಕಾಮಗಳ ತ್ಯಾಗರೂಪವಾದ ತಪಸ್ಸನ್ನು ಚೆನ್ನಾಗಿ ಅಳವಡಿಸಿಕೊಂಡಿದ್ದರು. ಇದಕ್ಕಾಗಿ ಅವರು ಅಳವಡಿಸಿಕೊಂಡಿದ್ದ ಒಂದು ಉಪಾಯ–ಯಾವಾಗಲೂ ತಾವು ಶಿಷ್ಯರ ಜೊತೆಗೆ ಇದ್ದು ಏಕಾಂತತೆಯ ಪ್ರಯುಕ್ತ ಮನಸ್ಸು ಕೆಟ್ಟ ವಿಷಯಗಳೆಡೆಗೆ ಹರಿಯದಂತೆ ಎಚ್ಚರ ವಹಿಸಿದ್ದರು.
* ಅಂತಃಕರಣ ಶುದ್ಧಿಗಾಗಿ ನಡೆಸುವ ವ್ರತ ಉಪವಾಸಾದಿಗಳೂ ತಪಃ ಎನಿಸಿದ್ದು ಈ ಬಗೆಯ ತಪಸ್ಸಿನಲ್ಲೂ–ಏಕಾದಶೀ ವ್ರತ, ಚಾತುರ್ಮಾಸ್ಯ

ವ್ರತ-ಇತ್ಯಾದಿಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಮೂಲಕ ಆಸಕ್ತರಾಗಿದ್ದರು.

**'...ಸ್ವಾಧ್ಯಾಯ... ರತಂ':**

ಸ್ವತಂತ್ರನಾದ ಭಗವಂತನ ಚಿಂತನೆ ಸ್ವಾಧ್ಯಾಯ ಎನಿಸಿದ್ದು ವ್ಯಾಪಕವಾಗಿ ಪಾಠಪ್ರವಚನ ಉಪನ್ಯಾಸಾದಿಗಳಲ್ಲಿ ತೊಡಗಿದ್ದ ಶ್ರೀಪಾದರು ಇವುಗಳಿಗಾಗಿ ಈ ಬಗೆಯ ಸ್ವಾಧ್ಯಾಯವನ್ನು ನಿರಂತರವಾಗಿ ನಡೆಸುತ್ತಿದ್ದರು. **'ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್'** -ಎಂಬ ಶ್ರೀಮದಾಚಾರ್ಯರ ಸಂದೇಶಕ್ಕನುಗುಣವಾಗಿ ಶಿಷ್ಯರಿಗೆ, ಸಾಧಕರಿಗೆ, ಭಾವುಕರಿಗೆ ಭಗವಂತನನ್ನು, ಅವನ ಸ್ವರೂಪ, ಲೀಲೆ, ಮಹಿಮೆಗಳನ್ನು ಯಾವ ಶೈಲಿಯಲ್ಲಿ ಪ್ರಸ್ತುತಪಡಿಸಿದರೆ ಮನವರಿಕೆಯಾಗ ಬಹುದೆಂಬುದರ ಬಗ್ಗೆ ಚಿಂತನೆ ಮನನಗಳನ್ನು ನಡೆಸುತ್ತ ಇದ್ದರು. ಇವುಗಳ ಸೂಚಕವೆನ್ನುವಂತೆ ಹೆಚ್ಚಾಗಿ ತುಟಿಗಳನ್ನು ಅಲ್ಲಾಡಿಸುತ್ತಾ ಭಗವಂತನ ನಾಮಸ್ಮರಣೆಯನ್ನು ನಡೆಸುತ್ತ ಇದ್ದರು.

**'...ಶುಶ್ರೂಷಾ... ರತಂ':**

ಭಗವದ್ಗೀತೆಯಲ್ಲಿ ಯೋಗಾರ್ಥಿಯಾದವನು ನಡೆಸಬೇಕೆಂದು ತಿಳಿಸಲಾದ (6-3) ಕರ್ಮ ಎಂಬುದಕ್ಕೆ ಶ್ರೀಮದಾಚಾರ್ಯರು ತಮ್ಮ ಗೀತಾತಾತ್ಪರ್ಯದಲ್ಲಿ ಅರ್ಥವಿಶೇಷವನ್ನು ಬೆಳಗಿಸಿರುವರು- **'ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ ಯೋಗಾರ್ಥಿನಾ ತು ಸಾ ಕಾರ್ಯಾ...'** ಕರದಂತೆ ಪರಿಗಣಿಸಲ್ಪಟ್ಟ ನಾನಾ ಜನರ ಶುಶ್ರೂಷೆಯೇ ಕರ್ಮ ಎನಿಸಿದ್ದು ಯೋಗಾರ್ಥಿಯಾದ ಪ್ರತಿಯೊಬ್ಬನೂ ಅದನ್ನು ನಡೆಸಬೇಕೆಂದು ತಿಳಿಸಲಾಗಿದೆ.

ಗೀತೆಯ ಈ ಸಂದೇಶಕ್ಕೆ ಒತ್ತು ಕೊಟ್ಟಿರುವ ಶ್ರೀಪಾದರು ತಮ್ಮನ್ನು 'ನಾನಾಜನರ ಶುಶ್ರೂಷೆ'ಯಲ್ಲಿ ವಿಶೇಷವಾಗಿ ತೊಡಗಿಸಿಕೊಂಡಿದ್ದರು.

1985ರಲ್ಲಿ ಉತ್ತರಕರ್ನಾಟಕದಲ್ಲಿ ಸಂಭವಿಸಿದ ಬರ, 1977ರಲ್ಲಿ ಆಂಧ್ರಪ್ರದೇಶದ ಹಂಸಲದೀವಿಯಲ್ಲಿ ಸಂಭವಿಸಿದ ಚಂಡಮಾರುತ, 1995ರಲ್ಲಿ ಗೋವಿಂದಪುರದಲ್ಲಿ ಸಂಭವಿಸಿದ ಭೂಕಂಪ-ಹೀಗೆ ಬರೇ ಕರಾವಳಿ

ಜಿಲ್ಲೆಯಲ್ಲಿ ಅಲ್ಲ; ಬರೇ ಕರ್ನಾಟಕದಲ್ಲಿ ಅಲ್ಲ; ಸಮಗ್ರ ದೇಶದ ಬೇರೆ ಬೇರೆ ಕಡೆಗಳಲ್ಲಿ ಅನಾವೃಷ್ಟಿ, ಅತಿವೃಷ್ಟಿ, ಭೂಕಂಪ ಮುಂತಾದ ಪ್ರಕೃತಿವಿಕೋಪ ಸಂಭವಿಸಿದಾಗ ಅದಕ್ಕೆ ಕೂಡಲೇ ಸ್ಪಂದಿಸಿ ತೊಂದರೆಗೊಳಗಾದ ಜನರಿಗೆ ಗಂಜಿಕೇಂದ್ರ ಮುಂತಾದವುಗಳ ಮೂಲಕವೂ, ಹಸುಗಳಿಗೆ 'ಗೋಕೇಂದ್ರ' ಮುಂತಾದವುಗಳ ಮೂಲಕವು ಆರ್ಥಿಕವಾಗಿಯೂ, ವ್ಯವಸ್ಥೆಗಳ ನಿರ್ವಹಣೆಯಿಂದಲೂ **'ತಸ್ಯ ಪ್ರಾಣ್ಯುಪಕಾರೇಣ ಸಂತುಷ್ಟೋ ಭವತೀಶ್ವರಃ'** –ಎಂದಂತೆ ಭಗವಂತನ ಪೂಜಾರೂಪದಲ್ಲಿ ನಾನಾಜನರ, ಹಸು ಮುಂತಾದ ಪ್ರಾಣಿಗಳ ಉಪಕಾರವನ್ನು ನಡೆಸಿದವರು. ತಂದೆತಾಯಿಯಂದಿರು ತಮ್ಮ ಮಕ್ಕಳಲ್ಲಿ ಯಾರಾದರೂ ರೋಗಗ್ರಸ್ತರೋ, ಅಂಗನ್ಯೂನರೋ ಇದ್ದರೆ ಅವರ ಬಗ್ಗೆ ವಿಶೇಷ ಕಾಳಜಿಯನ್ನು ತೋರುವವರ ಬಗ್ಗೆ ಹೇಗೆ ತುಂಬ ಸಂತುಷ್ಟರಾಗುವರೋ ಹಾಗೆಯೇ ಭಗವಂತನೂ ಪ್ರಕೃತಿವಿಕೋಪ ಮುಂತಾದ ಪೀಡೆಗಳಿಗೆ ಒಳಗಾದ ತನ್ನ ಪ್ರಜೆಗಳ ಬಗ್ಗೆ ನೆರವು ನೀಡುವವರನ್ನು ವಿಶೇಷವಾಗಿ ಮೆಚ್ಚಿಕೊಳ್ಳುವನು–ಎಂದು ಪ್ರತಿಪಾದಿಸುತ್ತಿದ್ದ ಶ್ರೀಪಾದರು ತಮ್ಮ ಈ ಪ್ರತಿಪಾದನೆಗೆ ಅನುಗುಣವಾಗಿಯೇ ನಡೆದುಕೊಂಡಿದ್ದರು. ಅಯೋಧ್ಯೆಯ ರಾಮಮಂದಿರದ ಆಂದೋಲನ, ಪಾಜಕದ ಗಣಿಕಾರಿಕೆಯ ವಿರುದ್ಧದ ಆಂದೋಲನ ಮುಂತಾದವುಗಳಲ್ಲೂ ಸಕ್ರಿಯವಾಗಿ ಪಾಲ್ಗೊಂಡು ಅದನ್ನೂ **'ನಾನಾಜನ ಶುಶ್ರೂಷೆ'**ಯನ್ನಾಗಿ ನಡೆಸಿದವರು. ದಲಿತರ ಕೇರಿಗಳಿಗೆ ಹೋಗಿ **'ಹಿಂದವಃ ಸೋದರಾಃ ಸರ್ವೇ...'** –ಎಂದು ಅವರಿಗೆ ವೈಷ್ಣವ ದೀಕ್ಷೆಯನ್ನು ನೀಡುವ ಮೂಲಕ ಆ ಬಗೆಯ **'ನಾನಾಜನ ಶುಶ್ರೂಷೆ'**ಯನ್ನೂ ನಡೆಸಿದವರು.

**'ತೇನಾಪಿ ಸ್ವೋತ್ತಮಾನಾಂ ತು ಕಾರ್ಯಾ...'** ಯೋಗಾರ್ಥಿ ಮಾತ್ರವಲ್ಲ ಯೋಗಾರೂಢನೂ ತನಗಿಂತ ಉತ್ತಮರಾದವರ ಶುಶ್ರೂಷೆಯನ್ನು ಮಾಡಲೇಬೇಕೆಂದು ಒತ್ತುಕೊಡಲಾದ ಉತ್ತಮರ ಶುಶ್ರೂಷೆ ಶ್ರೀಪಾದರಿಂದ ವಿಶೇಷವಾಗಿ ನಡೆಸಲ್ಪಟ್ಟಿದೆ. ತಮ್ಮ ಗುರುಗಳಾದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು ಮಾಹಾಪ್ರಸ್ಥಾನ ಕೈಗೊಳ್ಳುವ ಮೊದಲ 108 ದಿನಗಳಲ್ಲಿ ಪ್ರತಿನಿತ್ಯ ಅವರಿದ್ದ ಕೃಷ್ಣಧಾಮ ಛತ್ರದ ಕೊಠಡಿಗೆ ಹೋಗಿ ಅವರಿಗೆ ಶ್ರೀಕೃಷ್ಣನ ತೀರ್ಥಪ್ರಸಾದಗಳನ್ನೆಲ್ಲ ನೀಡುತ್ತಿದ್ದರು. ಅವರ ಯೋಗಕ್ಷೇಮವನ್ನು ಆತ್ಮೀಯವಾಗಿ ವಿಚಾರಿಸುತ್ತಿದ್ದರು.

ಹೀಗೆ ಪೀಠಾಧಿಪತಿಗಳು, ಮಠಾಧಿಪತಿಗಳು ಬರೇ ಆಧ್ಯಾತ್ಮಿಕದಲ್ಲೇ ತೊಡಗದೆ, ಆ ಪ್ರವೃತ್ತಿಗೆ ಪೂರಕವಾಗುವಂತೆ ಸಾಮಾಜಿಕ ಶುಶ್ರೂಷೆಯನ್ನೂ ದೇವರ ಪೂಜೆಯಷ್ಟೇ ಕಡ್ಡಾಯವಾಗಿ ನಡೆಸಬೇಕೆಂಬುದನ್ನು ಉಳಿದೆಲ್ಲ ಪಿಠಾಧಿಪತಿಗಳಿಗೆ ಸ್ಫೂರ್ತಿ, ಪ್ರೇರಣೆ ದೊರಕುವಂತೆ ವ್ಯಾಪಕವಾಗಿ ನಡೆಸಿದ್ದವರು ಶ್ರೀಪಾದರು.

## ಕೃಷ್ಣಪೂಜಾರತಂ:

ಪೊಡವಿಗೊಡೆಯನ ಪೂಜಾಕೈಂಕರ್ಯದ ಐದು ಪರ್ಯಾಯಗಳನ್ನು ನಡೆಸಿ, ಆ ಅವಧಿಯ ಹತ್ತು ವರ್ಷಗಳ 3,600 (720×5) ದಿನಗಳಲ್ಲಿ ಉಡುಪಿ ಶ್ರೀಕೃಷ್ಣನ ಪೂಜೆ ನಡೆಸಿದ್ದರು. ಶಿಷ್ಯರಾದ ಶ್ರೀ ವಿಶ್ವಪ್ರಸನ್ನತೀರ್ಥರು ಮನಃಪೂರ್ವಕವಾಗಿ ಗುರುಗಳೇ ಐದನೆಯ ಪರ್ಯಾಯವನ್ನು ನೆರವೇರಿಸಲೆಂದು ಬಿಟ್ಟುಕೊಟ್ಟ ಅವಕಾಶವನ್ನು ವಿನಿಯೋಗಿಸಿಕೊಂಡದ್ದರಲ್ಲಿ ಶ್ರೀಪಾದರಿಗೆ ಕೃಷ್ಣನ ಪೂಜೆಯಲ್ಲಿದ್ದ ಉತ್ಸಾಹ, ಭಕ್ತಿ, ಶ್ರದ್ಧೆಗಳನ್ನು ಗುರುತಿಸಬೇಕು; ಬದಲಾಗಿ ಐದನೆಯ ಪರ್ಯಾಯವನ್ನು ತಾನು ನಡೆಸಿದಂತಾಗಬೇಕೆಂಬ ಚಾಪಲ್ಯ ಅವರಿಗಿತ್ತೆಂದು ಖಂಡಿತಾ ದೋಷಾರೋಪ ನಡೆಸಬಾರದು. ಹಾಗೆಯೇ ಹರ್ನಿಯಾ ಚಿಕಿತ್ಸೆಗೆ ಒಳಗಾದಾಗ ಒಂದೆರಡು ದಿನಗಳ ಕೃಷ್ಣನ ಪೂಜೆಯನ್ನು ಶಿಷ್ಯರೇ ನಡೆಸಿದರೂ ಹಾಗೆಯೇ ಮುಂದುವರಿಯುವಂತೆ ಮಾಡದೆ ತಾವು ಪರ್ಯಾಯದ ದಿನ ಸರ್ವಜ್ಞ ಸಿಂಹಾಸನದಲ್ಲಿ ಕುಳಿತು ಕೈಗೊಂಡ ಸಂಕಲ್ಪಕ್ಕನುಗುಣವಾಗಿ ಆರೋಗ್ಯದ ಸ್ಥಿತಿಯಲ್ಲಿ ತಾವೇ ಕೃಷ್ಣನನ್ನು ಪೂಜಿಸಬೇಕೆಂದು ಬಗೆದು ಹಾಗೆ ನಡೆದುಕೊಂಡಿರುವುದರಲ್ಲೂ ಅವರಿಗೆ ಕೃಷ್ಣಪೂಜೆಯಲ್ಲಿದ್ದ ರತಿಯ ಪಾತ್ರ ಮಹತ್ವದ್ದು. ಕೃಷ್ಣಪೂಜೆ ಎಂದರೆ ಪೊಡವಿಗೊಡೆಯನ ಪೂಜೆಯಂತೆಯೇ ಪೇಜಾವರ ಮಠದ ಆರಾಧ್ಯನಾದ ಅಜವಿಟ್ಠಲನ, ಕಣ್ವಮುನಿ ಪೂಜಿತ ರಾಮಚಂದ್ರ ಇವರ ಪೂಜೆಯೂ ಸಂಗ್ರಹಿಸಲ್ಪಡುವುದು. ಅಂದರೆ ಆ ಭಗವದ್ರೂಪಗಳ ಪೂಜೆಯನ್ನೂ ಶ್ರೀಪಾದರು ಬಹಳ ಆಸಕ್ತಿಯಿಂದ ನಡೆಸುತ್ತಿದ್ದರು. ತಮ್ಮ ವಿದ್ಯಾಗುರುಗಳಾದ ಶ್ರೀಶ್ರೀ ವಿದ್ಯಾಮಾನ್ಯತೀರ್ಥರಿಗೆ ಪಲಿಮಾರು ಮಠದ ಆಧಿಪತ್ಯ ದೊರಕುವಂತೆ ಮಾಡಿ ಆ ಪ್ರಯುಕ್ತ ಗುರುಗಳ ಎರಡು ಪರ್ಯಾಯಗಳ ಕಾಲ ಪೊಡವಿಗೊಡೆಯನ ಪೂಜೆಯಲ್ಲಿ

ರತರೆನಿಸುವಂತೆ ಮಾಡಿದುದನ್ನೂ **'ಕೃಷ್ಣಪೂಜಾರತಂ'** –ಎಂಬ ವಿಶೇಷಣ ಸೂಚಿಸಿಕೊಡಬಲ್ಲದು. **(ಕೃಷ್ಣಪೂಜಾ– ಗುರುಭಿಃ ಅನುಷ್ಠಿತಾ ಯಾ ದ್ವಿಪರ್ಯಾಯಾವಧಿಕಾ ಕೃಷ್ಣಪೂಜಾ, ತಸ್ಯಾಃ ಗುರುಸ್ವಾಮಿಕತ್ವಂ ಯಥಾ ಸ್ಯಾತ್ತಥಾ ರತಃ ಆಸಕ್ತಃ– ಕೃಷ್ಣಪೂಜಾರತಃ)**

**ಮುನಿಮ್:**

ಮೌನವುಳ್ಳವರು ಮುನಿಗಳು, ಆದರೆ ಮೌನ ಎಂದರೆ ಸಾಮಾನ್ಯವಾಗಿ ಭಾವಿಸುವಂತೆ ಮಾತನಾಡದೆ ಇರುವಿಕೆ ಅಲ್ಲ; ಬದಲಾಗಿ **'ಮನನಂ ಮೌನಮ್'** –ಎಂದು ಶ್ರೀಮದಾಚಾರ್ಯರು ಅರ್ಥೈಸಿರುವಂತೆ ಮನನ ಎಂದರ್ಥ.

ಶ್ರೀಪಾದರು ಶ್ರೀಮನ್ನ್ಯಾಯಸುಧಾ, ತಾತ್ಪರ್ಯಚಂದ್ರಿಕಾ ಮುಂತಾದ ಉದ್ಗ್ರಂಥಗಳನ್ನು ಸರಳವಾಗಿ, ಸುಲಲಿತವಾಗಿ ಪಾಠ ಮಾಡುತ್ತಿದ್ದರೆಂದರೆ ಅದಕ್ಕೆ ಬೇಕಾದ ಮನನವನ್ನು ಚೆನ್ನಾಗಿ ನಡೆಸುತ್ತಿದ್ದರೆಂದರ್ಥ.

ಹೀಗೆ ಪಾಠಪ್ರವಚನಕ್ಕೆ ಮಾತ್ರವಲ್ಲ; ಲೌಕಿಕಭಾಷಣಗಳಲ್ಲಿ, ಪತ್ರಿಕಾಗೋಷ್ಠಿಯಲ್ಲಿ, ಪತ್ರಿಕಾಸಂದೇಶಗಳಲ್ಲಿ ಚೆನ್ನಾಗಿ ಮನನ ನಡೆಸಿ ಯಾವುದೇ ಆಕ್ಷೇಪ ಬರದಂತೆ, ಎಲ್ಲರಿಗೆ ಚೆನ್ನಾಗಿ ಮನವರಿಕೆ ಆಗುವಂತೆ ನಡೆದುಕೊಳ್ಳುತ್ತಿದ್ದರು. ಅವರು ಆಯಾ ವಿಚಾರದ ಬಗ್ಗೆ ಚೆನ್ನಾಗಿ ಮನನ ಮಾಡುತ್ತಿದ್ದುದರಿಂದಲೇ ಪತ್ರಿಕಾಗೋಷ್ಠಿಗಳಲ್ಲಿ ಪತ್ರಿಕಾಕರ್ತರ ಪ್ರಶ್ನೆಗಳಿಗೆ, ಆಕ್ಷೇಪಗಳಿಗೆ ಸಮರ್ಪಕವಾಗಿ ಉತ್ತರಿಸುತ್ತಿದ್ದರು.

ಅವಕಾಶ ಸಿಕ್ಕಿದಾಗೆಲ್ಲ ಸುಮ್ಮನೆ ಇರದೆ ತುಟಿಗಳನ್ನು ಅಲ್ಲಾಡಿಸುತ್ತ ಏನನ್ನೋ ಜಪಿಸುತ್ತಲೇ ಇದ್ದ ಶ್ರೀಪಾದರು ಅದಕ್ಕೆ ಬೇಕಾದ ಮನನವನ್ನೂ ನಡೆಸುತ್ತಿದ್ದರೆಂಬುದು ಸ್ಪಷ್ಟ.

**ವಿಶ್ವೇಶಂ:**

3–12–1938ರಂದು ಹಂಪೆಯ ಯಂತ್ರೋದ್ಧಾರ ಮುಖ್ಯಪ್ರಾಣನ ಸನ್ನಿಧಿಯಲ್ಲಿ ಪೇಜಾವರ ಮಠದ ಯತಿಪರಂಪರೆಯ 31ನೆಯ ಯತಿಗಳಾಗಿದ್ದ ಶ್ರೀ ವಿಶ್ವಮಾನ್ಯತೀರ್ಥರು ಸಂನ್ಯಾಸಾಶ್ರಮ ನೀಡಿದ ಶುಭಸಂದರ್ಭದಲ್ಲಿ ತತ್ತಾಭಿಮಾನಿ ದೇವತೆಗಳ ಪ್ರೇರಣೆಗನುಗುಣವಾಗಿ

ವಿಶ್ವೇಶತೀರ್ಥ ಎಂಬ ಆಶ್ರಮನಾಮವನ್ನಿಟ್ಟರು. **'ನಾಮನಿರ್ದೇಶೇ ನಾಮೈಕದೇಶನಿರ್ದೇಶಃ'**-ಎಂಬಂತೆ ಶ್ರೀ ವಿಶ್ವೇಶತೀರ್ಥ ಎಂಬ ನಾಮದ ಏಕದೇಶ ವಿಶ್ವೇಶ ಎನಿಸಿದೆ. ವಿಶ್ವ ಎಂದರೆ ಎಲ್ಲರು. ಬರೇ ತೌಳವರಷ್ಟೇ ಅಲ್ಲ; ಮಾಧ್ವರಷ್ಟೇ ಅಲ್ಲ; ಬ್ರಾಹ್ಮಣರಷ್ಟೇ ಅಲ್ಲ; ಎಲ್ಲ ಹಿಂದುಗಳಿಗೂ ಒಡೆಯರಾಗಿರುವವರು ಎಂಬ ಅರ್ಥ ವಿಶ್ವೇಶನಾಮದಿಂದ ಹೊರಡಬಲ್ಲದು. ವಿಶ್ವ-ಎಲ್ಲ ಭಕ್ತ, ಅಭಿಮಾನಿಗಳ, ಸಜ್ಜನರ ಹೃದಯವನ್ನು ಪ್ರವೇಶಿಸಿರುವವರು **(ವಿಶತೀತಿ ವಿಶ್ವಃ)** ಹಾಗೂ ಎಲ್ಲರ ಗುರುಗಳಾಗಿದ್ದು ಅವರೆಲ್ಲರಿಗೂ ಒಡೆಯರಾಗಿರುವವರು **(ವಿಶ್ವಶ್ಚಾಸೌ ಗುರುಶ್ಚ ವಿಶ್ವಗುರುಃ)** ಎಂಬ ಅರ್ಥವೂ ವಿಶ್ವೇಶನಾಮದಿಂದ ಹೊರಡಬಲ್ಲದು.

* ವಿಶ್ವ ಎಂದರೆ ಎಲ್ಲರೊಳಗೆ ಪ್ರೇರಕನಾಗಿ ಪ್ರವೇಶಿಸಿರುವ ಭಗವಂತ ಎಂಬ ಅರ್ಥ. ಹಾಗೆಯೇ ವಾಯುದೇವ ಎಂಬ ಅರ್ಥ, ಅಂತಹ ವಿಶ್ವನಾಮಕ ಭಗವಂತನೂ, ವಾಯುದೇವನೂ ಯಾರಿಗೆ ಈಶನಾಗಿರುವನೋ, ಕ್ಷಣಕ್ಷಣಕ್ಕೂ ಹೆಜ್ಜೆಹೆಜ್ಜೆಗೂ ನನಗೆ ಭಗವಂತ, ವಾಯುದೇವ ಒಡೆಯ ಎಂದು ಯಾರು ಭಾವಿಸುತ್ತಿರುವರೋ **(ವಿಶ್ವಃ ಭಗವಾನ್ ವಾಯುಶ್ಚ ಈಶಃ ಯಸ್ಯ ಸಃ)** ಅಂತಹವರು ವಿಶ್ವೇಶರು.

ಹೀಗೆ ವಿಶ್ವೇಶ ಎಂಬ ಹೆಸರು ಶ್ರೀಪಾದರ ವ್ಯಕ್ತಿತ್ವದ ಅನೇಕ ಮುಖಗಳನ್ನು ಬೆಳಗಿಸಬಲ್ಲದು.

**ಇಷ್ಟದಂ:**

ತಮ್ಮ ಗುರುಗಳಾದ ಶ್ರೀಶ್ರೀ ವಿದ್ಯಾಮಾನ್ಯತೀರ್ಥರಿಗೆ ಇಷ್ಟವಾಗಿದ್ದ ಪೊಡವಿಗೊಡೆಯನನ್ನು ಪೂಜಿಸುವಿಕೆಯನ್ನು ನೀಡಿದವರು. (ಇಷ್ಟಂ ದದಾತೀತಿ) ಅಷ್ಟೇ ಅಲ್ಲದೆ, ಅದಕ್ಕೆ ಯಾವುದೇ ಕಾನೂನು ಮುಂತಾದವುಗಳಿಂದ ತೊಂದರೆ ಬರದೆ ಅದು ಎರಡು ಪರ್ಯಾಯಾವಧಿಗಳಲ್ಲೂ ಇರುವಂತೆ ರಕ್ಷಿಸಿದವರು. (**ಇಷ್ಟಂ ದಯತೇ ರಕ್ಷತೀತಿ ಇಷ್ಟದಃ, ದೇಙ ರಕ್ಷಣೇ**)

**'ಗುರುದ್ವಾರಾ ಪ್ರಸಾದಕೃದಹಂ...'** -ಎಂದು ಭಗವಂತನೇ ಸಾರಿರುವಂತೆ ಶಿಷ್ಯರಿಗೆ, ಭಕ್ತರಿಗೆ ಇಷ್ಟವಾದ ಭಗವಂತನ ಅನುಗ್ರಹವನ್ನು ನೀಡುವವರು,

**'ಶುಭಾನ್ ಧ್ಯಾಯಂತಿ ಯೇ ಕಾಮಾನ್ ಗುರುದೇವಪ್ರಸಾದಜಾನ್...'** ಎಂದು ತಂತ್ರಸಾರಸಂಗ್ರಹದಲ್ಲಿ ತಿಳಿಸಿರುವಂತೆ ಶಿಷ್ಯರ ಶುಭಕಾಮಗಳು ಸಿದ್ಧಿಸುವಂತೆ ಅನುಗ್ರಹಿಸುವವರು.

**'ಫಲಮತ ಉಪಪತ್ತೇಃ'** –ಎಂಬ ಬ್ರಹ್ಮಸೂತ್ರ ಸಿದ್ಧಾಂತಿಸಿರುವಂತೆ ಯಾವುದೇ ಫಲ ಕರ್ಮಾಧ್ಯಕ್ಷನಾದ ಸ್ವಂತತ್ರನಾದ ಭಗವಂತನಿಂದಲೇ ದೊರಕುವುದಾದರೂ ಅಂತಹ ಭಗವಂತನಲ್ಲಿ ಶಿಷ್ಯರ ಬಗ್ಗೆ ಶಿಫಾರಸು ಮಾಡಿ ಅವನ ಮೂಲಕ ಇಷ್ಟಗಳು ಈಡೇರುವಂತೆ ಮಾಡುವವರು ಎಂಬ ಆಶಯ.

## ಪರಿವ್ರಾಟ್ ಚಕ್ರವರ್ತಿನಮ್:

ಪಲಿಮಾರು ಮಠದ ಶ್ರೀ ವಿದ್ಯಾಧೀಶತೀರ್ಥರು ತಮ್ಮ ದ್ವಿತೀಯ ಪರ್ಯಾಯದ ದರ್ಬಾರಿನಲ್ಲಿ (18–1–2018) ಇತರ ಅಷ್ಟಮಠಾಧೀಶರಿಂದೊಡಗೂಡಿ **'ಯತಿಕುಲಚಕ್ರವರ್ತಿ'**– ಎಂಬ ಬಿರುದನ್ನು ಶ್ರೀಪಾದರಿಗೆ ನೀಡಿದ್ದರು. ಇದು ಬರೇ ವಿದ್ಯಾಧೀಶತೀರ್ಥರಲ್ಲ; ಅವರಲ್ಲಿ ವಿಶೇಷವಾಗಿ ಸನ್ನಿಹಿತರಾಗಿದ್ದ ಶ್ರೀಮದಾಚಾರ್ಯರೇ ಪಂಚಮ ಪರ್ಯಾಯಾವಧಿಯಲ್ಲಿ ಶ್ರೀಕೃಷ್ಣನನ್ನು ಚೆನ್ನಾಗಿ ಆರಾಧಿಸಿ ಯಶಸ್ವಿಗಳಾಗಿದ್ದ ಶ್ರೀಪಾದರಿಗೆ ನೀಡಿದ್ದ ಪ್ರಶಸ್ತಿ, ಆ ಪ್ರಶಸ್ತಿಯ ನೆನಪು ಬರುವಂತೆ **'ಪರಿವ್ರಾಟ್‌ಚಕ್ರವರ್ತಿನಮ್'**– ಪಂಚಮ ಪರ್ಯಾಯವನ್ನು ಯಶಸ್ವಿಯಾಗಿ ಪೂರೈಸಿರುವುದರಲ್ಲಷ್ಟೇ ಅಲ್ಲದೆ, **'ಪರಿವ್ರಾಟ್'** ಎನಿಸಲು ಬೇಕಾದ ಪ್ರತಿಯೊಂದು ಅರ್ಹತೆಯ ವಿಷಯದಲ್ಲೂ ಚಕ್ರವರ್ತಿಗಳಾಗಿರುವವರು, ಶ್ರೇಷ್ಠರಾಗಿರುವವರು. **'ಪರಿವ್ರಾಟ್'** –ಎಂಬ ಶಬ್ದವನ್ನು ಉಲ್ಲೇಖಿಸುವ ಮೂಲಕ ಯತಿಗಳ ಧರ್ಮವಾಗಿ ತಿಳಿಸಿದ ಸದಾ ಸಂಚಾರ (**ಪರಿತಃ ವ್ರಜತೀತಿ ಪರಿವ್ರಾಟ್**) ನಡೆಸುತ್ತಿದ್ದವರೆಂದು ಶ್ರೀಪಾದರ ಸಂಚಾರದ ವೈಭವವನ್ನು ಸೂಚಿಸಲಾಗಿದೆ.

## ವಂದೇ:

ನಮಿಸುವೆನು; ಸ್ತುತಿಸುವೆನು (ವದೀ **ಅಭಿವಾದನಸ್ತುತ್ಯೋಃ**) ಶ್ರೀಪಾದರ ಆರಾಧ್ಯರಾಗಿದ್ದ ಪೊಡವಿಗೊಡೆಯನ, ಅಜವಿಟ್ಠಲನ, ಹಾಗೂ

ಕಣ್ವಮುನಿಪೂಜಿತ ರಾಮಚಂದ್ರನ ಅನುಗ್ರಹಕ್ಕೆ ಪಾತ್ರರನ್ನಾಗಿ, ಪ್ರತಿಬಿಂಬರನ್ನಾಗಿ ನಮಿಸುವೆನು; ಹಿಂದೆ ತಿಳಿಸಿದ ನಾಲ್ಕು ವಿಶೇಷಣಗಳಿಂದ, ವಿಶ್ವೇಶ ಎಂಬ ವಿಶೇಷದಿಂದ ಶ್ರೀಪಾದರನ್ನು ಸ್ತುತಿಸುವೆನು.

## ಹೂರಣವನ್ನು ಬೆರೆಸಿ ಸುತ್ತಿಸೋಣ:

ಆದ್ದರಿಂದ ಶ್ರೀಪಾದರ ಕುರಿತಾದ ಚರಮ ಶ್ಲೋಕದ ಪ್ರತಿಯೊಂದು ಪದದಲ್ಲೂ ಅಡಗಿದ ಪ್ರಮೇಯವಿಶೇಷ ರೂಪವಾದ ಹೂರಣವನ್ನು ಗುರುತಿಸಿ, ಅಂತಹ ಹೂರಣವನ್ನು ಬೆರೆಸಿ ಸ್ತುತಿಸೋಣ.

**– ಸಗ್ರಿ ರಾಘವೇಂದ್ರ ಉಪಾಧ್ಯಾಯ**

* * * *

## ದುರಿತದೇವತೆಯ ಚಮತ್ಕಾರ

ಪೇಜಾವರ ಶ್ರೀಪಾದರ ಹಿಂದಿನ (ನಾಲ್ಕನೆಯ) ಪರ್ಯಾಯದಲ್ಲಿ ಪಲಿಮಾರು ಮಠದ ಶ್ರೀವಿದ್ಯಾಮಾನ್ಯತೀರ್ಥರು ವೃಂದಾವನಸ್ಥರಾದರು. ಶ್ರೀಪಲಿಮಾರು ಸ್ವಾಮಿಗಳ ಎರಡನೆಯ ಪರ್ಯಾಯದಲ್ಲಿ ಪೇಜಾವರದ ಶ್ರೀವಿಶ್ವೇಶತೀರ್ಥರು ವೃಂದಾವನಸ್ಥರಾದರು. ಈ ಮೂಲಕ ದುರಿತ ದೇವತೆಯಾದ ನರಸಿಂಹ ಆ ಎರಡು ಮಠಗಳೊಳಗಿರುವ ಅನ್ಯೋನ್ಯತೆಯನ್ನು ಸೂಚಿಸಿದಂತಿದೆ.

* * * *







ತಸ್ಮಿನ್ನಪೋ ಮಾತರಿಶ್ವಾ ದಧಾತಿ

